# ಶ್ರೀ ಜಯತೀರ್ಥರು

(ಜೀವನ ಚರಿತ್ರೆ)



ನ ಮಾಧವಸಮೋ ದೇವೋ ನ ಚ ಮಧ್ವಸಮೋ ಗುರುಃ ।
ನ ತದ್ವಾಕ್ಯಸಮಂ ಶಾಸ್ತ್ರಂ ನ ಚ ತಸ್ಯ ಸಮಃ ಪುಮಾನ್ ॥



ಲೇಖಕ :
ಕೊರಟಿ ಶ್ರೀನಿವಾಸರಾವ್, ಎಂ.ಎ., ಬಿ.ಕಾಂ.



ಆನಂದನಿಲಯ ಪ್ರಕಾಶನ
ಸಮೀರಪುರಂ ವಿಸ್ತರಣೆ, ಚಾಮರಾಜಪೇಟೆ ಪಶ್ಚಿಮ
ಬೆಂಗಳೂರು ೫೬೦೦೧೮

*Name of the Book* : Sri Jayathirtharu

*Author* : Korati Srinivasa Rao

*Publisher* : Anandanilaya Prakashana
22/12, Samirapuram Extension,
Chamarajapet West, Bangalore-560018.

*Year of Publication* : 1978

*No. of Pages* : 400 + 16




**Price : Rs. 12-00**

*Cover Design* : B. Krishan

*Printers*

M/s. Anandanilaya Printers
No. 2, Vinayaka Extension
Gavipuram Raod, Kempegowdanagara
Bangalore-560019.

# ಅ ರಿ ಕೆ

ಮಾಧ್ವವಾಙ್ಮಯವೆಂಬ ಆಕಾಶದಲ್ಲಿ ಇಂದ್ರಾಂಶಸಂಭೂತರಾದ ಶ್ರೀ ಜಯತೀರ್ಥರು ಜಾಜ್ವಲ್ಯಮಾನವಾಗಿ ಬೆಳಗುವ ತಾರಾಪತಿಯಾಗಿದ್ದಾರೆ. ಇವರು ಇಂದ್ರಾಂಶರೆಂಬ ಸಂಗತಿಯನ್ನು ತಮ್ಮ ಜೀವನದಲ್ಲಿ ಅತಿಲೌಕಿಕವಾಗಿ ಹೆಜ್ಜೆ ಹೆಜ್ಜೆಗೂ ತೋರಿಸಿಕೊಟ್ಟು ತಾವು ಶ್ರೀಹರಿವಾಯುಗಳ ಸೇವೆಯನ್ನು ಶ್ರೇಷ್ಠ ರೀತಿಯಲ್ಲಿ ಮಾಡಿದ ಪುಣ್ಯಪುರುಷರು. ಇವರು ಜೀವಿಸಿದ್ದು ಅಲ್ಪ ಕಾಲ. ಇದರಲ್ಲಿ ಬಾಲ್ಯ ಯೌವನಗಳಲ್ಲಿ ಇಪ್ಪತ್ತು ವರ್ಷಗಳು ಕಳೆದವು. ಉಳಿದ 22 ವರ್ಷಗಳ ಕಾಲ ಅವರು ಯರಗೊಳದ ಗುಹೆಯಲ್ಲಿ ಕುಳಿತು ಶ್ರೀ ಮಧ್ವಾ ಚಾರ್ಯರ ಸರ್ವಮೂಲ ಗ್ರಂಥಗಳಿಗೆ ಶ್ರೇಷ್ಠವಾದ ವ್ಯಾಖ್ಯಾನ ಮಾಲೆಯನ್ನು ರಚಿಸಿದರು. ಆ ಮೂಲಕ ಟೀಕಾಕೃತ್ಪಾದರೆಂದು ಅವರು ಸಕಲ ಮಾಧ್ವರಿಂದಲೂ ಸ್ತುತಿಸಲ್ಪಟ್ಟಿರುತ್ತಾರೆ. ಜಯತೀರ್ಥರು ನಿರ್ಯಾಣ ಹೊಂದಿ ಇಂದಿಗೆ ಸುಮಾರು ಐದುನೂರು ಐವತ್ತು ಸಂವತ್ಸರಗಳು ಕಳೆದಿದ್ದರೂ ಅವರು ತಮ್ಮ ಯಶಃಶರೀರ ದಿಂದ ಈಗಲೂ ಜೀವಂತ ಇದ್ದಾರೆ. ಜಗತ್ತಿನ ಸಂಸ್ಕೃತ ವಾಙ್ಮಯದ ಇತಿಹಾಸ ದಲ್ಲಿ ಅವರ ಶ್ರೀಮನ್ನ್ಯಾಯಸುಧಾ ಗ್ರಂಥವು ಧ್ರುವತಾರೆಯಂತೆ ಬೆಳಗುತ್ತಿದೆ. ಸಂಸ್ಕೃತ ಸಾಹಿತ್ಯ ಉಳಿಯುವವರೆಗೆ ಕಾವ್ಯಪ್ರಪಂಚದಲ್ಲಿ ರಾಮಾಯಣ ಮಹಾ ಭಾರತಗಳನ್ನು ಕಾವ್ಯರಸಿಕರು ಸ್ಮರಿಸುವಂತೆ, ಆಧ್ಯಾತ್ಮ ಪ್ರಪಂಚದಲ್ಲಿ ದರ್ಶನ ಕಾವ್ಯವಾಗಿ, ಶ್ರೀಕರಗ್ರಂಥವಾಗಿ, ಜಯತೀರ್ಥರ ಶ್ರೀಮನ್ನ್ಯಾಯಸುಧಾ ಗ್ರಂಥ ವನ್ನು ಎಲ್ಲ ಸಜ್ಜನರೂ ಕೃತಜ್ಞತೆಯಿಂದ ಸ್ಮರಿಸುತ್ತಾರೆ.

ಇಂಥ ಜ್ಞಾನಕಾರ್ಯದಲ್ಲಿ 22 ವರ್ಷಗಳ ಕಾಲ ತೊಡಗಿ ನಲವತ್ತು ಮೂರರ ಹರೆಯದಲ್ಲಿಯೇ ಹರಿಪಾದಾರವಿಂದವನ್ನು ಸೇರಿದ ಶ್ರೀ ಜಯತೀರ್ಥರ ಜೀವನವು ಅದ್ಭುತ ರೋಮಾಂಚಕಾರಕ ಕಾದಂಬರಿಯಂತೆ ಕುತೂಹಲಪೂರ್ಣ ವಾಗಿದೆ. ಅವರ ಕಾಲದಲ್ಲೇ ಇವರ ಜೀವನ ಚರಿತ್ರೆಯನ್ನು ಬರೆದ ಅವರಸಾಕ್ಷಾ ಚ್ಛಿಷ್ಯರಾದ ವ್ಯಾಸತೀರ್ಥರೇ "ಜಯತೀರ್ಥಪೂಜ್ಯಚರಣರ ಚಿತ್ರವಿಚಿತ್ರವಾದ ವಾದಿವಿಜಯ ಮತ್ತು ಚರಿತ್ರೆಯನ್ನು ಯಾರಿಂದಲೂ ವರ್ಣಿಸಲು ಸಾಧ್ಯವಿಲ್ಲ" ಎಂದು ಉದ್ಗಾರ ತೆಗೆದಿರುವವರು ಎಂದಮೇಲೆ ಉಳಿದವರ ಮಾತೇನು?

ಜಯತೀರ್ಥರ ರಮಣೀಯ ಜೀವನ ಚರಿತ್ರೆಯನ್ನು ಇದುವರೆಗೆ ಅನೇಕ ವಿದ್ವಾಂಸರು ಬರೆದಿದ್ದಾರೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಉಲ್ಲೇಖಿಸಿದೆ.

1) ಶ್ರೀ ವ್ಯಾಸತೀರ್ಥರು ರಚಿಸಿರುವ ಶ್ರೀ ಜಯತೀರ್ಥವಿಜಯ. (ಬೃಹತ್ ಮತ್ತು ಲಘು ಕೃತಿಗಳು)

2) ಶ್ರೀ ಛಲಾರಿ ಸಂಕರ್ಷಣಾಚಾರ್ಯರಿಂದ ರಚಿತವಾದ ಶ್ರೀ ಬೃಹಜ್ಜಯತೀರ್ಥವಿಜಯ.

4) ಶ್ರೀ ಕೃಷ್ಣ ಕವಿಯಿಂದ ರಚಿತವಾದ ಜಯತೀರ್ಥವಿಜಯ.

5) ಕರ್ಕಿಹಳ್ಳಿ ಶ್ರೀನಿವಾಸಾಚಾರ್ಯರಿಂದ ರಚಿತವಾದ ಜಯೀಂದ್ರೋದಯ.

6) ಶ್ರೀ ರಘುದಾಂತ ಶ್ರೀಪಾದಂಗಳಿಂದ ರಚಿತವಾದ ಶ್ರೀ ಜಯತೀರ್ಥ ವಿಜಯ.

7) ಶ್ರೀ ಸತ್ಯಪ್ರಿಯತೀರ್ಥ ವಿರಚಿತ ಶ್ರೀ ಜಯತೀರ್ಥ ಸ್ತುತಿ.

8) ಅನವಟ್ಟಿ ರಾಮರಾಯರಿಂದ ರಚಿಸಲ್ಪಟ್ಟ ಶ್ರೀ ಟೀಕಾಚಾರ್ಯರ ಚರಿತ್ರೆ.

9) ಆರ್.ಎಸ್. ಶೇಷಗಿರಿರಾಯರು ಬರೆದ ಶ್ರೀ ಜಯತೀರ್ಥರ ಚರಿತ್ರೆ ಮತ್ತು ಗ್ರಂಥಗಳ ಪರಿಚಯ.

10) ಚಿಕ್ಕೇರೂರು ಗೋವಿಂದಾಚಾರ್ಯರು ಬರೆದಿರುವ ಶ್ರೀ ಜಯತೀರ್ಥ ಚರಿತಾಮೃತಂ.

11) ನಾ.ಶ್ರೀ. ರಾಜಪುರೋಹಿತರು ಬರೆದಿರುವ ಶ್ರೀ ಮಧ್ವಾಚಾರ್ಯರು ಮತ್ತು ಶ್ರೀ ಜಯತೀರ್ಥರು.

12) ಶ್ರೀ ಪಂಢರಿನಾಥಾಚಾರ್ಯ ಗಲಗಲಿ ಅವರು ಸಂಗ್ರಹಿಸಿರುವ ಮಾಧ್ವ ವಾಙ್ಮಯ ತಪಸ್ವಿಗಳು. (ಗ್ರಂಥದಲ್ಲಿ ಬಂದಿರುವ ಜಯತೀರ್ಥರನ್ನು ಕುರಿತ ವಿಸ್ತಾರವಾದ ಲೇಖನ). ಈ ಎಲ್ಲ ಕೃತಿಗಳಿಂದ ಜಯತೀರ್ಥರ ಜೀವನ ಚರಿತ್ರೆಯನ್ನು ತಿಳಿಯಬಹುದು. ಇಷ್ಟಾದರೂ ಜಯತೀರ್ಥರ ಬಾಲ್ಯ, ಬೆಳೆದ ಪರಿಸರ, ಸನ್ಯಾಸ ಸ್ವೀಕರಿಸಿದ ಹಿನ್ನಲೆ, ಅವರ ದಿಗ್ವಿಜಯ—ಮುಂತಾದ ಸಂಗತಿಗಳು ಇನ್ನೂ ಇತಿಹಾಸದ ಕತ್ತಲೆಯಲ್ಲೇ ಅಡಗಿವೆ. ಈ 'ಜಯತೀರ್ಥರು' ಗ್ರಂಥದಲ್ಲಿ ನಾನು ಹಲವುಕಡೆ ಚದುರಿದ್ದ ಇತಿಹಾಸದ ಹಲವಾರು ಎಳೆಗಳನ್ನು ಒಟ್ಟಾಗಿ ಸೇರಿಸಿ, ಒಂದು ಸುಂದರವಾದ ಚಿತ್ರವನ್ನು ನೆಯ್ದು, ಅದನ್ನು ಸಜ್ಜನರಿಗೆ ಅರ್ಪಿಸಿದ್ದೇನೆ. ಇದಿಷ್ಟೇ ನಾನು ಇಲ್ಲಿ ಮಾಡಿರುವ ಕೆಲಸ. ಈ ಕಾರ್ಯದಲ್ಲಿ ಹಲವಾರು ನ್ಯೂನತೆಗಳು ಉಳಿದುಕೊಂಡಿರುವುದು ನನಗೆ ತಿಳಿದಿದೆ. ಇದರಲ್ಲಿನ

ಒಳ್ಳೆಯ ಅಂಶಗಳನ್ನು ಮಾತ್ರ ಸ್ವೀಕರಿಸಿ, ದೋಷಗಳನ್ನೂ, ಕುಂದು ಕೊರತೆಗಳನ್ನೂ ಉದಾರವಾಗಿ ಕ್ಷಮಿಸಬೇಕೆಂದು ಪ್ರಾಜ್ಞರಲ್ಲಿ ವಿನಮ್ರ ಪ್ರಾರ್ಥನೆ.

ಈ ಕೃತಿಯನ್ನು ರಚಿಸಲು ನನಗೆ ಬೇಕಾದ ಧೈರ್ಯ ತುಂಬಿ, ಮಾರ್ಗದರ್ಶನ ಮಾಡಿದವರು ನನ್ನ ಪಾಲಿಗೆ ಅನಿಮಿತ್ತ ಬಂಧುಗಳೂ, ಗುರುಸ್ಥಾನದಲ್ಲಿ ನಿಂತವರೂ ಆದ ಶ್ರೀ ಗೌಡಗೆರೆ ಗೋಪಾಲಕೃಷ್ಣಾಚಾರ್ಯರು. ಅವರು ನನ್ನ ಪಾಲಿಗೆ ಒಂದು ವಜ್ರಕವಚವಾಗಿದ್ದಾರೆ. ನಾನು ತಪ್ಪು ಮಾಡಿದಾಗ ತಿದ್ದಿದ್ದಾರೆ. ವಿಷಯಗಳ ಕೊರತೆ ಬಿದ್ದಾಗ ತುಂಬಿದ್ದಾರೆ. ಅವರೊಡನೆ ನಡೆಸಿದ ಚರ್ಚೆಗಳು ಉದ್ಬೋಧಕ ರಸನಿಮಿಷಗಳು. ಈ ಕೃತಿಯನ್ನು ಅವರು ಹಸ್ತಪ್ರತಿಯಿಂದ ಆರಂಭಿಸಿ ಗ್ರಂಥವು ಅಚ್ಚಿನ ಮನೆಯಿಂದ ಹೊರಗೆ ಬರುವವರೆಗೆ ಸಹನೆಯಿಂದ ತಿದ್ದಿದ್ದಾರೆ. ಜಯತೀರ್ಥರ ಗ್ರಂಥಗಳ ಪರಿಚಯವನ್ನು ಸಿದ್ಧಪಡಿಸುವ ಕಾರ್ಯದಲ್ಲೂ ಅವರು ವಿಶೇಷವಾಗಿ ನೆರವಾಗಿದ್ದಾರೆ. ಈ ಕೃತಿ ಅಚ್ಚಿನ ಮನೆಯಲ್ಲಿದ್ದಾಗ ಅವರಿಗೆ ವೈಯುಕ್ತಿಕ ಜೀವನದಲ್ಲಿ ಪತ್ನೀವಿಯೋಗದ ದುಃಖ ಆವರಿಸಿದರೂ ಅವರು ಈ ಕಾರ್ಯವನ್ನು ಕೈ ಬಿಡದೆ ಹರಿವಾಯುಗಳ ಸೇವೆ ಎಂಬಂತೆ ಶ್ರದ್ಧೆಯಿಂದ ಪಾಲಿಸಿದ್ದಾರೆ. ಈ ಕೃತಿಯನ್ನು ಅವರಿಗೂ ಅವರ ದಿವಂಗತ ಸಹಧರ್ಮಿಣಿ ರುಕ್ಮಿಣಮ್ಮನವರಿಗೂ ಭಕ್ತಿಗೌರವಗಳಿಂದ ಅರ್ಪಿಸಿದ್ದೇನೆ.

ಈ ಗ್ರಂಥ ರಚನೆಗೆ ನಾನು ಹಲವು ಗ್ರಂಥಗಳಿಂದ ನೆರವನ್ನು ಪಡೆದಿದ್ದೇನೆ. ಮುಖ್ಯವಾಗಿ ದ್ವೈತಮತದ ಕಿರುಪರಿಚಯದ ಭಾಗವನ್ನು ಸುಪ್ರಸಿದ್ಧ ವಿದ್ವಾಂಸರಾದ ಶ್ರೀ ಪಂಢರಿನಾಥಾಚಾರ್ಯ ಗಲಗಲಿ ಅವರು ಸಂಗ್ರಹಿಸಿರುವ 'ಮಾಧ್ವ ವಾಙ್ಮಯ ತಪಸ್ವಿಗಳು' ಎಂಬ ಗ್ರಂಥದಿಂದ ಸಂಗ್ರಹಿಸಿದ್ದೇನೆ. ಅದನ್ನು ಉಪಯೋಗಿಸಿಕೊಳ್ಳಲು ಅನುಮತಿಯನ್ನು ನೀಡಿದ ಆ ಲೇಖಕರಿಗೂ, ಪ್ರಕಾಶಕರಿಗೂ ನಾನು ಆಭಾರಿಯಾಗಿದ್ದೇನೆ. ಅದರಂತೆ ಉಳಿದ ಗ್ರಂಥಕಾರರಿಂದ ನಾನು ಪಡೆದ ಸಹಾಯ ಅಲ್ಪವಲ್ಲ. ಅವರ ಋಣವನ್ನು ನಾನು ಬೇರೆಡೆ ಕೃತಜ್ಞತೆಯಿಂದ ಸ್ಮರಿಸಿದ್ದೇನೆ. ಈ ಗ್ರಂಥದ ಹಸ್ತಪ್ರತಿಯನ್ನು ಸಿದ್ಧಪಡಿಸಿಕೊಟ್ಟ ಮಾನ್ಯ ಮಿತ್ರರಾದ ಕೆ. ಆರ್. ಗಣೇಶ್ ಅವರಿಗೆ ನನ್ನ ವಂದನೆಗಳು.

ಈ ಕೃತಿಯೊಂದಿಗೆ ಅಚ್ಚಿನಲ್ಲಿರುವ ಶ್ರೀ ವಾದಿರಾಜರು ಬಹುವಿಷಯ ಗರ್ಭಿತವಾದ ಸಂಪುಟವು (ಸುಮಾರು ೬೦೦ ಪುಟಗಳು) ಪ್ರಕಟವಾದರೆ ಅಲ್ಲಿಗೆ ಆಚಾರ್ಯ ಋಣವು ಕಿಂಚಿತ್ತಾದರೂ ತೀರಿದಂತೆ ಭಾವಿಸುತ್ತೇನೆ.

ಸೇವಾ ದೃಷ್ಟಿಯಿಂದಲೇ ಮಾಡಿರುವ ಈ ನನ್ನ ಕಾರ್ಯದಿಂದ ಸ್ವರೂ ಪೋದ್ಧಾರಕರಾದ ಶ್ರೀಹರಿವಾಯುಗಳು ಪ್ರೀತರಾಗಲಿ ಎಂದು ಶ್ರದ್ಧಾಪೂರ್ವಕ ವಾಗಿ ಪ್ರಾರ್ಥಿಸುತ್ತೇನೆ. ಬೆಂಗಳೂರಿನ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ಇತ್ತೀ ಚೆಗೆ ಬಹಳ ವೈಭವದಿಂದ ನಡೆದ ಅಖಿಲ ಭಾರತ ಮಾಧ್ವ ಮಹಾಮಂಡಳದ ರಜತಮಹೋತ್ಸವದ ಸಂದರ್ಭದಲ್ಲಿ, ಶ್ರೀಮನ್ಮಧ್ವ ನವಮಿ ಪುಣ್ಯದಿನದಂದು ಪೇಜಾವರಮಠಾಧೀಶರಾದ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು ಈ ಕೃತಿ ಯನ್ನು ಬಿಡುಗಡೆ ಮಾಡಿದ್ದಾರೆ. ಅವರಿಗೆ ನನ್ನ ಕೃತಜ್ಞತಾಪೂರ್ವಕ ನಮಸ್ಕಾರಗಳು.

ಬ್ರಹ್ಮಾಂತಾ ಗುರವಸ್ಸಾಕ್ಷಾದಿಷ್ಟಂ ದೈವಂ ಶ್ರಿಯಃಪತಿಃ |
ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ ||

16-2-1978
ಬೆಂಗಳೂರು - ೧೮

ಕೊರಟ ಶ್ರೀನಿವಾಸರಾವ್

# ಮುನ್ನುಡಿ

ಮಿಥ್ಯಾಸಿದ್ಧಾಂತದುರ್ಧ್ವಾಂತವಿಧ್ವಂಸನವಿಚಕ್ಷಣಃ ।
ಜಯತೀರ್ಥಾಖ್ಯತರಣಿರ್ಭಾಸತಾಂ ನೋ ಹೃದಂಬರೇ ॥
ಚಿತ್ರೈಃ ಪದೈಶ್ಚ ಗಂಭೀರೈರ್ವಾಕ್ಯೈರ್ಮಾನೈರಖಂಡಿತೈಃ ।
ಗುರುಭಾವಂ ವ್ಯಂಜಯಂತೀ ಭಾತಿ ಶ್ರೀಜಯತೀರ್ಥವಾಕ್ ॥
ಆನಂದತೀರ್ಥೋಪದಿಷ್ಟೋ ನಿಧಿರ್ನಾರಾಯಣಾಹ್ವಯಃ ।
ಪ್ರದರ್ಶಿತೋ ಯೇನ ಸಮ್ಯಗ್ಜಯತೀರ್ಥಂ ತಮಾಶ್ರಯೇ ॥

ಶ್ರೀಮನ್ಮಧ್ವಾಚಾರ್ಯರ (ಕ್ರಿ. ಶ. 1238-1317) ಸಮಕಾಲೀನರೂ, ವಾದದಲ್ಲಿ ಅವರಿಂದ ಪರಾಜಿತರಾಗಿ, ಅವರ ಸಾಕ್ಷಾಚ್ಛಿಷ್ಯರೂ ಆದ ತ್ರಿವಿಕ್ರಮ ಪಂಡಿತಾಚಾರ್ಯರ (ಕ್ರಿ. ಶ. 1258—1320) ಸುಪುತ್ರರಾದ ನಾರಾಯಣ ಪಂಡಿತಾಚಾರ್ಯರು, ತಮ್ಮಿಂದ ರಚಿತವಾಗಿರುವ ಆನಂದಾಂಕ ಶ್ರೀಮತ್ಸುಮಧ್ವವಿಜಯ ಮಹಾಕಾವ್ಯದ ಆರಂಭದಲ್ಲಿಯೇ "ಕಿಂತೂತ್ತಮಶ್ಲೋಕ ಶಿಖಾಮಣೀನಾಂ ಮನೋ ವಿಶುದ್ಧ್ಯೈ ಚರಿತಾನುವಾದಃ" ಎಂದು ಹೇಳಿದ್ದಾರೆ. ಮಹಾನುಭಾವರ ಜೀವನ ಚರಿತಾನುವಾದವು ಗ್ರಂಥಕರ್ತೃವಿನ ಮತ್ತು ಓದುಗರ ಮನಃಶುದ್ಧಿಗಾಗಿ ಮಾತ್ರ. ಈ ನ್ಯಾಯವನ್ನು ಅನುಸರಿಸಿಯೇ ಗ್ರಂಥಕಾರರು ಮಹಾನುಭಾವರ ಜೀವನ ಚರಿತ್ರೆಗಳನ್ನು ಸಂಕ್ಷೇಪವಾಗಿಯೂ, ವಿಸ್ತಾರವಾಗಿಯೂ ರಚಿಸಿದ್ದಾರೆ.

ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಚಿರಪರಿಚಿತರೂ, ಬಹು ಭಾಷಾತಜ್ಞರೂ, ಸ್ವಯಂ ಬೋಧನ ವೃತ್ತಿಯಲ್ಲಿ ನಿರತರೂ ಆಗಿರುವ ಶ್ರೀಮಾನ್ ಕೊರಟಿ ಶ್ರೀನಿವಾಸರಾಯರು ಈಚೆಗೆ ಅಧ್ಯಾತ್ಮವಿಷಯಗರ್ಭಿತವಾದ ಶ್ರೀ ಮಧ್ವಾಚಾರ್ಯರು, ಶ್ರೀ ವ್ಯಾಸರಾಯರು, ಶ್ರೀ ರಾಘವೇಂದ್ರಸ್ವಾಮಿಗಳು ಎಂಬ ಕೃತಿರತ್ನಗಳನ್ನು ರಚಿಸಿ ಭಕ್ತವೃಂದಕ್ಕೆ ಉಪಕಾರ ಮಾಡಿರುತ್ತಾರೆ. ಈ ಗ್ರಂಥಗಳು ಮಹಾಜನರಿಂದ ಆದರಪೂರ್ವಕವಾಗಿ ಸ್ವೀಕರಿಸಲ್ಪಟ್ಟು ಪುನರ್ಮುದ್ರಣ ಘಟ್ಟವನ್ನೂ ಮುಟ್ಟಿವೆ.

ಶ್ರೀಮಜ್ಜಯತೀರ್ಥಪೂಜ್ಯಚರಣರ ಕಾಲ ಕ್ರಿ. ಶ. 1365—1388. ಈ ಮಹಾನುಭಾವರ ಜೀವನ ಚರಿತ್ರೆಯನ್ನು ಅವರ ಸಾಕ್ಷಾಚ್ಛಿಷ್ಯರಾದ ಶ್ರೀ

ವ್ಯಾಸತೀರ್ಥರಿಂದ (ಕ್ರಿ. ಶ 1370—1403) ಪ್ರಾರಂಭಿಸಿ ಇಂದಿನವರೆಗೂ ಅನೇಕ ವಿದ್ವಾಂಸರು ಅನೇಕ ಭಾಷೆಗಳಲ್ಲಿ ರಚಿಸಿರುತ್ತಾರೆ. ಇವುಗಳ ಪೈಕಿ ಶ್ರೀ ವ್ಯಾಸತೀರ್ಥರು ಅಣು ಜಯತೀರ್ಥವಿಜಯ (34 ಶ್ಲೋಕಗಳು) ಮತ್ತು ಜಯ ತೀರ್ಥವಿಜಯ (5 ಸರ್ಗಗಳು) ಎಂಬ ಯಥಾರ್ಥವಿಷಯಬೋಧಕವಾದ ಗ್ರಂಥರತ್ನಗಳನ್ನು ರಚಿಸಿರುತ್ತಾರೆ. ಅಣುಜಯತೀರ್ಥವಿಜಯವು 34 ಶ್ಲೋಕ ಗಳಿಂದ ಕೂಡಿದೆ. ಅದರಲ್ಲಿ ಜಯತೀರ್ಥರು ಆಸೇತು ಹಿಮಾಚಲಪರ್ಯಂತ ವಾಗಿ ಭರತಖಂಡದ ಸಕಲ ದುರ್ವಾದಿಗಳನ್ನು ಪರಾಭವಗೊಳಿಸಿ ಜಯಪತ್ರಿಕೆ ಗಳನ್ನು ಪಡೆದು ಅವನ್ನು ತಮ್ಮ ವಿದ್ಯಾ ಮತ್ತು ಆಶ್ರಮ ಗುರುಗಳಾದ ಶ್ರೀ ಮದಕ್ಷೋಭ್ಯತೀರ್ಥರ ಬೃಂದಾವನಕ್ಕೆ ಸಮರ್ಪಿಸದನಂತರ ತೀರ್ಥಕ್ಷೇತ್ರ ದರ್ಶನ ವ್ಯಾಜದಿಂದ, ಅಸಿ, ವರುಣ ಮತ್ತು ಗಂಗಾ ನದಿಗಳ ತ್ರಿವೇಣಿ ಸಂಗಮದಲ್ಲಿನ ಕಾಶಿ ಕ್ಷೇತ್ರಕ್ಕೆ ಬಂದು ಅಲ್ಲಿ ವಿದ್ಯಾಧಿರಾಜರನ್ನು ತಮ್ಮ ಉತ್ತರಾಧಿಕಾರಿಗಳ ನ್ನಾಗಿ ಸರ್ವಜ್ಞಸಿಂಹಾಸನದಲ್ಲಿ ವಿಧ್ಯುಕ್ತವಾಗಿ ಪಟ್ಟಾಭಿಷಿಕ್ತರನ್ನಾಗಿ ಮಾಡಿರುವ ವರೆಗೆ ಮಾತ್ರ ವಿವೃತವಾಗಿದೆ. ಜಯತೀರ್ಥವಿಜಯದಲ್ಲಿ ಐದು ಸರ್ಗಗಳು ಮಾತ್ರ ಉಪಲಬ್ಧವಿವೆ. ಜಯತೀರ್ಥರು ದುರ್ಗಾದೇವಿಯ ಅನುಗ್ರಹದಿಂದ ಕಂಠ ಮತ್ತು ಪೂಗಿಗಳನ್ನು ಹೊಂದುವವರೆಗೆ ಮಾತ್ರ ವಿವೃತವಾಗಿದೆ.

ಜಯತೀರ್ಥರ ಪೂರ್ವಾಶ್ರಮದ ವಿವಾಹದ ವಿಷಯದಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಅವರಿಗೆ ಒಬ್ಬ ಹೆಂಡತಿ ಇದ್ದಳೆ ಅಥವಾ ಇಬ್ಬರಿದ್ದರೆ ಎಂಬ ಚರ್ಚೆ ಬಹುಕಾಲದಿಂದ ಇದೆ. ಮುಖ್ಯವಾಗಿ ಅವರು ವಿವಾಹಿತರಾದರೂ ಸ್ತ್ರೀಸ್ಪರ್ಶರಹಿತರೂ, ಅಸ್ಖಲಿತ ಬ್ರಹ್ಮಚಾರಿಗಳೂ ಆಗಿದ್ದರು ಎಂಬುದು ನಿರ್ವಿ ವಾದ. ಶ್ರೀ ವ್ಯಾಸತೀರ್ಥರು ಅಣುಜಯತೀರ್ಥವಿಜಯದಲ್ಲಿ ಗುರುಗಳು ಪ್ರತಿ ದಿನವೂ ಅವರಿಗೆ ಹೇಳುತ್ತಿದ್ದುದನ್ನು ತಾವು ವರ್ಣಿಸಿದ್ದೇವೆಂದು ಸೂಚಿಸಿದ್ದಾರೆ. ಆದ್ದರಿಂದ ವ್ಯಾಸತೀರ್ಥರ ಗ್ರಂಥಗಳು ಮಾತ್ರ ಪ್ರಮಾಣತಮವಾದುವು. ಅವು ಸಾಕ್ಷಾದನುಭವದಿಂದ ರಚಿತವಾದುವು. ಇತರ ಗ್ರಂಥಕಾರರು ಸ್ವಂತ ಅನುಭವ ದಿಂದಲ್ಲದೆ ಸ್ವಬುದ್ಧಿ ಪ್ರೇರಣೆಯಿಂದ ರಚಿಸಿರುತ್ತಾರೆ. ಯಾವ ಗ್ರಂಥಕಾರರಲ್ಲಿ ಯಾರಿಗೆ ಆಪ್ತತ್ವವಿದೆಯೋ ಅವರು ಆಯಾ ಗ್ರಂಥದಲ್ಲಿನ ವಿಷಯಗಳನ್ನು ಪೋಷಿಸುತ್ತಾರೆ. ವೇದಾಂತದಲ್ಲಿ "ವಿಶೇಷ"ವನ್ನು ಅಖಂಡವಾದಿಗಳೂ ಖಂಡ ವಾದಿಗಳೂ ಖಂಡಾಖಂಡವಾದಿಗಳೂ ಮಹಾದರದಿಂದ ತಲೆಯ ಮೇಲೆ ಹೇಗೆ

ಧರಿಸಲೇಬೇಕೋ ಹಾಗೆಯೇ ವ್ಯಾಸತೀರ್ಥರ ಗ್ರಂಥಗಳನ್ನೂ ಸಮಸ್ತರೂ ಮಹಾದರದಿಂದ ಸ್ವೀಕರಿಸಲೇಬೇಕು.

ಶ್ರೀಮಾನ್ ಕೊರಟಿ ಶ್ರೀನಿವಾಸರಾಯರು ತಮ್ಮದೇ ಆದ ರಮಣೀಯ ಶೈಲಿಯಲ್ಲಿ ಈ ಜಯತೀರ್ಥರ ಜೀವನ ಚರಿತ್ರೆಯನ್ನು ರಚಿಸಿ ಮಹಾಜನರ ಮುಂದೆ ಇಟ್ಟಿದ್ದಾರೆ. ಇದರಲ್ಲಿ ಶ್ರೀ ಜಯತೀರ್ಥರ ಕಾಲದ ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಧಾರ್ಮಿಕ ಮತ್ತು ಐತಿಹಾಸಿಕ ವಿಷಯಗಳು ಅನನುಕರಣರೀತಿಯಲ್ಲಿ ಹೃದಯಂಗಮವಾಗಿ ವಿವೃತವಾಗಿವೆ. ವಿವಾದಾಸ್ಪದವಾದ ವಿಷಯಗಳ ಸ್ಪರ್ಶವೇ ಇಲ್ಲಿ ಇಲ್ಲ. ಅಮೃತ ಪಾನದಿಂದ ಹೇಗೆ ತೃಪ್ತಿ ಆಗುವುದಿಲ್ಲವೋ ಹಾಗೆಯೇ ಶ್ರೀ ಜಯತೀರ್ಥರ ಚರಿತಾಮೃತವನ್ನು ಎಷ್ಟು ಜನರು ರಚಿಸಿದರೂ ಅಲಂ ಬುದ್ಧಿ ಉಂಟಾಗುವುದೇ ಇಲ್ಲ. ಬಹಳ ಶ್ರಮ ವಹಿಸಿ ಅಲ್ಪ ಕಾಲದಲ್ಲಿಯೇ ಅನೇಕ ವಿಷಯಗಳನ್ನು ಸಂಗ್ರಹಿಸಿ ಇಂಥ ಶ್ರೇಷ್ಠ ಕೃತಿಯನ್ನು ರಚಿಸಿ, ಮುದ್ರಣ ಮಾಡಿಸಿ ಭಕ್ತವೃಂದಕ್ಕೆ ದೊರಕಿಸಿಕೊಟ್ಟು ಮಹದುಪಕಾರವನ್ನು ಮಾಡಿರುವ ಇವರಿಗೆ ಶ್ರೀಹರಿವಾಯುಗಳು ಆಯುರಾರೋಗ್ಯಾದಿಗಳನ್ನು ದಯಪಾಲಿಸಿ ಇನ್ನೂ ಅನೇಕ ಸಾಧು ಸಂತರ ಜೀವನ ಚರಿತ್ರೆಗಳನ್ನು ರಚಿಸುವಂತೆ ಶಕ್ತಿ ಕೊಡಲಿ ಎಂದು ಶ್ರೀಶನನ್ನು ಪ್ರಾರ್ಥಿಸುತ್ತೇನೆ.

ಶ್ರೀನಿವಾಸೇನ ರಚಿತಂ ಶ್ರೀನಿವಾಸಪದಾರ್ಪಿತಮ್ ।<br>
ಶ್ರೀಮಜ್ಜಯಾರ್ಯಚರಿತಂ ಭೂಯಾಚ್ಛ್ರೀಪತಿತುಷ್ಟಯೇ ॥<br>
ದೋಷಜಾಲಮುಪೇಕ್ಷ್ಯಾತ್ರ ಗುಣಾಂಶೇನೈವ ತೋಷಿಣಾಮ್ ।<br>
ಸತಾಂ ಸದಾ ಮುದೇ ಭೂಯಾಜ್ಜೀಯಾದಾಚಂದ್ರತಾರಕಮ್ ॥

1—2—1978<br>
ಬೆಂಗಳೂರು

—ಗೋಪಾಲಕೃಷ್ಣಾಚಾರ್ಯ ಗೌಡಗೆರಿ

# ಅರ್ಪಣೆ

ಶ್ರೀ ಭೂವೈಕುಂಠ ತಿರುಪತಿ ವೇಂಕಟೇಶ್ವರಸ್ವಾಮಿಯನ್ನು
ಹನ್ನೆರಡು ವರ್ಷಗಳ ಕಾಲ ಸ್ವಯಂ ಪೂಜಿಸಿದ ವ್ಯಾಸರಾಜಯತೀಶ್ವರರ
ಪ್ರಿಯಶಿಷ್ಯರಾದ ಬೆಟ್ಟಾಚಾರ್ಯವಂಶೋದ್ಭವರೂ,
ಶ್ರೀಮನ್ಮಹೀಧರಕುಲಾವತಂಸರೂ
ಶ್ರೀ ಗೌಡಗೆರೆ ವೇಂಕಟರಮಣಾಚಾರ್ಯರ ಸುಪುತ್ರರೂ,
ಷಾಷ್ಟಿಕ ಕುಲಭೂಷಣರೂ,
ಸಚ್ಛಾಸ್ತ್ರ ಪ್ರವಚನ ನಿರತರೂ
ಶ್ರೀಮನ್ಮಧ್ವಸಿದ್ಧಾಂತ ಗ್ರಂಥ ಸಂಗ್ರಹ
ಗ್ರಂಥ ಮಾಲಿಕಾ ಪ್ರಸರದ ಸಂಗ್ರಾಹಕರೂ ಆದ

**ಶ್ರೀ ಗೌಡಗೆರೆ ಗೋಪಾಲಕೃಷ್ಣಾಚಾರ್ಯ, ಬಿ.ಇ.**

(ಕರ್ನಾಟಕ ಪಿ.ಡಬ್ಲ್ಯು.ಡಿ. ಇಲಾಖೆಯ ನಿವೃತ್ತ ಇಂಜಿನಿಯರು)

ಮತ್ತು

ಆರು ದಶಕಗಳ ಕಾಲ ಆಚಾರ್ಯರ
ಜೀವನದ ಜತೆಗಾತಿಯಾಗಿದ್ದು
ದಿನಾಂಕ 12-1-1978 ರಂದು ಶ್ರೀಹರಿಪಾದಾರವಿಂದವನ್ನು ಸೇರಿದ

**ಶ್ರೀಮತಿ ರುಕ್ಮಿಣಮ್ಮ**

ಇವರ ಪದತಲದಲ್ಲಿ ಭಕ್ತಿಪುರಸ್ಸರವಾಗಿ ಈ ಕೃತಿಯನ್ನು
ಅರ್ಪಿಸಿದ್ದೇನೆ.

—ಲೇಖಕ

# ಗ್ರಂಥಋಣ


1) ಶ್ರೀವ್ಯಾಸತೀರ್ಥ ವಿರಚಿತ ಜಯತೀರ್ಥವಿಜಯ ಮತ್ತು ಅಣುಜಯತೀರ್ಥ ವಿಜಯ. (ಸಂಸ್ಕೃತ)

2) ಪ್ರಾಚೀನ ಮಹಾ ಪುರುಷರು ಮತ್ತು ಪ್ರಾಚೀನ ನಾಮಾವಳಿ —ಲೇ : ಅನಂತ ಕೃಷ್ಣಾಚಾರ್ಯ.

3) ಶ್ರೀ ಜಯತೀರ್ಥ ಚರಿತಾಮೃತಂ—ಲೇ : ಚಿಕ್ಕೇರೂರು ಗೋವಿಂದಾಚಾರ್ಯರು.

4) ಶ್ರೀ ಜಯತೀರ್ಥರ ಚರಿತ್ರೆ ಮತ್ತು ಗ್ರಂಥಗಳಪರಿಚಯ —ಲೇ : ಆರ್.ಎಸ್. ಶೇಷಗಿರಿರಾವ್.

5) ಮಳಖೇಡದ ಜಯತೀರ್ಥರು ಮತ್ತು ಟೀಕಾಚಾರ್ಯರು —ಲೇ : ಪಿ. ಎಂ. ಗಲಗಲಿ.

6) Sri Nyaya Sudha of Jayatheertha—by G. B. Joshi

7) ಸತ್ಕಥಾ—ಲೇ : ಭೀಮರಾವ್ ಸ್ವಾಮಿರಾವ್ ಕಮಲಾಪುರ.

8) ಮಾಧ್ವವಾಙ್ಮಯ ತಪಸ್ವಿಗಳು—ಲೇ: ಪಂಢರಿನಾಥಾಚಾರ್ಯ ಗಲಗಲಿ.

9) Lectures on Vedantha—by Dr. B. N. K. Sharma

10) ಸಿವಿಲ್‌ಸೂಟ್ ಮತ್ತು ಸಭಾಸಾರ—ಲೇ : ಶ್ರೀಮತ್ಸತ್ಯಧ್ಯಾನ ಶ್ರೀಪಾದಂಗಳು.

11) ತತ್ತ್ವಮಸಿ ಮತ್ತು ತತ್ತ್ವಮಸಿ ವಿಮರ್ಶೆ —ಲೇ : ಚೀಮನಹಳ್ಳಿ ರಘುನಾಥಾಚಾರ್ಯ.

12) ಸೇವುಣರ ಇತಿಹಾಸ—ಲೇ : ಡಾ. ಎ. ವಿ. ನರಸಿಂಹಮೂರ್ತಿ.

13) ಬನವಾಸಿ ಕದಂಬರು—ಲೇ : ಎಲ್.ಬಿ. ಶರ್ಮ ಮತ್ತು ಬಿ. ಎಚ್. ಶ್ರೀಧರ.

14) ತತ್ತ್ವನಿರ್ಣಯ—ಲೇ : ಎಂ. ಎಸ್. ರಾಘವಾಚಾರ್ ಮತ್ತು ಡಾ. ಕೆ. ಎಂ ಕೃಷ್ಣರಾವ್.

15) ಶ್ರೀಮಧ್ವಮತ ಪ್ರಸಾರ—ಲೇ : ಎನ್. ಕೆ. ನರಸಿಂಹಮೂರ್ತಿ.

16) ಶೃಂಗೇರಿಯ ಇತಿಹಾಸ—ಲೇ : ಎ. ಕೆ. ಶಾಸ್ತ್ರಿಟೊಣ್ಣೇಮನೆ.

17) ತತ್ತ್ವಸಂಖ್ಯಾನ ಮತ್ತು ತತ್ತ್ವವಿವೇಕ —ಲೇ : ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದಂಗಳು

18) ಕಿತ್ತೂರು ನಾಡಿನ ಇತಿಹಾಸ ಹಾಗೂ ಸಂಸ್ಕೃತಿ
—ಪ್ರ : ಕರ್ಣಾಟಕ ವಿಶ್ವ ವಿದ್ಯಾನಿಲಯ.
19) ಶ್ರೀ ಟೀಕಾಚಾರ್ಯರ ಚರಿತ್ರೆ—ಲೇ : ಅನವಟ್ಟಿರಾಮರಾಯರು.
20) ಕನ್ನಡ ಸಾಹಿತ್ಯ ಪರಿಷತ್ತಿನ ಸಂಚಿಕೆ—ಪ್ರ : ಕನ್ನಡ ಸಾಹಿತ್ಯ ಪರಿಷತ್.
21) ವಿಜಯದಾಸರ ಸುಳಾದಿಗಳು—ಪ್ರ : ಗೋರಬಾಳ ಹನುಮಂತರಾವ್.
22) ಕರ್ಣಾಟಕದ ಪರಂಪರೆ—ಪ್ರ : ಕರ್ಣಾಟಕ ಸರಕಾರದ ಸಾಹಿತ್ಯ
ಮತ್ತು ಸಂಸ್ಕೃತಿ ಪ್ರಚಾರ ಇಲಾಖೆ.
23) ಗ್ರಂಥ ಮಾಲಿಕಾ ಪ್ರಸರ—ಲೇ : ಗೌಡಗೆರಿ ಗೋಪಾಲಕೃಷ್ಣಾಚಾರ್ಯರು.
24) ವಾದೀಂದ್ರರ ಗುರುಗುಣಸ್ತವ—ಪ್ರ : ಪರಿಮಳ ಸಂಶೋಧನ
ಮಂದಿರ, ನಂಜನಗೂಡು.
25) ಪೂರ್ಣಪ್ರಜ್ಞ ಪ್ರಶಸ್ತಿ—ಲೇ : ಎಸ್. ಕೆ. ರಾಮಚಂದ್ರರಾವ್.
26) ಶ್ರೀಮನ್ಮಧ್ವಚಾರ್ಯರ ಚರಿತ್ರೆ ಮತ್ತು ಶ್ರೀಮಜ್ಜಯತೀರ್ಥರ ಚರಿತ್ರೆ
—ಲೇ : ನಾ. ಶ್ರೀ ರಾಜಪುರೋಹಿತ.
27) ಪ್ರಬುದ್ಧ ಕರ್ಣಾಟಕ—ಕಾಮನ ಸಂಚಿಕೆ (1946)
28) ಸುಮಧ್ವವಿಜಯ—ಲೇ : ನಾರಾಯಣ ಪಂಡಿತಾಚಾರ್ಯರು (ಸಂಸ್ಕೃತ)
29) Never to be forgotten Empire
—by B. Suryanarayan Rao.
30) ಕುಮಾರ ರಾಮ—ಲೇ : ಹುಲ್ಲೂರು ಶ್ರೀನಿವಾಸಜೋಯಿಸರು.
31) ಕುಮಾರ ರಾಮ ಸಾಂಗತ್ಯ (ಕನ್ನಡ ಕಾವ್ಯ)—ನಂಜುಂಡ ಕವಿ.
32) ಮಿಥಿಕ್ ಸೊಸೈಟಿ ಜರ್ನಲ್ಸ್—ಪ್ರ : ಮಿಥಿಕ್ ಸೊಸೈಟಿ.
33) ಶ್ರೀ ವೇದಸಾರ ಸ್ತೋತ್ರ (ಸಂಸ್ಕೃತ)
—ಲೇ : ಶ್ರೀ ಅಕ್ಷೋಭ್ಯತೀರ್ಥ ಶ್ರೀಪಾದಂಗಳು.
34) Bharatiya Vidya Bhavan Series—Delhi Sultanete
35) ಶ್ರೀ ಜಗನ್ನಾಥವಿಜಯ (ಕನ್ನಡ ಕಾವ್ಯ)—ಲೇ : ರುದ್ರಭಟ್ಟ.
36) ವಾದರತ್ನಾವಳಿ (ಸಂಸ್ಕೃತ)—ಲೇ : ವಿಷ್ಣುದಾಸಾಚಾರ್ಯರು
37) ಶ್ರುತಿ ತತ್ತ್ವ ಪ್ರಕಾಶಿಕೆ (ಸಂಸ್ಕೃತ)—ಶ್ರೀ ಸೋದಾವಾದಿರಾಜ ಮಠದ
ಶ್ರೀಪಾದಂಗಳು.

38) ಮಧ್ವಸಿದ್ಧಾಂತ ಗ್ರಂಥಗಳ ಸಂಗ್ರಹ ಉಪನ್ಯಾಸ ಮಂಜರಿ
—ಲೇ : ಡಿ. ಶ್ರೀನಿವಾಸಾಚಾರ್ಯ.

39) ಶ್ರೀ ವೇದವ್ಯಾಸ ಕೃತ ಶ್ರೀ ಮನ್ಮಹಾಭಾರತ (ಸಂಸ್ಕೃತ)

40) ಶ್ರೀಮದ್ಭಾಗವತ (ಕನ್ನಡ)—ಸಂ : ನಂದಗುಡಿ ಕೃಷ್ಣಮೂರ್ತಿ.

41) ಶ್ರೀಮದ್ಭಾಗವತದ ವಿಜಯಧ್ವಜತೀರ್ಥರ ವ್ಯಾಖ್ಯಾನ (ಸಂಸ್ಕೃತ)

42) ಶ್ರೀಮನ್ನ್ಯಾಯಸುಧಾ (ಕನ್ನಡ ಅನುವಾದ)—ಪಂ. ಕೇಶವಾಚಾರ್ಯ
ಜಾಲಿಹಾಳ.

43) ಶ್ರೀಮಧ್ವಾಚಾರ್ಯರ ಸರ್ವಮೂಲ ಗ್ರಂಥಗಳು
(ಸಂಸ್ಕೃತ ಮತ್ತು ಕನ್ನಡ ಅನುವಾದ)

44) ಶ್ರೀ ಜಯತೀರ್ಥರ ಗ್ರಂಥಗಳು (ಸಂಸ್ಕೃತ) ಮತ್ತು ಅದರ
ಗ್ರಂಥಗಳ ಮೇಲಿನ ವ್ಯಾಖ್ಯಾನಗಳು.

45) ಗುರುಚರಿತೆ—ಲೇ : ಡಾ. ಎಚ್. ಕೆ. ವೇದವ್ಯಾಸಾಚಾರ್ಯ.

46) A History of the Dvaita School of Vedanta and
its Literature, Vol. I—by Dr B.N.K. Sharma.

47) Sriman Nyayasudha Parimala Prasara Introduction
—by R.S. Panchamukhi.

# ಶ್ರೀ ಜಯಮುನಿ ಸ್ಮರಣೆ

ಆನಂದತೀರ್ಥೋಪದಿಷ್ಟೋ ನಿಧಿರ್ನಾರಾಯಣಾಹ್ವಯಃ ।
ಪ್ರದರ್ಶಿತೋ ಯೇನ ಸಮ್ಯಕ್ ಜಯತೀರ್ಥಂ ತಮಾಶ್ರಯೇ ॥

(ವ್ಯಾಸರಾಜರು—ತರ್ಕತಾಂಡವ)

ಚಿತ್ರೈಃ ಪದ್ಯೈಶ್ಚ ಗಂಭೀರೈರ್ವಾಕ್ಯೈರ್ನ್ಯಾಯೈರಖಂಡಿತೈಃ ।
ಗುರುಭಾವಂ ವ್ಯಂಜಯಂತೀ ಭಾತಿ ಶ್ರೀಜಯತೀರ್ಥವಾಕ್ ॥

(ವ್ಯಾಸರಾಜರು—ನ್ಯಾಯಾಮೃತ)

ಮಿಥ್ಯಾಸಿದ್ಧಾಂತದುರ್ಧ್ವಾಂತವಿಧ್ವಂಸನವಿಚಕ್ಷಣಃ ।
ಜಯತೀರ್ಥಾಖ್ಯತರಣಿರ್ಭಾಸತಾಂ ನೋ ಹೃದಂಬರೇ ॥

(ವ್ಯಾಸರಾಜರು—ತಾತ್ಪರ್ಯಚಂದ್ರಿಕಾ)

ಯಸ್ಯ ವಾಕ್ಕಾಮಧೇನುರ್ನಃ ಕಾಮಿತಾರ್ಥಾನ್ ಪ್ರಯಚ್ಛತಿ ।
ಸೇವೇ ತಂ ಜಯಯೋಗೀಂದ್ರಂ ಕಾಮಬಾಣಚ್ಛಿದಂ ಸದಾ ॥

(ವಿಜಯೀಂದ್ರರು—ನ್ಯಾಯಾಮೃತಾಮೋದ)

ಸತ್ತ್ವಪದ್ಮಬಂಧವೋ ಯಸ್ಯ ಗಾವೋ ಯಸ್ಯ ತಮೋನುದಃ ।
ಸ ಸ್ಯಾತ್ತತ್ತ್ವಪ್ರಕಾಶಾಯ ಜಯತೀರ್ಥರವಿರ್ಮಮ ॥

(ರಾಘವೇಂದ್ರರು—ನ್ಯಾಯಸುಧಾಪರಿಮಳ)

ವೇದದುಗ್ಧಾಬ್ಧಿಮಾಮಥ್ಯ ಸೂತ್ರಮಂದರಭೂಭೃತಾ ।
ಪ್ರಾಪ್ತಾ ನ್ಯಾಯಸುಧಾ ಯೇನ ತಂ ಜಯೀಂದ್ರಮಹಂ ಭಜೇ ॥

(ವೇದೇಶತೀರ್ಥರು—ಛಾಂದೋಗ್ಯಭಾಷ್ಯಟೀಕಾ ಟಿಪ್ಪಣಿ)

ಮೂಕೋಪಿವಾಗ್ಮಿತಾಂ ಯಾಯಾದ್ಯದನುಗ್ರಹಮಾತ್ರತಃ ।
ಸೇವೇ ತಂ ಜಯಯೋಗೀಂದ್ರಂ ಪ್ರತಿವಾದಿಮತಚ್ಛಿದಂ ॥

(ಕಂಬಾಲೂರ ರಾಮಚಂದ್ರತೀರ್ಥರು—ಋಗ್ಭಾಷ್ಯಟೀಕಾ ವಿವೃತಿ)

ಯದೀಯವಾಕ್ತರಂಗಾಣಾಂ ವಿಪ್ಲುಷೋ ವಿದುಷಾಂ ಗಿರಃ ।
ಜಯತಿ ಶ್ರೀಧರಾವಾಸೋ ಜಯತೀರ್ಥಪಯೋನಿಧಿಃ ॥

(ವೈಶ್ವನಾಥೀ ನಾರಾಯಣಾಚಾರ್ಯರು—ಅದ್ವೈತಕಾಲಾನಲ)

ಮಧ್ವಸಿದ್ಧಾಂತಮಾಮಥ್ಯ ಶುದ್ಧಧೀಮಂದರಾದ್ರಿಣಾ ।
ಲಬ್ಧಾ ನ್ಯಾಯಸುಧಾ ಯೇನ ತಂ ಜಯೀಂದ್ರಮಹಂ ಭಜೇ ॥

(ಶರ್ಕರಾ ಶ್ರೀನಿವಾಸತೀರ್ಥರು—ತತ್ತ್ವಪ್ರಕಾಶಿಕಾ ಟಿಪ್ಪಣಿ)

# ವಿಷಯ ಸೂಚಿಕೆ

——

# ಶ್ರೀ ಜಯತೀರ್ಥರು

ಶ್ರೀಮಧ್ವಃ ಕಲ್ಪವೃಕ್ಷಶ್ಚ ಜಯಾಚಾರ್ಯಾಸ್ತು ಧೇನವಃ ।
ಚಿಂತಾಮಣಿಸ್ತು ವ್ಯಾಸಾರ್ಯಾಃ ಮುನಿತ್ರಯಮುದಾಹೃತಂ ॥ ೧ ॥
ಚಿತ್ರೈಃ ಪದೈಶ್ಚ ಗಂಭೀರೈರ್ವಾಕ್ಯೈರ್ಮಾನೈರಖಂಡಿತೈಃ ।
ಗುರುಭಾವಂ ವ್ಯಂಜಯಂತೀ ಭಾತಿ ಶ್ರೀಜಯತೀರ್ಥವಾಕ್ ॥ ೨ ॥
ಯಸ್ಯ ವಾಕ್ಕಾಮಧೇನುರ್ನಃ ಕಾಮಿತಾರ್ಥಾನ್ ಪ್ರಯಚ್ಛತಿ ।
ಸೇವೇ ತಂ ಜಯಯೋಗೀಂದ್ರಂ ಕಾಮಬಾಣಚ್ಛಿದಂ ಸದಾ[1] ॥ ೩ ॥

---

## ಮಳಖೇಡ

ಕನ್ನಡ ನಾಡಿನ ಪ್ರಾಚೀನ ಇತಿಹಾಸದಲ್ಲಿ ಸುಪ್ರಸಿದ್ಧವಾಗಿರುವ ಮಳಖೇಡ ಕ್ಷೇತ್ರದಲ್ಲಿ ಸಮಸ್ತ ಮಾಧ್ವರಿಂದಲೂ ಸೇವಿಸಲ್ಪಡುತ್ತಿರುವ ಶ್ರೀ ಜಯತೀರ್ಥರ ಬೃಂದಾವನವಿದೆ. ಇಲ್ಲಿ ಪುರಾಣ ಪ್ರಸಿದ್ಧವಾದ ಪವಿತ್ರವಾದ ಕಾಗಿನಿ ನದಿಯು ಹರಿಯುತ್ತಿದೆ. ಅದರ ಒಂದು ದಂಡೆಯಲ್ಲಿ ಮಳಖೇಡ ಪಟ್ಟಣವೂ, ಇನ್ನೊಂದು ದಂಡೆಯಲ್ಲಿ ಬೇಡಿದ ಭಕ್ತರ ಇಷ್ಟಾರ್ಥಗಳನ್ನು ಈಡೇರಿಸುತ್ತಾ ಕಾಮಧೇನುವಿನಂತೆ ಇರುವ ಜಗದ್ವಂದ್ಯರಾದ ಶ್ರೀ ಜಯತೀರ್ಥರ ಬೃಂದಾವನವೂ ಇದೆ.

ಇತಿಹಾಸದಲ್ಲಿ ಮಳಖೇಡಕ್ಕೆ ಮಾನ್ಯಖೇಟವೆಂಬ ಹೆಸರೂ ಇದೆ. ಇದು ರಾಷ್ಟ್ರಕೂಟರ ರಾಜಧಾನಿಯಾಗಿ ಮೆರೆದಿತ್ತು. ಈ ಊರನ್ನು ಒಂದು ಪಾಳು ಬಿದ್ದಿರುವ ಕೋಟೆಯು ಬಳಸಿದೆ. ಕೋಟೆಯ ಹಿಂದೆ ಕೊತ್ತಲ ಪ್ರಾಣದೇವರ ದೇವಸ್ಥಾನವಿದೆ. ಕೋಟೆಯಲ್ಲಿ ಅಕ್ಷೋಭ್ಯತೀರ್ಥರ ಮಂಟಪವಿದೆ. ಊರಿನಲ್ಲಿ ಮಲಯಾದ್ರಿ ಮಾಧವನ ಗುಡಿಯೂ, ಸಂತಾನ ಗೋಪಾಲಕೃಷ್ಣನ ಮಂದಿರವೂ,

---

1) ಈ ಧ್ಯಾನ ಶ್ಲೋಕಗಳು ಅನುಕ್ರಮವಾಗಿ —
ಕೂರ್ಮ ಪುರಾಣ—ಶ್ರೀ ಮುಷ್ಣ ಮಾಹಾತ್ಮ್ಯೆ
ವ್ಯಾಸರಾಜಕೃತ ನ್ಯಾಯಾಮೃತ ಮಂಗಳಶ್ಲೋಕ
ವಿಜಯೀಂದ್ರಕೃತ-ನ್ಯಾಯಾಮೃತಾಮೋದ ಮಂಗಳ ಶ್ಲೋಕ

ಜೈನರ ನೇಮಿನಾಥ ಬಸದಿಯೂ ಇವೆ. ಗುಲ್ಬರ್ಗದಿಂದ ಅಲ್ಲಿಗೆ 24 ಮೈಲಿ ದೂರ. ಪ್ರಯಾಣಕ್ಕೆ ವಾಹನಗಳ ಸೌಕರ್ಯವಿದೆ. ರಾಯಚೂರು ಕಡೆಯಿಂದ ಬರುವವರು ಸೇಡಂ ರೈಲ್ವೆ ನಿಲ್ದಾಣದಲ್ಲಿ ಇಳಿದು ಎಂಟು ಮೈಲಿ ವಾಹನದಲ್ಲಿ ಬರಬೇಕು. ಬೆಂಗಳೂರು ಕಡೆಯಿಂದ ಬರುವವರು ಗುಂತಕಲ್ಲಿನಲ್ಲಿ ಗಾಡಿಯನ್ನು ಬದಲಾಯಿಸಿ ಸಿಕಂದರಾಬಾದಿನ ಗಾಡಿಯಲ್ಲಿ ಸೇಡಂ ರೈಲು ನಿಲ್ದಾಣಕ್ಕೆ ಬರಬೇಕು. ಯಾತ್ರಿಕರು ಇಳಿದುಕೊಳ್ಳಲು ಇಲ್ಲಿ ಛತ್ರದ ಸೌಕರ್ಯವಿದೆ. ಶ್ರೀ ಟೀಕಾರಾಯರಿಗೆ ಪ್ರತಿದಿನ ಹಸ್ತೋದಕದ ವ್ಯವಸ್ಥೆ ಇದೆ.

ಟೀಕಾಕೃತ್ಪಾದರೆನಿಸಿದ ಶ್ರೀ ಜಯತೀರ್ಥರ ಬೃಂದಾವನದ ಬಳಿಯಲ್ಲಿ ಅವರ ಗುರುಗಳಾದ ಶ್ರೀಅಕ್ಷೋಭ್ಯತೀರ್ಥರ ಬೃಂದಾವನವೂ ಇದೆ. ಅಲ್ಲಿ ಶ್ರೀ ವ್ಯಾಸತೀರ್ಥರು, ಶ್ರೀಕೃಷ್ಣದ್ವೈಪಾಯನತೀರ್ಥರು, ಶ್ರೀ ರಘುನಾಥ ತೀರ್ಥರು, ಶ್ರೀ ಜಿತಾಮಿತ್ರತೀರ್ಥರು, ಶ್ರೀ ರಾಘವೇಂದ್ರತೀರ್ಥರು· ಶ್ರೀ ಸತ್ಯಾನಂದತೀರ್ಥರು, ಶ್ರೀ ಪೂರ್ಣಬೋಧತೀರ್ಥರು, ಶ್ರೀ ರಾಜಗೋಪಾಲ ತೀರ್ಥರು, ಶ್ರೀ ಸತ್ಯಬೋಧತೀರ್ಥರು, ಶ್ರೀ ಸತ್ಯವೀರತೀರ್ಥರು, ಶ್ರೀ ಸತ್ಯ ಧೀರತೀರ್ಥರು, ಶ್ರೀ ಸತ್ಯಜ್ಞಾನತೀರ್ಥರು, ಶ್ರೀ ಸತ್ಯಧ್ಯಾನತೀರ್ಥರು, ಶ್ರೀ ರಘುಕಾಂತತೀರ್ಥರು—ಹೀಗೆ ಒಟ್ಟು ಹದಿನಾರು ಮಂದಿ ಯತಿಗಳಿಗೆ ನಿತ್ಯ ಹಸ್ತೋದಕ ವ್ಯವಸ್ಥೆ ಇದೆ. ಮಧ್ವನವಮಿ, ಅಕ್ಷೋಭ್ಯತೀರ್ಥರ ಆರಾಧನೆ, ಶ್ರೀ ಟೀಕಾಚಾರ್ಯರ ಆರಾಧನೆ, —ಮುಂತಾದ ಉತ್ಸವಗಳು ನಡೆಯುತ್ತವೆ.

ಮಳಖೇಡದಿಂದ ಆರು ಮೈಲಿ ದೂರದಲ್ಲಿ ದುರ್ಗಬೆಟ್ಟ, ದುರ್ಗ ದೇವಾಲಯಗಳು ಇವೆ. ಇಲ್ಲಿ ಶ್ರೀ ಜಯತೀರ್ಥರು ಶ್ರೀ ಮಧ್ವಾಚಾರ್ಯರ ಗ್ರಂಥಗಳಿಗೆ ಟೀಕೆಗಳನ್ನು ಬರೆಯುವ ಮುನ್ನ ದುರ್ಗಾದೇವಿಯ ಅನುಗ್ರಹ ಸಂಪಾದನೆಗಾಗಿ ತಪಸ್ಸನ್ನು ಮಾಡಿ ಘಂಟಾ ಮತ್ತು ಪೂಗಿಗಳನ್ನು ಪಡೆದ ರೆಂದೂ ಹೇಳುತ್ತಾರೆ.

ಮಾನ್ಯಖೇಟವು ಪ್ರಾಚೀನ ಇತಿಹಾಸ ಹೊಂದಿರುವ ಊರು. ಖೇಟ ವೆಂದರೆ, ಹಳ್ಳಿ, ಗ್ರಾಮ. ಇದು ಆಯಕಟ್ಟಿನ ಸ್ಥಳವಾಗಿದ್ದುದರಿಂದ ರಾಷ್ಟ್ರಕೂಟ ದೊರೆಗಳ ಗಮನಕ್ಕೆ ಬಂದು ದೊಡ್ಡ ನಗರವಾಗಿ ಬೆಳೆಯಿತು. ಲಟ್ಟಲೂರನ್ನು ಬಿಟ್ಟಮೇಲೆ, ರಾಷ್ಟ್ರಕೂಟರು ಇದನ್ನು ತಮ್ಮ ರಾಜಧಾನಿ ಮಾಡಿಕೊಂಡರು. ಈ ನಗರವನ್ನು ಮುಮ್ಮಡಿ ಗೋವಿಂದನು ಕಟ್ಟಲಾರಂಭಿಸಿದ

ನೆಂದೂ, ಅವನ ಮಗ ಅಮೋಘವರ್ಷನೃಪತುಂಗನ ಕಾಲದಲ್ಲಿ ಅದು ಸಂಪೂರ್ಣಗೊಂಡು ಸ್ಥಿರ ರಾಜಧಾನಿಯಾಯಿತೆಂದೂ ಶಾಸನಗಳಿಂದ ತಿಳಿಯುತ್ತದೆ.1

ಈ ಪ್ರದೇಶವು ಬಿಳಿಯ ಕಲ್ಲಿನ ಬಂಡೆಗಳಿಂದಲೂ ಕಗ್ಗಲ್ಲುಗಳಿಂದಲೂ ಕೂಡಿದ್ದು, ವಿಸ್ತಾರವಾದ ಬಯಲು ಪ್ರದೇಶವನ್ನು ಒಳಗೊಂಡು, ಕೃಷಿ ವಾಣಿಜ್ಯಗಳಿಗೆ ಪ್ರಶಸ್ತವಾಗಿದೆ. ಅಂತಲೇ ಒಂಬತ್ತನೇ ಶತಮಾನದಲ್ಲಿ ಭಾರತ, ಚೀನಾ ದೇಶಗಳಿಗೆ ಭೆಟ್ಟಿ ಇತ್ತ ಅರಬ್ಬಿ ಪ್ರವಾಸಿ ಸಾಲೊಮನ್ ಸೌದಾಗಾರನು (ಕ್ರಿ. ಶ. 857) ತನ್ನ ವರದಿಯಲ್ಲಿ ಇಲ್ಲಿನ ದೊರೆಯನ್ನು ಹೊಗಳಿದ್ದಾನೆ. "ಬಲ್‌ಹರಾ ಅರಸನು ಪ್ರಪಂಚದಲ್ಲಿ ನಾಮಾಂಕಿತರಾದ ಚಕ್ರೇಶ್ವರರಲ್ಲಿ ಗಣ್ಯನು" —ಎಂದಿದ್ದಾನೆ.2 ಈ ಬಲ್‌ಹರ ಶಬ್ದವು ವಲ್ಲಭರಾಜ ಪದದ ಅಪಭ್ರಂಶವೆಂದೂ, ರಾಷ್ಟ್ರಕೂಟ ಚಕ್ರವರ್ತಿಗಳಿಗೆ ಶ್ರೀ ಪೃಥ್ವೀವಲ್ಲಭ ಎಂಬ ಬಿರುದಿರುವುದರಿಂದ ಅವರಿಗೆ ಅನ್ವಯಿಸುವುದೆಂದೂ ಸುಪ್ರಸಿದ್ಧ ವಿದ್ವಾಂಸರಾದ ಡಾ. ರಾಮಕೃಷ್ಣ ಭಂಡಾರಕರರು ಅಭಿಪ್ರಾಯ ಪಟ್ಟಿದ್ದಾರೆ.

ಮಾನ್ಯಖೇಟಕ್ಕೆ ಮಳಿಯಖೇಡವೆಂಬ ಇನ್ನೊಂದು ಹೆಸರು ಇದ್ದಂತೆ ತಿಳಿಯುತ್ತದೆ. ಮಲಯಾದ್ರಿ ಮಾಧವನ ಹೆಸರಿನಿಂದ ನಗರಕ್ಕೆ ಈ ಹೆಸರು ಬಂದಿರಬಹುದೆಂದು ಊಹಿಸುತ್ತಾರೆ.

ರಾಷ್ಟ್ರಕೂಟ ಚಕ್ರವರ್ತಿಗಳಾದ ಗೋವಿಂದ, ಅಮೋಘವರ್ಷನೃಪತುಂಗ ಇವರ ಕಾಲದಲ್ಲಿ ವೈಭವದ ಶಿಖರವನ್ನು ಮುಟ್ಟಿದ ಈ ನಗರವನ್ನು ಮಾಳವದ ಪರಮಾರ ವಂಶದ ಸೀಯಕ ಹೆಸರಿನ ಹರ್ಷರಾಜನು ದಾಳಿ ಇಟ್ಟು

---

1) ತಸ್ಯ ಶ್ರೀಮದಮೋಘವರ್ಷನೃಪತಿಶ್ಶಾಲುಕ್ಯಕಾಲಾನಲಃ
ಸೂನುರ್ಭೂಪತಿರೂರ್ಜಿತಾಹಿತವಧೂವೈಧವ್ಯದೀಕ್ಷಾಗುರುಃ ।
ಆಸೀದಿನ್ದ್ರಪುರಾಧಿಕಂ ಪುರಮಿದಂ ಶ್ರೀಮಾನ್ಯಖೇಟಾಭಿದಂ
ಯೇನೇದಂ ಚ ಸರಃ ಕೃತಂ ಗುರುತರುಪ್ರಾಸಾದಮನ್ತಃಪುರಃ ॥
—I-A-XII-P. 264 ಕರ್ಡಾ ತಾಮ್ರಶಾಸನ

2) The Balhara is the most eminent of the Prince of India. Every prince in India is master of his own state, but all pay homage to the supremacy of Balhara.

ನಾಶಪಡಿಸಿದನೆಂದು ಇತಿಹಾಸದಿಂದ ತಿಳಿಯುತ್ತದೆ. ಈಗ ಉಳಿದಿರುವ ಭಗ್ನನಗರ ಹಿಂದಣ ನಗರದ ಗತವೈಭವವನ್ನು ನೆನಪಿಗೆ ತರುತ್ತದೆ.

ರಾಷ್ಟ್ರಕೂಟ ಅರಸರ ರಾಜಧಾನಿಯಾಗಿದ್ದಾಗ ಈ ನಗರವು ಮೂವತ್ತು ಮೈಲಿ ಸುತ್ತಳತೆಯಷ್ಟು ವ್ಯಾಪಿಸಿತ್ತು. ಈಗ ಆ ವಿಸ್ತರಣಗಳು ಹಳ್ಳಿಗಳಾಗಿವೆ. ಮಳಖೇಡದಲ್ಲಿ ರಾಜರ ಅರಮನೆ, ಆಸ್ಥಾನ, ಅಂತಃಪುರಗಳು ಇದ್ದುವಂತೆ. ಪಶ್ಚಿಮಕ್ಕೆ ಸುಮಾರು 4 ಮೈಲಿ ದೂರದಲ್ಲಿರುವ ದಂಡೋತಿ (ದಂಡವತಿ) ಎಂಬ ಊರಿನಲ್ಲಿ ಸೈನ್ಯದ ಪಡೆಯಿತ್ತಂತೆ. ಪೂರ್ವಕ್ಕೆ 9 ಮೈಲಿ ದೂರದಲ್ಲಿರುವ ಸೇಡಂ (ಸೇಡಿಂಬ) ನಲ್ಲಿ ರಾಜ್ಯದ ಮುಖ್ಯ ಆಡಳಿತ ಕಾರ್ಯಾಲಯ, (ಸೆಕ್ರೆಟೇರಿಯಟ್) ಇತ್ತಂತೆ. ಈ ಎರಡು ಊರುಗಳ ನಡುವೆ ಇರುವ ನೀಲಹಳ್ಳಿ ಕೊಂಕನಹಳ್ಳಿಯಲ್ಲಿ ರಾಜ್ಯದ ಬೊಕ್ಕಸವಿತ್ತಂತೆ,

ಈ ಸೇಡಂ ಪಟ್ಟಣವು ಸುಪ್ರಸಿದ್ಧ ನಗರವಾಗಿದ್ದು, ಕೋಟೆ ಕೊತ್ತಲಗಳಿಂದ ಕೂಡಿದ್ದು, ವೀರರ ನಗರವಾಗಿತ್ತೆಂದು ಶಾಸನಗಳು ವರ್ಣಿಸುತ್ತವೆ.

ಇಂದು ಮಾನ್ಯಖೇಟದಲ್ಲಿ ಹಿಂದಣ ವೈಭವಗಳು ಇಲ್ಲದಿದ್ದರೂ ಆ ಕಾಲದಲ್ಲಿದ್ದ ದೇಗುಲಗಳು ಆ ಎಲ್ಲ ಗತವೈಭವಗಳಿಗೆ ಮೂಕ ಸಾಕ್ಷಿಗಳಾಗಿ ನಿಂತಿವೆ.

ಇಲ್ಲಿರುವ ನೇಮಿನಾಥದೇವಾಲಯವು ರಚನೆಯಲ್ಲಿ ಸುಂದರವಾಗಿದೆ. ಪಾರ್ಶ್ವನಾಥ ಮೊದಲಾದ ತೀರ್ಥಂಕರರ ಮೂರ್ತಿಗಳೂ, ನಂದೀಶ್ವರ, ಭೈರವ, ಸರಸ್ವತಿ, ಧರಣೇಂದ್ರ ಮುಂತಾದ ಯಕ್ಷಯಕ್ಷಿಗಳ ವಿಗ್ರಹಗಳೂ ಇನ್ನೂ ಕಳೆಯಿಂದ ಕೂಡಿವೆ.

ಈ ನಗರವು ಹಿಂದೆ ಜೈನಧರ್ಮಕ್ಕೆ ಕೇಂದ್ರವಾಗಿದ್ದಂತೆ ತಿಳಿಯುತ್ತದೆ. ಇಲ್ಲಿ 14 ಜಿನಾಲಯಗಳು ಇದ್ದುವಂತೆ. ಜೈನಮತದ ನಾಮಾಂಕಿತರಾದ ಕುಂದಕುಂದಾಚಾರ್ಯರು, ಅಕಳಂಕ, ಜಿನಸೇನಭಟ್ಟಾರಕರು ಇಲ್ಲಿ ಇದ್ದರೆಂದು ಹೇಳುತ್ತಾರೆ. ಇಲ್ಲಿ ನೇಮಿಚಂದ್ರಸಿದ್ಧಾಂತಭಟ್ಟಾರಕರ ಪೀಠವಿತ್ತು.

ಮುಂದೆ ಇದನ್ನು ಮುಜಫರಖಾನನೆಂಬ ಮುಸಲ್ಮಾನ ಸರದಾರನು ಗೆದ್ದು ಕಿಲ್ಲೆಯನ್ನು ಸುಭದ್ರಗೊಳಿಸಿದನಂತೆ. ಆದುದರಿಂದ ಇಂದಿಗೂ ಇದನ್ನು ಮುಜಫರಖಿಲ್ಲೆ ಎಂಬ ಹೆಸರಿನಿಂದ ಕರೆಯುತ್ತಾರೆ. ಇದು ಒಬ್ಬ ಮುಸಲ್ಮಾನ ಸರದಾರನ ಜಹಗೀರಿಯಾಗಿತ್ತು. ಮೊದಲು ಶ್ರೀ ಅಕ್ಷೋಭ್ಯತೀರ್ಥರ ಬೃಂದಾವನವು ಕಿಲ್ಲೆಯಲ್ಲಿತ್ತೆಂದೂ, ಅದನ್ನು ಕೆಲವು ಕಾಲದ ಮೇಲೆ ಕಾಗಿನಿ ನದಿಯ

ದಂಡೆಯಲ್ಲಿರುವ ಜಯತೀರ್ಥರ ಬೃಂದಾವನದ ಬಳಿಯಲ್ಲಿ ತಂದು ಪುನಃ ಪ್ರತಿಷ್ಠಿಸಲಾಯಿತೆಂದೂ ಕೆಲವರು ಹೇಳುತ್ತಾರೆ.

ಮಾನ್ಯಖೇಟವು ಕಾಗಿನಿ ಮತ್ತು ಒಂದು ಹಳ್ಳ (ತೊರೆ) ಕೂಡುವ ಸಂಗಮದಲ್ಲಿ ನಿಂತಿದೆ. ಕಾಗಿನಿಗೆ ಸಂಸ್ಕೃತದಲ್ಲಿ ಕಕುರ್ವೇಣಿ ಎಂಬ ಹೆಸರಿತ್ತು. ಭವಿಷ್ಯೋತ್ತರ ಪುರಾಣದಲ್ಲಿ ಇದಕ್ಕೆ ಸಂಬಂಧಿಸಿದಂತೆ ಒಂದು ಕಥೆ ಇದೆ.

ಅಗಸ್ತ್ಯ ಋಷಿಗಳು ಇಲ್ಲಿ ತಪಸ್ಸು ಮಾಡುತ್ತಿದ್ದರಂತೆ. ಅವರು ದಕ್ಷಿಣ ದೇಶದ ಯಾತ್ರೆ ಕೈಗೊಂಡು ಅಲ್ಲಿನ ಪುಣ್ಯತೀರ್ಥಗಳನ್ನೆಲ್ಲಾ ತಮ್ಮ ಯೋಗ ಬಲದಿಂದ ಕಮಂಡಲುವಿನಲ್ಲಿ ಸಂಗ್ರಹಿಸಿಕೊಂಡು ಅನಂತರ ಉತ್ತರ ಭಾರತದ ಯಾತ್ರೆ ಕೈಗೊಂಡರು. ಅಲ್ಲಿನ ಸಮಸ್ತ ಪುಣ್ಯತೀರ್ಥಗಳನ್ನೂ ಸಂಗ್ರಹಿಸಿಕೊಂಡು ತಮ್ಮ ಸ್ವಸ್ಥಾನ ಸೇರಿದರಂತೆ. ಅಲ್ಲಿರುವಾಗ ಆ ಮುನಿಗಳಿಗೆ ಒಮ್ಮೆ ಜಲಬಾಧೆ ಯಾಯಿತಂತೆ. ಭೀಮರಥೀ ತಟಪ್ರಾಂತ್ಯವಾದ ಇಲ್ಲಿನ ಅನಂತಗಿರಿ ಎಂಬ ಬೆಟ್ಟದ ಬಳಿ ಒಂದು ಬಂಡೆಯ ಮೇಲೆ ತಮ್ಮ ಕಮಂಡಲವನ್ನು ಇರಿಸಿದರಂತೆ. ಆದರೆ ಅವರು ಹಿಂದಿರುಗಿ ಬರುವುದರೊಳಗಾಗಿ ಇಂದ್ರನು ವಾಯಸ (ಕಾಗೆ) ರೂಪದಲ್ಲಿ ಬಂದು ಆದನ್ನು ತನ್ನ ಮುಂದಿನ ಅವತಾರದ ಸಲುವಾಗಿ ಉರುಳಿ ಸಿದನಂತೆ. ಅದು ನದಿಯಾಗಿ ಹರಿಯಿತು. ಕಾಗೆಯ ಸಂಬಂಧದಿಂದ ಆ ನದಿಗೆ ಕಾಗಿನಿ ಎಂದು ಹೆಸರು ಬಂದಿತು.

ಇದನ್ನು ಜ್ಞಾನದೃಷ್ಟಿಯಿಂದ ಅರಿತು ಅಗಸ್ತ್ಯರು ಇಂದ್ರನಿಗೆ ಭೂಲೋಕ ದಲ್ಲಿ ಮನುಷ್ಯ ಯೋನಿಯಲ್ಲಿ ಹುಟ್ಟಲು ಶಾಪ ಕೊಟ್ಟರಂತೆ. ಅವನು ಪ್ರಾರ್ಥಿ ಸಿದ ಮೇಲೆ ಅವನಿಗೆ ನಿಶ್ಚಿತ ಜ್ಞಾನವು, ಸ್ವರೂಪೋದ್ಧಾರಕರಾದ ಗುರುಗಳ ದರ್ಶನದೊಡನೆ ಉಂಟಾಗುವುದೆಂದು ವರವನ್ನೂ ಕೊಟ್ಟರು. ಅಲ್ಲಿಯವರೆಗೆ ಅವನ ಸ್ವರೂಪಜ್ಞಾನ ಮರೆಯಾಗಿರುವುದಾಗಿ ತಿಳಿಸಿದರು. ಲೋಕೋಪ ಕಾರಾರ್ಥವಾಗಿ ನಡೆದ ಭಗವಂತನ ಸಂಕಲ್ಪವಿದೆಂದು ಅವರ ಶಾಪವನ್ನು ಸಮಾ ಧಾನದಿಂದ ಇಂದ್ರನು ಸ್ವೀಕರಿಸಿದನು. ಆದರಂತೆ ಈ ಕಾಗಿನಿ ಕ್ಷೇತ್ರದಲ್ಲಿ ಇಂದ್ರಾವತಾರರಾದ ಜಯತೀರ್ಥರು ಬೃಂದಾವನದಲ್ಲಿ ಇದ್ದುಕೊಂಡು ಲೋಕ ವನ್ನು ಅನುಗ್ರಹಿಸುತ್ತಿದ್ದಾರೆ.

ಅಗಸ್ತ್ಯ ಋಷಿಗಳ ಕಮಂಡಲದಲ್ಲಿ ಭಾರತದ ಸಕಲ ಪುಣ್ಯತೀರ್ಥಗಳೂ ಸಂಗ್ರಹವಾಗಿದ್ದುದರಿಂದ ಕಾಗಿನಿ ನದಿಯಲ್ಲಿ ಸ್ನಾನ ಮಾಡುವವರಿಗೆ ಗಂಗಾದಿ

ಸಕಲ ನದಿಗಳ ಸ್ನಾನ ಫಲವು ದೊರಕುವುದೆಂದು ಆಸ್ತಿಕರ ನಂಬಿಕೆಯಾಗಿದೆ.1

ಈ ಪುಣ್ಯ ಕ್ಷೇತ್ರದಲ್ಲಿ ಶ್ರೀರಾಮನ ಮಗನಾದ ಕುಶನು ಕೆಲವು ಕಾಲ ತಪಸ್ಸು ಮಾಡಿದ್ದನೆಂದು ಹೇಳುತ್ತಾರೆ. ಕುಶನೇ ಪೂರ್ವದಲ್ಲಿ ಇಂದ್ರನಾಗಿದ್ದನು.2

ಇಂಥ ಪುರಾಣೇತಿಹಾಸ ಪ್ರಸಿದ್ಧವಾದ ಪುಣ್ಯತಮಕ್ಷೇತ್ರವನ್ನು ಶ್ರೀ ಜಯತೀರ್ಥರು ತಮ್ಮ ಬಾಳಿನ ಕಾರ್ಯಕ್ಷೇತ್ರವಾಗಿ ಆರಿಸಿಕೊಂಡಿದ್ದರು.

## ಅವತಾರತ್ರಯ

ಜೀವೋತ್ತಮರಾದ ವಾಯುದೇವರು ಹನುಮಭೀಮಮಧ್ವಾವತಾರ ಮಾಡಿ, ಸಚ್ಛಾಸ್ತ್ರವನ್ನು ಸಜ್ಜನರಿಗೆ ಬೋಧಿಸಿ, ಹರಿಸರ್ವೋತ್ತಮತ್ವವನ್ನು ಎತ್ತಿ ಹಿಡಿಯುವ ತತ್ತ್ವವಾದದಿಂದ ಲೋಕೋಪಕಾರ ಮಾಡಿದಂತೆ ಇಂದ್ರ

---

1) ನಾಕಿನೀ ಕಾಗಿನೀ ಭೂತ್ವಾ ಪಾಕಶಾಸನಮನ್ವಗಾತ್ ।
ಏತದ್ಯೋಗ್ಯಂ ಸರ್ವಜನಾನ್ನೇತುಂ ವೈಕುಂಠಮಂದಿರಮ್ ॥
ಎಂದು ಈ ನದಿಯ ಹಿರಿಮೆಯನ್ನು ಪುರಾಣಗಳಲ್ಲಿ ವರ್ಣಿಸಲಾಗಿದೆ.

2) ದೇವ್ಯಾಂ ಸ ಚಾಜನಯದಿಂದ್ರಹುತಾಶನೌ ದ್ವೌ ಪುತ್ರೌ ಯಮೌ
ಕುಶಲವೌ ಬಲಿನೌ ಗುಣಾಢ್ಯೌ ।
—ಮಹಾಭಾರತ ತಾತ್ಪರ್ಯ ನಿರ್ಣಯ— ಸರ್ಗ 9, ಶ್ಲೋಕ-17

ಕುಶರಾಯ ಇಲ್ಲಿ ತಪಸ್ಸು ಮಾಡಿದಂಥ ವಸತಿಯನೋಡಿ ದಿಗ್ದೇಶ ಜಯಿಸಿ ಮಾನಸದಲ್ಲಿ ತಿಳಿದು ಅಕ್ಷೋಭ್ಯತೀರ್ಥರು ಇಲ್ಲಿ ನಸುನಗುತ ವಾಸವಾದರು ಬಿಡದಲೆ ॥

—ವಿಜಯದಾಸರು.

ಕಾಗಿನಿ ನದಿಯ ತೀರದಲ್ಲಿ ಕುಶರಾಯನು ತಪಸ್ಸು ಮಾಡಿದುದರಲ್ಲಿ ಒಂದು ವಿಶೇಷವಿದೆ. ಇಂದ್ರಾಂಶದ ವಾಲಿಯು ಶ್ರೀರಾಮನಿಂದ ಹತನಾದ ಮೇಲೆ ಅವನ ಅನುಗ್ರಹ ಪಡೆದು ಕುಶನಾಗಿ ಹುಟ್ಟಿದನೆಂದು ಹೇಳುತ್ತಾರೆ. ಈ ಕ್ಷೇತ್ರವು ಮುಂದೆ ಇಂದ್ರಾಂಶದ ಜಯತೀರ್ಥರ ಕರ್ಮಭೂಮಿಯೂ ಆದುದರಲ್ಲಿ ಸ್ವಾರಸ್ಯವಿದೆ.

ದೇವರೂ ಮೂರು ಅವತಾರಗಳನ್ನು ಎತ್ತಿ ವಾಯುದೇವರಿಗೆ ಈ ವೈದಿಕಧರ್ಮ ಪುನರುತ್ಥಾನಕಾರ್ಯದಲ್ಲಿ ನೆರವಾದರೆಂದು ಆಸ್ತಿಕರಲ್ಲಿ ಒಂದು ನಂಬಿಕೆ ಇದೆ.1

ದ್ವಾಪರಯುಗದಲ್ಲಿ ಭೂಭಾರಹರಣಾರ್ಥವಾಗಿ ಶ್ರೀ ಹರಿಯು ವಸುದೇವ ದೇವಕಿಯರ ಗರ್ಭದಲ್ಲಿ ಶ್ರೀಕೃಷ್ಣನಾಗಿ ಅವತರಿಸಿದಾಗ, ದೇವಕಾರ್ಯಾರ್ಥ ವಾಗಿ ಇಂದ್ರನು ಪಾಂಡವರಲ್ಲಿ ಒಬ್ಬನಾಗಿ, ಕುಂತೀದೇವಿಗೆ ಅರ್ಜುನನೆಂಬ ಮಗ ನಾಗಿ ಹುಟ್ಟಿ ಧರ್ಮಸಂಸ್ಥಾಪನಕಾರ್ಯದಲ್ಲಿ ಭಗವಂತನಿಗೆ ನೆರವಾದನು. ಕುರುಕ್ಷೇತ್ರಯುದ್ಧವೆಲ್ಲವೂ ಮುಗಿದ ಮೇಲೆ ಕೌರವರೆಲ್ಲರೂ ತಮ್ಮ ಸಮಸ್ತ ಬಲದೊಡನೆ, ತನ್ನ ದಿವ್ಯ ಧನಸ್ಸು ಗಾಂಢೀವದಿಂದ, ನಾಶಹೊಂದಿದರೆಂದು ಅರ್ಜುನನು ಅಹಂಕಾರದಿಂದ ಬೀಗಿದನಂತೆ. ಶ್ರೀಕೃಷ್ಣನ ನೆರವಿಲ್ಲದೆ ತನ್ನಿಂದ ಈ ಕಾರ್ಯ ಸಾಧ್ಯವಿರಲಿಲ್ಲವೆಂಬ ಜ್ಞಾನ ಅವನಿಂದ ಮರೆಯಾಯಿತು. ಅರ್ಜುನನು ತನ್ನ ಶೌರ್ಯ ಪ್ರತಾಪಗಳನ್ನು ಕೊಚ್ಚಿಕೊಳ್ಳುವುದನ್ನು ನೋಡಿ, ಅವನ ಅಹಂಕಾರವನ್ನು ನಾಶ ಮಾಡಬೇಕೆಂದು ಶ್ರೀಕೃಷ್ಣನು ನಿಶ್ಚಯಿಸಿದನು.

ಆದರಂತೆ ಒಂದು ದಿನ ಕೃಷ್ಣನು ವಾಯುವಿಹಾರಾರ್ಥವಾಗಿ ರಥದಲ್ಲಿ ಅರ್ಜುನನನ್ನು ಕೂಡಿಸಿಕೊಂಡು ಕುರುಕ್ಷೇತ್ರದ ಹೊರವಲಯಕ್ಕೆ ಬಂದನು. ಅಲ್ಲಿ ರಥವನ್ನು ನಿಲ್ಲಿಸಿ ಅರ್ಜುನನಿಗೆ ಇಳಿಯಲು ಹೇಳಿದನು. ಅಹಂಕಾರದಿಂದ ತುಂಬಿದ್ದ ಅರ್ಜುನನು ಸಾಮಾನ್ಯ ಮನುಷ್ಯನಂತೆ,

"ಕೃಷ್ಣಾ, ಒಡೆಯನು (ರಥಿಯು) ಮೊದಲು ರಥದಿಂದ ಇಳಿಯುವು ದುಂಟೇ ? ನೀನು ಸಾರಥಿ. ನೀನು ಇಳಿದ ಮೇಲೆ ನಾನು ಇಳಿಯುತ್ತೇನೆ"— ಎಂದು ನುಡಿದನು.

ಕಪಿಧ್ವಜನ ಈ ಮಾತನ್ನು ಕೇಳಿ ವಾಯು ಪುತ್ರನಾದ (ಪತಾಕೆಯಲ್ಲಿದ್ದ) ಆಂಜನೇಯನು ತಿರಸ್ಕಾರದಿಂದ ಅರ್ಜುನನನ್ನು ನೋಡಿ,

"ಮೂರ್ಖಾ, ಎಂಥ ಮಾತು ಹೇಳುವೆ. ಭಗವಂತನ ಸಾಮೀಪ್ಯದಲ್ಲಿ

---

1) ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ ಬಟ್
ತದ್ದರ್ಶನಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ ।
ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋದ್ವಿತೀಯಂ ವಪುಃ
ಮಧ್ವೋ ಯತ್ತು ತೃತೀಯಮೇತದಮುನಾ ಗ್ರಂಥಃ ಕೃತಃ ಕೇಶವೇ॥
—ಅನುವ್ಯಾಖ್ಯಾನ.

ಇದ್ದೂ ಅವನು ಯಾರೆಂದು ತಿಳಿಯದ ನೀನು ಒಂದು ಪಶು! ನಿಜಕ್ಕೂ ಒಂದು ಪಶು" ಎಂದು ಹೇಳಿ ಪತಾಕೆಯಿಂದ ಹಾರಿಹೋದನು.

ಕೃಷ್ಣನು ಈ ಮಾತು ಕೇಳಿ ಮುಗುಳ್ನಕ್ಕು,

"ಈಗಲಾದರೂ ಕೆಳಗಿಳಿಯುವೆಯಾ?" ಎಂದನು. ಆದರೆ ಕೃಷ್ಣನ ಮಾಯೆಗೆ ಒಳಗಾಗಿದ್ದ ಅರ್ಜುನನು

"ಇಲ್ಲ ಕೃಷ್ಣ, ನೀನು ಇಳಿದ ಮೇಲೆಯೇ ನಾನು ಇಳಿಯುತ್ತೇನೆ" ಎಂದು ಹಠ ಹಿಡಿದನು.

ಕೃಷ್ಣನು "ನೀನು ಒಂದು ಪಶು!"—ಎಂದು ಮೂದಲಿಸಿ ಅರ್ಜುನನನ್ನು ಬಲವಂತವಾಗಿ ಕೆಳಕ್ಕೆ ಇಳಿಸಿ, ತಾನೂ ರಥದಿಂದ ನೆಲಕ್ಕೆ ಧುಮುಕಿದನು.

ಕೃಷ್ಣನು ನೆಲಕ್ಕೆ ಇಳಿದುದೇ ತಡ, ಭಯಂಕರ ಆಸ್ಫೋಟನೆಯಾಯಿತು. ರಥಕ್ಕೆ ಸಿಡಿಲು ಬಡಿದಂತೆ, ಅವರ ಕಣ್ಣೆದುರಿನಲ್ಲೇ ದಿವ್ಯವಾದ ಆ ಮಣಿಮಯ ರಥವು ಧಗಧಗನೆ ಹೊತ್ತಿಕೊಂಡು, ಕ್ಷಣಾರ್ಧದಲ್ಲಿ ಉರಿದು ಬೂದಿಯಾಯಿತು.

"ನೋಡಿದೆಯಾ ಅರ್ಜುನಾ, ನೀನು ರಥದಲ್ಲಿಯೇ ಇದ್ದಿದ್ದರೆ, ನಿನ್ನ ರಥಕ್ಕಾದ ಗತಿಯೇ ನಿನಗೂ ಆಗುತ್ತಿತ್ತು. ನಾನು ನಿನ್ನನ್ನು ಏಕೆ ಮೊದಲು ಇಳಿಸಿದೆನೆಂದು ಈಗಲಾದರೂ ತಿಳಿಯಿತೇ"—ಎಂದು ನಕ್ಕನು.

"ತಿಳಿಯಲಿಲ್ಲ".

"ನೀನು ಒಂದು ಪಶು! ನಿನಗೆ ಹೇಗೆ ತಿಳಿಯಬೇಕು. ಈ ರಥಕ್ಕೆ ನಿನ್ನನ್ನು ಕೊಲ್ಲಲೆಂದು ಭೀಷ್ಮದ್ರೋಣಾದಿಗಳು ಬಿಟ್ಟ ಮಹಾಸ್ತ್ರಗಳೂ, ಶಸ್ತ್ರಾಯುಧಗಳೂ ವ್ಯರ್ಥವಾಗಿರಲಿಲ್ಲ. ನಾನು ನಿನ್ನ ರಥದಲ್ಲಿ ಸಾರಥಿಯಾಗಿ ಇರುವವರೆಗೆ ಅವುಗಳನ್ನು ನಿಗ್ರಹಿಸಿದ್ದೆ. ಅವು ನಿನ್ನನ್ನು ಏನು ಮಾಡಲಾರದೆ ತಟಸ್ಥವಾಗಿದ್ದವು. ಈಗ ನಾನು ರಥ ಬಿಟ್ಟು ಇಳಿದೊಡನೆಯೇ, ಅವು ಕಾರ್ಯಪ್ರವರ್ತಗೊಂಡು ಈ ರಥವನ್ನು ಸುಟ್ಟುಹಾಕಿದವು. ನನ್ನ ಮಾತು ಕೇಳದೆ ನೀನು ಹಠ ಮಾಡಿಕೊಂಡು ರಥದಲ್ಲಿ ಇದ್ದಿದ್ದರೆ ನಿನಗೂ ಇದೇ ದುರ್ಗತಿಯಾಗುತ್ತಿತ್ತು. 'ಮಮ ಪ್ರಾಣಾ ಹಿ ಪಾಂಡವಾಃ' ಎಂಬ ಬಿರುದು ಹೊತ್ತ ಮೇಲೆ ನಿನ್ನನ್ನು ಕಾಪಾಡುವುದು ನನ್ನ ಧರ್ಮವಲ್ಲವೆ?" ಎಂದು ಮುಗುಳು ನಕ್ಕನು.

ಅರ್ಜುನನ ಅಹಂಕಾರವೆಲ್ಲವೂ ಒಡಕು ಮಡಕೆಯಿಂದ ನೀರು ಸೋರಿದಂತೆ ಸೋರಿ ಹೋಯಿತು. ಅವನ ವಿಚಾರದ ಕಣ್ಣಿಗೆ ಬಂದಿದ್ದ ಅಜ್ಞಾನದ

ಪೂರೆಯೂ ಹರಿಯಿತು. ಅವನು ತನ್ನ ದುಡುಕು ಸರ್ವಾಪರಾಧವಾಯಿತೆಂದು ಕೃಷ್ಣನ ಕಾಲುಗಳಮೇಲೆ ಬಿದ್ದು ತನ್ನನ್ನು ಕ್ಷಮಿಸಲು ಬೇಡಿಕೊಂಡನು.

"ಏಳು ಅರ್ಜುನ, ಏಳು. ಇದೆಲ್ಲವೂ ನನ್ನ ಲೀಲೆ. ನಿನ್ನನ್ನು ಪರೀಕ್ಷಿಸಲೆಂದು ನಾನು ಈ ನಾಟಕವಾಡಿದೆ. ಶ್ರೇಷ್ಠಭಕ್ತನಾದ ಹನುಮಂತನು ಹೇಳಿದ ಮಾತು ಸುಳ್ಳಾಗಬಾರದು. ನೀನು ಕಲಿಯುಗದಲ್ಲಿ ಪಶು ಜನ್ಮವೆತ್ತಿ ವಾಯು ದೇವರ ಸೇವೆ ಮಾಡಿ, ಮುಂದೆ ಜಯತೀರ್ಥರಾಗಿ ಹುಟ್ಟಿ, ಜನ್ಮವನ್ನು ಸಾರ್ಥಕ ಪಡಿಸಿಕೊಳ್ಳಬೇಕೆಂಬುದೇ ನನ್ನಿಚ್ಛೆ. ಅದಕ್ಕಾಗಿ ನಾವು ನಿನ್ನನ್ನು ಪಶುವೆಂದು ಕರೆದುದು"—ಎಂದು ಸಂತೈಸಿದನು.

ಈ ಮಾತು ಕೇಳಿ ಅರ್ಜುನನು ಅಂಜನ ಪ್ರಯೋಗದಿಂದ ಹೊಸ ದೃಷ್ಟಿ ಪಡೆದವನಂತೆ, ಕೃಷ್ಣನನ್ನು ನಮಸ್ಕರಿಸಿ ಕೈಜೋಡಿಸಿ ನಿಂತು,

"ಭಗವನ್, ನಾನು ಒಂದು ಪಶು. ನನ್ನ ಉದ್ಧಾರ ನಿನ್ನದೇ. ನಾನು ಪಶು ಜನ್ಮವೆತ್ತಿದರೂ ನಿನ್ನ ದಾಸರ ಸೇವೆ ಮಾಡುವಂತೆ ಅನುಗ್ರಹಿಸು"—ಎಂದು ಬೇಡಿಕೊಂಡನು.

ಅದರಂತೆ ಕಲಿಯುಗದಲ್ಲಿ ವಾಯುದೇವರು ಮಧ್ವಾಚಾರ್ಯರಾಗಿ ಪಾಜಕ ಕ್ಷೇತ್ರದಲ್ಲಿ ಹುಟ್ಟಿದರು. ಉಡುಪಿಯಲ್ಲಿ ಶ್ರೀಕೃಷ್ಣನ ಪ್ರತಿಷ್ಠೆ ಮಾಡಿ, ಶಿಷ್ಯರಿಗೆ ಸಚ್ಛಾಸ್ತ್ರವನ್ನು ಬೋಧಿಸುತ್ತಾ, ಭಾರತದ ಉದ್ದ ಅಗಲ ಸಂಚರಿಸುತ್ತಿದ್ದಾಗ ದೇವೇಂದ್ರನು ಎತ್ತಾಗಿ ಅವರ ಗ್ರಂಥಗಳನ್ನು ಹೊತ್ತು ಅವುಗಳ ಅರ್ಥ ತಿಳಿದು ಕೊಂಡು ಅವರನ್ನು ಎಡಬಿಡದೆ ಸೇವೆ ಸಲ್ಲಿಸುತ್ತಿದ್ದನು.1 ಈ ಬಾರಿಯೂ ಭೀಮಾರ್ಜುನರು ಮಧ್ವಾಚಾರ್ಯ ವೃಷಭರಾಗಿ ಅವತರಿಸಿ, ಶ್ರೀಕೃಷ್ಣನ ಸೇವೆಗೆ ಕಂಕಣ ತೊಟ್ಟಿದ್ದರು. ಆದರೆ ಅಜ್ಞಾನಿಗಳಾದ ಮನುಜರಿಗೆ ಈ ದೇವತಾ ರಹಸ್ಯ ಹೇಗೆ ತಿಳಿಯಬೇಕು ?

---

1) ಕುಮತಾನಿ ವಿಧೂಯ ಯತ್ನತಃ ಸ್ವಮತಂ ಸಾಧು ವಿಭೂಷಯಾದ್ಭುತಃ ।
ಸುರಕಾರ್ಯಮಿದಂ ಗುಣಾಕರ ತ್ವರಿತಂ ಮೇ ದಯಿತಂ ಸಮಾಚರ ॥
ಇತಿ ದೇವವರೇಣ ಚೋದಿತಃ ಶಿರಸಾऽऽಜ್ಞಾಂ ಪ್ರತಿಗೃಹ್ಯ ಸನ್ನತಃ ।
ತ್ರಿದಿವಾಧಿಪಯೋಚಿತಂ ಚ ತದ್ಧೃದಿ ಕಾರ್ಯಂ ಸ ಸಮಾದದೇ ಮರುತ್ ॥

(ಮುಂದಿನ ಪುಟಕ್ಕೆ)

ಇಂದ್ರನಿಗೆ ವೃಷಭ ರೂಪ ಹೊಸದೇನೂ ಅಲ್ಲ. ವೇದಗಳಲ್ಲಿ ಇಂದ್ರನನ್ನು ವೃಷಭನೆಂದು ವರ್ಣಿಸಲಾಗಿದೆ.1 ದೇವಾಸುರರ ಯುದ್ಧದಲ್ಲಿಯೂ ಅವನು ವೃಷಭ ರೂಪದಲ್ಲಿ ಕಕುದ್ಮಿ ರಾಜನಿಗೆ ವಾಹನವಾಗಿ ಹೋರಾಡಿದ ವರ್ಣನೆ ಭಾಗವತದಲ್ಲಿ ಬರುತ್ತದೆ. ವೃಷಭನು ಜ್ಞಾನರಾಶಿಯ ಸಂಕೇತ. ಅಂತೆಯೇ ಸಂಮೃದ್ಧಿ ಸುಖಗಳ ಸಂಕೇತ. ಅರ್ಜುನನಾಗಿ ಅವತರಿಸಿದ್ದ ಜೀವ ಈಗ ಶ್ರೀ ಮಧ್ವಾಚಾರ್ಯರ ಬಳಿ ಅವರ ದೈನಂದಿನ ಪಠಣ ಗ್ರಂಥಗಳನ್ನು ಹೊರುವ ಎತ್ತಾಗಿ ಸೇವಿಸುತ್ತಿತ್ತು.2 ಅವರ ಉಳಿದ ಗ್ರಂಥ ಸಮೂಹವನ್ನು ಹೊರಲು ಬೇರೆ ವ್ಯವಸ್ಥೆ ಇತ್ತು.

ಒಮ್ಮೆ ಶಿಷ್ಯರು ಶ್ರೀ ಮಧ್ವಾಚಾರ್ಯರನ್ನು ಕುರಿತು, "ನಿಮ್ಮ ಜಟಿಲವಾದ ಶಾಸ್ತ್ರ ಗ್ರಂಥಗಳಿಗೆ ವ್ಯಾಖ್ಯಾನ ಮಾಡುವವರು ಯಾರು ?"—ಎಂದು

---

ಅಥ ಮಧ್ಯಮಗೇಹನಾಮಕೇ ವಿದುಷಿ ಕ್ಷೇತ್ರವರೇ ಚ ಪಾಜಕೇ ॥
ಉದಿಯಾಯ ಸಮೀರದೇವರಾಟ್ ಕುಮತಾರಣ್ಯವಿನಾಶಹವ್ಯವಾಟ್ ॥
—ವ್ಯಾಸತೀರ್ಥರ ಜಯತೀರ್ಥ ವಿಜಯ—ಸರ್ಗ-1-ಶ್ಲೋಕ 13-15

1) ವೃಷಾಯಮಾಣೋऽವೃಣೀತ ಸೋಮಂ ತ್ರಿಕದ್ರುಕೇಷ್ವಪಿಬತ್ಸುತಸ್ಯ ॥
ಅಸಹಾಯಕಂ ಮಘವಾ ದತ್ತವಜ್ರಂ ಮಹನ್ನೇನಂ ಪ್ರಥಮಾಜಾಮಹೀನಾವರ್ ॥

ಋಗ್ವೇದದ ಪ್ರಥಮಾಷ್ಟಕ ದ್ವಿತೀಯಾಧ್ಯಾಯದ ಹದಿನೈದು ಋಕ್ಕುಗಳು ಇಂದ್ರ ದೇವತಾತ್ಮಕವಾದುದು.

ವಚನಾದ್ದೇವದೇವಸ್ಯ ವಿಷ್ಣೋರ್ವಿಶ್ವಾತ್ಮನಃ ಪ್ರಭೋಃ ।
ವಾಹನತ್ವೇ ವೃತಸ್ತಸ್ಯ ಬಭೂವೇಂದ್ರೋ ಮಹಾವೃಷಃ
ಭಾಗವತ-ಸ್ಕಂಧ-9-ಅಧ್ಯಾಯ-6-ಶ್ಲೋಕ 14

2) ಮಘವಾ ವೃಷಭಾಕೃತಿಂ ವಹನ್ನಶೃಣೋತ್ಪುಸ್ತಕಭಾರಮಾವಹನ್ ।
ಸುಖತೀರ್ಥಮುನೇರ್ಮುಖಾಚ್ಚುತಾನ್ನಿಖಿಲಾರ್ಥಶ್ರುತಿಭಾವಸಂಯುತಾನ್ ॥
ವ್ಯಾ॥ ಜ॥ ವಿ॥ ಸರ್ಗ-1-ಶ್ಲೋಕ—46

ಪ್ರಶ್ನಿಸಿದರಂತೆ. ಅದಕ್ಕೆ ಆಚಾರ್ಯರು ಮುಗುಳ್ನಗುತ್ತಾ "ವ್ಯಾಖ್ಯಾಸ್ಯತ್ಯೇಷ ಗೋರಾಟ್" ಎಂದು ಹೇಳಿ ಎತ್ತನ್ನು ತೋರಿಸಿದರಂತೆ.1

ಈ ಮಾತು ಕೇಳಿದ ಅಸೂಯಾಪರರಾದ ಕೆಲವು ಶಿಷ್ಯರು "ಈ ಎತ್ತು ಹಾವುಕಚ್ಚಿ ಸಾಯಲಿ" ಎಂದು ಶಾಪ ಕೊಟ್ಟರು.2

ಅದರಂತೆ ಸರ್ಪವೊಂದು ಎತ್ತನ್ನು ಕಚ್ಚಿ ಹೊರಟುಹೋಯಿತು. ಪ್ರಾಣೋತ್ಕ್ರಮಣ ಸ್ಥಿತಿಯಲ್ಲಿದ್ದ ಆ ಎತ್ತನ್ನು ನೋಡಿ ಭಕ್ತಾನುಕಂಪದಿಂದ ಶ್ರೀಮಧ್ವಾಚಾರ್ಯರು ದ್ವಾದಶಸ್ತೋತ್ರ ಪಠಿಸಿ, ಆ ಎತ್ತಿನ ವಿಷಬಾಧೆಯನ್ನು ಪರಿಹರಿಸಿದರು. ಅನಂತರ ಪಶ್ಚಾತ್ತಾಪದಗ್ಧರಾದ ಶಿಷ್ಯರನ್ನು ಕುರಿತು ಆಚಾರ್ಯರು "ನೀವೆಲ್ಲರೂ ಆ ವೃಷಭದ ಬಳಿಗೆ ಹೋಗಿ ಮುಖದ ಹತ್ತಿರ ಕಿವಿಗೊಟ್ಟು ಕೇಳಿ. ಅದು ಏನು ಹೇಳುತ್ತಿದೆ ಎಂಬುದು ನಿಮಗೆ ತಿಳಿಯುತ್ತದೆ'. —ಎಂದರು. ಆ ಶಿಷ್ಯರು ಅಂತೆಯೇ ಮಾಡಲು ಆ ವೃಷಭವು ಶ್ರೀಮಧ್ವಾಚಾರ್ಯರಿಂದ ರಚಿತವಾದ ದ್ವಾದಶಸ್ತೋತ್ರವನ್ನು ಅಸ್ಖಲಿತವಾಣಿಯಲ್ಲಿ ಪಠಿಸುತ್ತಿತ್ತು !

ಅಂದಿನಿಂದ ಅವರು ಆ ವೃಷಭನ ವಿಷಯದಲ್ಲಿ ಗೌರವಾನ್ವಿತರಾದರು.

ಅಲ್ಲಿಗೆ ವೃಷಭ ಜನ್ಮ ಪರಿಸಮಾಪ್ತಿಯಾಯಿತು. ಮುಂದಿನ ಜನ್ಮದಲ್ಲಿ

---

1) ಭುವಿ ಶಿಷ್ಯಗಣಾಣಸ್ಸ ಏಕದಾ ನಿಜಗಾದ ಸ್ವಗುರುಂ ವಚೋ ಮುದಾ ॥
ಚರಿತಂ ವಿವೃತಿಂ ಭವತ್ಕೃತೌ ಕಮನುಜ್ಞಾಪಯತೀಹ ಸಂಹತೌ ।
ಅಪಿ ಗೂಹಿತಭಾವಸಂತತೌ ತ್ರಿದಶಾಗಮ್ಯಸದರ್ಥವಿಸ್ತೃತೌ ॥
ಗದಿತಂ ನಿಶಮಯ್ಯ ತದ್ವಚಃ ಪ್ರಹಸನ್ಪ್ರಾಹ ಜಗದ್ಗುರುರ್ವಚಃ ।
ವೃಷಭಶ್ಚರಿಕರ್ತಿ ಮತ್ಕೃತೇರಿತಿ ಟೀಕಾಂ ಶ್ರುತಿಸೂತ್ರಸಂಗತೇಃ ॥
ವ್ಯಾ॥ ಜ॥ ವಿಜಯ-ಸರ್ಗ-1-ಶ್ಲೋಕ 47—48

2) ಅಥ ಶಾಪಮವೇಕ್ಷ್ಯ ಶಿಷ್ಯಕೈಃ ಫಣಿದಷ್ಟೋ ಮ್ರಿಯತಾಮಿತಿ ಸ್ವಕೈಃ ।
ವೃಷಭಂ ಸವಿಮೋಚ್ಯ ಶಾಪತೋಽಭ್ಯುದಜೀಜೀವದನಾಕುಲಂ ತತಃ ॥
ಯತಿರಾಡ್ದ್ವ್ಯಧಿಕಾಂ ದಶಸ್ತುತಿಂ ಪುರತೋಽಂತೇವಸತಾಂ ಸ್ವಸತ್ಕೃತಿಂ।
ವೃಷಭೇಣ ಸುಖಾದವೋಚಯದ್ಭುವಿ ಮೋದಂ ಸುಜನಾನನೀನಯತ್ ॥
ವ್ಯಾ॥ ಜ॥ ವಿಜಯ-ಸರ್ಗ-1-ಶೋಕ 50—51

ದೇವೇಂದ್ರನು ಅಗಸ್ತ್ಯರ ಶಾಪದಂತೆ ಮಂಗಳವೇಡೆಯಲ್ಲಿ ದೇಶಪಾಂಡೆ ಮನೆತನದಲ್ಲಿ ಧುಂಡಿ ರಾಜಕುಮಾರನಾಗಿ ಜನಿಸಿದನು.1 ಅವನಿಗೆ ಅಕ್ಷೋಭ್ಯತೀರ್ಥರ ದರ್ಶನ ಮಾತ್ರದಿಂದಲೇ ಪೂರ್ವಜನ್ಮದ ಸ್ಮರಣೆಯುಂಟಾಗಿ, ರಾಜ್ಯ ಭೋಗವನ್ನು ತೊರೆದು ಸನ್ಯಾಸ ಕೈಗೊಂಡು ಜಯತೀರ್ಥನೆಂಬ ಯತಿನಾಮ ಪಡೆದನು.

ಹಿಂದೆ ದ್ವಾಪರ ಯುಗದಲ್ಲಿ ಲೀಲಾಜಾಲವಾಗಿ ವಿಷ್ಣು ದ್ವೇಷಿಗಳನ್ನು ಗಾಂಢೀವ ಸೂತ್ರದಿಂದ ನಿವಾರಿಸಿದಂತೆ ಈ ಜನ್ಮದಲ್ಲಿ ತಮ್ಮಿಂದ ರಚಿತವಾದ ಸೂತ್ರಭಾಷ್ಯಟೀಕೆ ಮುಂತಾದ ಗ್ರಂಥಗಳಿಂದ ಹರಿಸರ್ವೋತ್ತಮತ್ವವನ್ನು ಪ್ರಚಾರಮಾಡಿ, ಶ್ರೀಕೃಷ್ಣನ ಪ್ರೀತಿಗೆ ಪಾತ್ರರಾದರು.2

ಹೀಗೆ ದೇವೇಂದ್ರನು ಅರ್ಜುನನಾಗಿ ನರರೂಪದಲ್ಲಿ ಶ್ರೀಕೃಷ್ಣ ಹಾಗೂ ಭೀಮಸೇನರ ಸೇವೆ ಮಾಡಿ, ವೃಷಭ ರೂಪದಲ್ಲಿ ಶ್ರೀ ಮಧ್ವಾಭಿನಾಮಕ ವಾಯುದೇವರ ಸೇವೆ ಮಾಡಿ ಅವರ ಅನುಗ್ರಹ ವಿಶೇಷದಿಂದ ಜಯತೀರ್ಥರಾಗಿ ಅವತರಿಸಿ, ತನ್ನ ಅವತಾರ ಕಾರ್ಯವನ್ನು ಸಮಾಪ್ತಿಗೊಳಿಸಿದನು.

## ಹರಿದಾಸರು ಕಂಡ ಜಯತೀರ್ಥರು

ಶ್ರೀ ಜಯತೀರ್ಥರನ್ನು ಕನ್ನಡ ನಾಡಿನ ಅನೇಕ ಮಂದಿ ಹರಿದಾಸರು ತಮ್ಮ ಕೃತಿಗಳಲ್ಲಿ ವರ್ಣಿಸಿದ್ದಾರೆ. ಹರಿದಾಸ ಪಂಥವು ಕನ್ನಡ ನಾಡಿನಲ್ಲಿ

---

1) ಪುರುರಥಿಯಂ ಸಮಸೇವತ ಯಃ ಪುರಾ
ವೃಷಭಮಾಪಧರೋ ಹಿ ಪುರಂಧರಃ ।
ಅಜನಿ ಸಾದಿವರಸ್ಯ ನಿಕೇತನೇ
ಪ್ರಥಿತವಿಪ್ರವರಾಚ್ಯುತಪೂಜನೇ ॥
ವ್ಯಾ॥ ಜ॥ ವಿ॥ ಸರ್ಗ-3-ಶ್ಲೋಕ—1

2) ಇತಿ ನಿಗದಿತಮಸ್ಮಾಕರ್ಣ್ಯ ಸಾದಿಪ್ರವೇಕಸ್ತಟನಿಕಟನಿಷಣ್ಣಂ ವೀಕ್ಷ್ಯ
ಚಾತಿಪ್ರಸನ್ನಃ ॥
ಯತಿವರಮಥ ತಂ ಸಸ್ಮಾರ ಪೂರ್ವಾನುಭೂತಂ ದಶಹೃದಯನಿಯೋಗಂ
ಜನ್ಮ ಗವ್ಯಂ ಚ ಭೂತವಾನ್ ॥
ವ್ಯಾ॥ ಜ॥ ವಿ॥ ಸರ್ಗ-4-ಶ್ಲೋಕ—8

ಶ್ರೀ ಮಧ್ವಾಚಾರ್ಯರಿಂದ ಆರಂಭವಾಯಿತೆಂದು ಹೇಳುತ್ತಾರೆ. ಭಗವಂತನಲ್ಲಿ ಮಾಡುವ ಅನನ್ಯಶರಣಾಗತಿಭಾವವೇ ಭಕ್ತಿ. ಭಗವಂತನ ವಿಷಯಿಕ ಯಥಾರ್ಥಜ್ಞಾನದಿಂದ ನಿರ್ಮಲವೂ, ಸದೃಡವೂ ಆದ ಪ್ರೇಮದಿಂದ ಕೂಡಿದ ಇಂಥ ಭಕ್ತನನ್ನು ಭಗವಂತನಾದ ಶ್ರೀಹರಿಯು ತನ್ನವನೆಂದು ತಿಳಿದು ಉದ್ಧರಿಸುತ್ತಾನೆ. ಈ ದೃಷ್ಟಿಯಿಂದ ಶ್ರೀ ಮಧ್ವಾಚಾರ್ಯರು ಬರೆದ ದ್ವಾದಶ ಸ್ತೋತ್ರದಿಂದ ಭಕ್ತಿ ಪಂಥದ ಉಗಮವೆಂದು ಹರಿದಾಸರು ತಿಳಿಯುತ್ತಾರೆ.

ಶ್ರೀ ನರಹರಿತೀರ್ಥರಿಂದ ಕನ್ನಡ ನಾಡಿನಲ್ಲಿ ಆರಂಭವಾದ ದಾಸಕೂಟಕ್ಕೆ ಸೇರಿದ ಹರಿದಾಸರೆಲ್ಲರೂ ಜಯತೀರ್ಥರ ಮಹಿಮೆಯನ್ನು ಮುಕ್ತಕಂಠದಲ್ಲಿ ಸ್ತುತಿಸಿದ್ದಾರೆ 1 ಶ್ರೀ ವ್ಯಾಸರಾಜರಿಂದ ತೊಡಗಿ ವರದೇಶವಿಠಲರವರೆಗೆ, ಎಲ್ಲ ದಾಸಶ್ರೇಷ್ಠರು ಜಯತೀರ್ಥರು ಮಧ್ವಮತಕ್ಕೆ ಸಲ್ಲಿಸಿದ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸಿದ್ದಾರೆ.

ಶ್ರೀ ವ್ಯಾಸರಾಯರು, ವಾದಿರಾಜರು, ವಿಜಯದಾಸರು, ಜಗನ್ನಾಥ ದಾಸರು, ವ್ಯಾಸತತ್ತ್ವಜ್ಞರು, ಪ್ರಸನ್ನವೆಂಕಟದಾಸರು, ಶ್ರೀಪತಿವಿಠಲರು ಮತ್ತು ವರದೇಶ ವಿಠಲರು ಕಂಡ ಜಯತೀರ್ಥರ ಮಹಿಮೆಯನ್ನು ಕುರಿತು ಬರೆದಿರುವ ಕೀರ್ತನೆಗಳಲ್ಲಿ ಕೆಲವನ್ನು ಇಲ್ಲಿ ಪರಿಶೀಲಿಸಬಹುದು.

ಪ್ರಹ್ಲಾದನ ಅವತಾರರೆನಿಸಿರುವ ಶ್ರೀ ವ್ಯಾಸರಾಯರು ಮಾಡಿರುವ ಟೀಕಾರಾಯರ ಕೀರ್ತನೆ ಸುಪ್ರಸಿದ್ಧವಾಗಿದೆ. ವ್ಯಾಸರಾಯರು ವಿಜಯನಗರದ ಆರು ಜನ ಚಕ್ರವರ್ತಿಗಳಿಗೆ ರಾಜಗುರುಗಳಾಗಿ ಮೆರೆದು, ತಮ್ಮ ತಾತ್ಪರ್ಯ ಚಂದ್ರಿಕೆ, ನ್ಯಾಯಾಮೃತ, ತರ್ಕತಾಂಡವಗಳೆಂಬ ವ್ಯಾಸತ್ರಯ ಗ್ರಂಥಗಳಿಂದ ಮಧ್ವಮತದ ಮುನಿತ್ರಯರಲ್ಲಿ ಒಬ್ಬರೆಂದು ಪ್ರಸಿದ್ಧರಾದ ಮಹಾನುಭಾವರು.

---

1) ದಾಸ ಸಾಹಿತ್ಯದ ನಾಲ್ಕು ಮಜಲುಗಳಲ್ಲಿ ಆಚಾರ್ಯ ಪುರುಷರು :

ಮೊದಲನೆಯವರು— ನರಹರಿ ತೀರ್ಥರು

ಎರಡನೆಯವರು—ಶ್ರೀ ಪಾದರಾಜರು

ಮೂರನೆಯವರು—ವ್ಯಾಸರಾಜರು ಅವರ ಶಿಷ್ಯರು ಪುರಂದರದಾಸರು – ಕನಕದಾಸರು – ವಾದಿರಾಜರು.

ನಾಲ್ಕನೆಯವರು—ವಿಜಯದಾಸರು.

ಇವರು ಜಯತೀರ್ಥರನ್ನು ಸಮರಿಲ್ಲದ ಗುರುವೆಂದು ಕರೆದಿದ್ದಾರೆ.[1] ಅವರು ಮದನಗೋಪಾಲಪ್ರಿಯರು. ಅದ್ವೈತ ಮತದ ಮಾಯಾವಾದಿಗಳ ಕಡುಗರ್ಜಿಸುವ ಕೇಸರಿ. ಅವರ ನುಡಿಯನ್ನು ಕೇಳಿದ ಮಾತ್ರಕ್ಕೆ ಮಾಯಿಗಳು ಭೀತಿಯಿಂದ ಅಡವಿಯಲ್ಲಿ ಅಡಗುವರು.

'ಕುಟಿಲ ಮತಗಳೆಂಬೋ ಚಟುಲಾಂಧಕಾರಕೆ, ಪಟುತರ ತತ್ತ್ವಪ್ರಕಾಶಿಕೆ ಯೆಂಬೋ ಚಟುಲಾತಪದಿಂದ ಖಂಡಿಸಿ, ತೇಜೋತ್ಕಟದಿ' ಮೆರೆದ ಬುಧ ಕಟಕಾಬ್ಜ ಮಿತ್ರ, ಅವರು.

ಅವರು ದ್ವಿಜಾವಳಿಯ ಮುಖಕಮಲಗಳನ್ನು ಅರಳಿಸುತ್ತಾರೆ. ವಿಮತರ ಮುಖಕಮಲಗಳನ್ನು ಬಾಡಿಸುತ್ತಾರೆ. ಸ್ವಮತರ ಹೃತ್ಸಂತಾಪಗಳನ್ನು ನಾಶ ಪಡಿಸುವ, ವಿಮಲಸುಕೀರ್ತಿಯ ಚಂದ್ರ.

ವನಜನಾಭನ ಗುಣಮಣಿಗಳು ಸರ್ವಜ್ಞ
ಮುನಿಕೃತಗ್ರಂಥವವನಿಯೊಳಡಗಿರೆ ಸ
ಜ್ಜನರಿಗೆ ಟೀಕಾಂಜನದಿಂದ ತೋರಿಸಿ
ಘನಸುಖಸಾಧನ ಮಾಡಿದ್ಯೋಧೀರ ||
ವೇದಶಾಸ್ತ್ರಗಳೆಂಬೊ ಶೃಂಗಗಳಿಂದ ಸು
ಧಾದಿ ಗ್ರಂಥಗಳೆಂಬೊ ಸ್ತನಗಳಿಂದೊಪ್ಪೊ ತತ್ತ್ವ
ಬೋಧಯೆಂಬ ದುಗ್ಧ ಶಿಷ್ಯವತ್ಸಂಗಳಿಗೆ
ಆದರದಲಿ ಕೊಟ್ಟ ಯತಿ ಸುರಧೇನು ||

---

1) ಆನಂದತೀರ್ಥೋಪದಿಷ್ಟೋ ನಿಧಿರ್ನಾರಾಯಣಾಹ್ವಯಃ |
ಪ್ರದರ್ಶಿತೋ ಯೇನ ಸಮ್ಯಕ್ ಜಯತೀರ್ಥಂ ತಮಾಶ್ರಯೇ ||
ವ್ಯಾಸರಾಜರು-ತರ್ಕತಾಂಡವ.

ಚಿತ್ರೈಃ ಪದೈಶ್ಚ ಗಂಭೀರೈರ್ವಾಕ್ಯೈರ್ಮಾನೈರಖಂಡಿತೈಃ |
ಗುರುಭಾವಂ ವ್ಯಂಜಯಂತೀ ಭಾತಿ ಶ್ರೀಜಯತೀರ್ಥವಾಕ್ ||
ವ್ಯಾಸರಾಜರು-ನ್ಯಾಯಾಮೃತ.

ಮಿಥ್ಯಾಸಿದ್ಧಾಂತದುರ್ಧ್ವಾಂತವಿಧ್ವಂಸನವಿಚಕ್ಷಣಃ ||
ಜಯತೀರ್ಥಾಖ್ಯತರಣಿರ್ಭಾಸತಾಂ ನೋ ಹೃದಂಬರೇ ||
ವ್ಯಾಸರಾಜರು-ತಾತ್ಪರ್ಯಚಂದ್ರಿಕಾ.

"ವ್ಯಾಸಸೂತ್ರಗಳೆಂಬೊ ಮಂದರವನು ವೇದರಾಶಿಗಳೆಂಬೊ ಕ್ಷೀರ ವಾರಿಧಿಯೊಳಿಟ್ಟು ಶ್ರೀ ಸರ್ವಜ್ಞರ ವಾಕ್ಪಾಶದಿ ಸುತ್ತಿ ಭಾಸುರ ನ್ಯಾಯಸುಧೆ ಪಡೆದೆ ಯತೀಂದ್ರ".

"ಅರ್ಥಿಮಂದಾರ ವೇದಾರ್ಥವಿಚಾರಸಮರ್ಥ ಶ್ರೀಕೃಷ್ಣಪಾದಾಂಬುಜ ಲೋಲ ಪ್ರತ್ಯರ್ಥಿ ಮತ್ತೇಭಕಂಠೀರವಾಕ್ಷೋಭ್ಯತೀರ್ಥ ಕರಜಜಯತೀರ್ಥ ಯತೀಂದ್ರ" —ಎಂಬುದಾಗಿ ಅವರನ್ನು ಹೊಗಳಿದ್ದಾರೆ. ಶ್ರೀ ಜಯತೀರ್ಥರು ಮಾಡಿದ ಲೋಕೋಪಕಾರವನ್ನು ಮುಕ್ತ ಮನಸ್ಸಿನಿಂದ ಹಾಡಿ ಹೊಗಳಿದ್ದಾರೆ ವ್ಯಾಸ ರಾಯರು. ಜಯತೀರ್ಥರ ಮಹಿಮೆಯನ್ನು ವ್ಯಾಸರಾಯರೇ ಬಲ್ಲರು !

ಸಾಸಿರ ಜಿಹ್ವೆಯುಳ್ಳ ಆದಿಶೇಷನಿಂದಲೂ ಅವರ ಇರವನ್ನು ಹೊಗಳಿಸಿ ಕೊಳ್ಳಲು ಸಾಧ್ಯವಿಲ್ಲದ ಇಂಥ ಯತಿಶ್ರೇಷ್ಠರು ವ್ಯಾಸರಾಯರೇ—

"ವರ್ಣಿಸಲಳವೇ ಗುಣಸಾಂದ್ರನಾ
ಕರ್ಣಜನಕ ಕೋಟಿ ತೇಜನಾ
ಶ್ರೀಶಭಜಕ ಶ್ರೀ ಜಯಮುನೀಂದ್ರನಾ ॥ಪ॥

ಮಧ್ವಶಾಸ್ತ್ರ ದುಗ್ಧನಿಧಿಯ । ಬುದ್ಧಿಯೆಂಬ ಮಂದರಗಿರಿಯ । ಶುದ್ಧ ಸೂತ್ರ ನೇತ್ರದಿಂದ ಬದ್ಧಮಾಡಿ ಪಿಡಿದು ಕಡೆದು । ಶುದ್ಧಯುಕುತಿ ಸುಧೆ ತೆಗೆದನಾ ಶಿಷ್ಯಜನಕೆ । ಶ್ರದ್ಧೆಯಿಂದ ಅದನು ಎರೆದನಾ । ಕ್ರೋಧದಿಂದ ಕ್ರುದ್ಧವಾದಿ ದೈತ್ಯರ ಗೆಲಿದನಾ ಜಯಮುನೀಂದ್ರನಾ ॥ ೧ ॥

ಮಾನಿನಿಯರ ಶೀಲರಾದೀ । ಮಾನವರನು ಜರಿದು ಹರಿಯ । ಧ್ಯಾನದಲ್ಲಿ ಮನವನಿಲ್ಲಿಸಿ । ಒಲಿಸಿ । ಹಾನಿಯಿಲ್ಲದ ಮುಕುತಿ ಪಡೆದ । ಜ್ಞಾನಮತವ ಜಗಕೆ ಸಾರ್ದನಾ । ಶಿಷ್ಯಜನಕೆ ಸಾನುರಾಗದಿ ತತ್ತ್ವಪೇಳ್ದನಾ । ಜಯಮು ನೀಂದ್ರನಾ ॥ ೨ ॥

ಸರಸದಿಂದ ಮೂರು ಏಳು । ವಿರಸದುಷ್ಟಭಾಷ್ಯಗಳನು ತರಿದ ಅಕ್ಷೋಭ್ಯತೀರ್ಥಕರಜನಾ । ಶಿಷ್ಯಜನರ ದುರುಳ ಮೋಹತಿಮಿರ ದಿನಪನಾ । ನಮ್ಮ ಪರಮ ಗುರುಸಿರಿಕೃಷ್ಣನ ಪಾದಭಜಕನಾ ॥ ೩ ॥

ಹೀಗೆ ಹೊಗಳಿ ಜಯತೀರ್ಥರಿಗೆ ಜಯಕಾರ ಹೇಳಿದ್ದಾರೆ ವ್ಯಾಸರಾಯರು.

ಜಯ ಜಯ ಜಯ ಜಯ ಜಯರಾಯಾ
ದಯದಿಂ ಪಾಲಿಸೊ ಮಹರಾಯಾ ।

ವ್ಯಾಸರಾಯರ ವಿದ್ಯಾಶಿಷ್ಯರಾಗಿ ಅವರಂತೆ ಶಾಸ್ತ್ರಸಾಹಿತ್ಯಕ್ಕೂ ದಾಸ

ಸಾಹಿತ್ಯಕ್ಕೂ ಅನುಪಮ ಸೇವೆ ಸಲ್ಲಿಸಿರುವ, ಉಡುಪಿಯ ಅಷ್ಟಮಠಗಳ ಯತಿಗಳಲ್ಲಿ ಹಿರಿಯರಾಗಿ, ಅನೇಕ ಬಾರಿ ಪರ್ಯಾಯ ಕ್ರಮದಲ್ಲಿ ಶ್ರೀಕೃಷ್ಣನನ್ನು ಕೈಯಾರೆ ಅರ್ಚಿಸಿದ, ಸೋದೆಮಠದ ವಾದಿರಾಜರು ಜಯತೀರ್ಥರಲ್ಲಿ 'ಜಲಧಿ ಸಮಗಾಂಭೀರ್ಯ'ವನ್ನು ಗುರುತಿಸಿದ್ದಾರೆ.

ಜಯತೀರ್ಥರು ವಾದಿರಾಜರ ಪಾಲಿಗೆ ಶ್ರೀ ಹಯಗ್ರೀವ ಮೂರುತಿಯ ಪದವನ್ನು ತವಕದಲ್ಲಿ ಅವಾವ ಪರಿಯಲ್ಲಿ ಚಿಂತಿಪ ವರಚಿಂತಾಮಣಿ. ಪಾವನ ಗುರು ಶ್ರೀಮದಾನಂದತೀರ್ಥರ ಭಾವಗಳನೆ ಪೇಳಿ ಸುಜನರನ್ನು ಕಾಯುವವರು.

ಇವರ ಕಣ್ಣಿಗೆ ಮಧ್ವಾಚಾರ್ಯರೇ ಜಯತೀರ್ಥರಲ್ಲಿ ಬಂದು ನಿಂತಿದ್ದಾರೆ. ಅವರೇ ನಿಂತು, ಅದ್ವೈತ ಮತವನ್ನು ಭೇದಿಸಿ ಜರೆವಂಥ ಉದ್ಯೋಗದಲ್ಲಿರಿಸಿ, ಸುಜನರನ್ನೂ ಉದ್ಧಾರ ಮಾಡಿದ ಧೀರರು.

ಅವರು ಭಕ್ತ ಜನರಿಗೆ ಪುರುಷಾರ್ಥಗಳನ್ನು ಇತ್ತವರು. ಅಂಜನ ಸದೃಶ ದೃಷ್ಟಿಯಿಂದ ಸನ್ನ್ಯಾಯವಿವೃತಿ ಮತಬೇಧಗಳಲ್ಲಿ ಜನರಿಗೆ ಪನ್ನಗಶಯನನ ಭಕ್ತಿ ಪ್ರಸನ್ನಗೊಳಿಸಿದ ಮಹನೀಯರು.

ಬುಧರು ಅವರ ಶ್ರೀಮನ್ನ್ಯಾಯಸುಧಾ ಶ್ರವಣದಿಂದಲೇ ಮೋಹಗಳನ್ನು ಜರಿದು ತತ್ತ್ವವಾದದಿಂದ ಶ್ರೀಕೃಷ್ಣನ ಸಾಕ್ಷಾತ್ಕಾರ ಪಡೆಯುವರು.

ಇಂಥವರನ್ನು ವಾದಿರಾಜರು ಜಯವಿತ್ತು ಭಯವ ಪರಿಹರಿಸಲು ಪ್ರಾರ್ಥಿಸಿದ್ದಾರೆ.

ಜಯವಿತ್ತು ಜಗದೊಳು ಭಯವ ಪರಿಹರಿಸೋ
ಜಯರಾಯಾ ಜಯ ರಾಯಾ ॥ ಪ ॥
ಖುಲ್ಲ ಮಾಯಿಗಳ ಹಲ್ಲನೆ ಮುರಿದು
ವಲ್ಲಭ ಜಗಕೆ ಶ್ರೀನಲ್ಲನೆಂದರುಹಿದೆ ॥ ೧ ॥
ಮಧ್ವರಾಯರ ಮತ ಶುದ್ಧ ಶರಧಿಯೊಳು
ಉದ್ಭವಿಸಿದ ಗುರು ಸಿದ್ಧಾಂತಸ್ಥಾಪಕ ॥ ೨ ॥
ಸಿರಿಹಯವದನನ ಚರಣ ಕಮಲವನು
ಭರದಿ ಭಜಿಸುವರ ದುರಿತಗಳ್ಹರಿಸುವಿ ॥ ೩ ॥

ದಾಸಸಾಹಿತ್ಯದ ಚತುರ್ಥ ಘಟ್ಟದ ಆಚಾರ್ಯಪುರುಷರು ವಿಜಯದಾಸರು. ಗಹನವಾದ ಮಧ್ವಸಿದ್ಧಾಂತದ ಪ್ರಮೇಯಗಳನ್ನು ತಿಳಿಯಾದ ಕನ್ನಡ

ಭಾಷೆಯಲ್ಲಿ ಹಾಡುಗಳಾಗಿ ರಚಿಸಿ, ಗೋಪಾಲದಾಸರು, ಜಗನ್ನಾಥದಾಸರಂಥವರಿಂದ ಸನ್ಮಾನಿತರಾದ ಮಹಾನುಭಾವರು.

ಇವರು ತಮ್ಮ ಜಯತೀರ್ಥ ಸುಳಾದಿಯಲ್ಲಿ ಜಯತೀರ್ಥರ ಜೀವನದ ಪ್ರಮುಖ ಘಟ್ಟಗಳನ್ನು ಏಕೋ ವಿವರವಾಗಿ ಚಿತ್ರಿಸಿಲ್ಲ.

ಇವರ ಭಾವುಕ ಕಣ್ಣುಗಳಿಗೆ ರಾವುತರಾಗಿದ್ದ ಧೋಂಡೋಪಂತರ ಮಂಗಳಮೂರ್ತಿ ಮಾತ್ರ ಗೋಚರಿಸಿದೆ, ಅಷ್ಟೇ.

ಭಕ್ತ ಜನರು ದೇವಾಂಶರಾದ ಜಯತೀರ್ಥರ ಸ್ವರೂಪವನ್ನು ಭಾವದಿಂದ ತಿಳಿದು ಕೊಂಡಾಡಿದರೆ ಧನ್ಯರಾಗುವರು. "ಈ ಮುನಿಯು ಒಲಿದರೆ ಅವನೇ ಭಾಗ್ಯವಂತ. ಭೂಮಿಯೊಳಗೆ ಮುಕ್ತಿಯೋಗ್ಯನೆನಿಸುವನು. ಭೀಮಭವಾಂಬುಧಿ ಬತ್ತಿಹೋಗುವುದು. ನಿಸ್ಸೀಮನಾಗುವ ಪಂಚಭೇದಾರ್ಥಪ್ರಮೇಯದಲ್ಲಿ. ತಾಮಸಜನರಿಗೆ ಭಕ್ತಿ ಪುಟ್ಟದು. ದುಃಖ ಮಹೋದಧಿಯೊಳು ಸೂಸುತಲಿಪ್ಪರು. ದುರುಳ ಜನರ ನೋಡಿ ನಾ ಮೊರೆಯಿಡುವೆನು ಸ್ವಾಮಿ ಈಗಲೇ ಬಂದು ಕಾಯೋ ಕರುಣದಲ್ಲಿ" ಎಂದು ಬೇಡಿದ್ದಾರೆ.

"ಟೀಕಾಚಾರ್ಯರ ಪಾದ ಸೋಂಕಿದ ಕೊನೆಧೂಳಿತಾಕಿದಮನುಜನಿಗೆ ಕಾಕುಗೊಳಿಸುವ ಅನೇಕ ಪಾಪಂಗಳು" ಬೀರಿ ಬಿಸಾಡಲ್ಪಡುವುವು.

ಅವರು ಮಧ್ವಮತವೆಂಬೊ ದುಗ್ಧಾಬ್ಧಿಯೊಳು ಉದ್ಭವಿಸಿದ ಚಂದ್ರ. ಅದ್ವೈತಮತವಿಪಿನಭೇದನಕುಠಾರ. ವಿದ್ಯಾರಣ್ಯರ ಗರ್ವವನ್ನು ಪರಿಹರಿಸಿದವರು. ಅವರು ಚಿತ್ತವಿಟ್ಟು ಮಾಡಿದ ಟೀಕೆಗಳಿಂದ ಏಳು ಲೋಕಗಳನ್ನು ಉದ್ಧರಿಸಿದವರು. ಇಂಥ ಜಯತೀರ್ಥರ ಮಹಿಮೆ ಎಂಥದು ?

ಜ ಎಂದು ನುಡಿಯಲು ಜಯಶೀಲನಾಗುವ
ಯ ಎಂದು ನುಡಿಯಲು ಯಮನಂಜುವ
ತೀ ಎಂದು ನುಡಿಯಲು ತಿಮಿರಪಾತಕಹಾನಿ
ರ್ಥ ಎಂದು ನುಡಿದರೆ ತಾಪತ್ರಯ ಪರಿಹಾರ.

ಇನ್ನು ಕೊನೆನಾಲಗೆಯಿಂದ ಲೇಶಮಾತ್ರ ನೆನೆಯೆ ಅಜ್ಞಾನ ನಾಶವಾಗುವುದೆನ್ನಲು ಸಂದೇಹವೇನು ?

ಜಯರಾಯರನ್ನು ನೆನೆದರೆ, ಮನದಿ ಪಾಡಿದರೆ
ಭಯನಾಶವಾಗಿ ಜಯವಾಗುವುದು.

ಮಹಾಮಹಿಮರಾದ ಜಯತೀರ್ಥರು ಮಾಡಿದ ಕಾರ್ಯವೆಂಥದು ?

ದುರುಳ ಮತವೆಂಬೋ ಕರಿಗೆ ಅಂಕುಶವಿತ್ತು
ಸರಸಾದ ಗ್ರಂಥದಾನಂದಮುನಿ
ವಿರಚಿಸಿರಲಾಗಿ ಪರಮಭಕ್ತಿಯಿಂದ ವಿ
ಸ್ತಾರವಮಾಡಿದ ಕರದ ಕನ್ನಡಿಯಂತೆ.

ಜಯತೀರ್ಥರು ಮತ್ತೇನು ಮಾಡಿದರು ?

ವಾದಿಗಳನ್ನೆಲ್ಲ ಜಯಿಸಿ ಡಂಗುರ ಹೊಯಿಸಿ
ಭೇದಾರ್ಥಜ್ಞಾನ ಸತ್ಯವೆನಿಸಿ
ಈ ಧರೆಯೊಳು ಹರಿಯೇ ಪರದೈವವೆಂದು
ಸಾಧಿಸಿ ಉದ್ದಂಡನಾದ ಯತಿಕುಲತಿಲಕ

ವಿಜಯದಾಸರು ಜಯತೀರ್ಥರು ಮಾಡಿದ ಮಹೋಪಕಾರವನ್ನು ಒಂದು ಮಾತಿನಲ್ಲಿ ಹೇಳುತ್ತಾ ಮೋಕ್ಷಕ್ಕೆ ಜಯಪತ್ರವನ್ನು ಕೊಡಿಸಿದ ಮಹಾನುಭಾವ ಋಷಿ ಎಂದು ಸ್ತುತಿಸಿದ್ದಾರೆ. ಆದುದರಿಂದ

ಸಾರಿ ಭಜಿಸಿರೋ ಟೀಕಾರಾಯರಂಘ್ರಿಯ
ಘೋರಪಾತಕಾಂಬುಧಿಯ ಪಾರಮಾಳ್ಪರ || ಪ ||
ಮೋದತೀರ್ಥರ ಮತವ ಸಾಧಿಸುವರ
ಪಾದಸೇವ್ಯರ ದುರ್ಬೋಧ ಕಳೆವರಾ || ೧ ||
ಭಾಷ್ಯ ತತ್ತ್ವವ ವಿಸ್ತಾರ ಮಾಳ್ಪರಾ
ದೋಷದೂರರಾ ಆದಿಶೇಷಾವೇಶರ || ೨ ||
ಕಾಮಗೆದ್ದರಾ ಹರಿಗೆ ಪ್ರೇಮ ಪೂರ್ಣರಾ
ನೇಮ ನಿತ್ಯರಾ ನಿಷ್ಕಾಮನಾಪರ || ೩ ||
ಮೋಕ್ಷ ದಾತರಾ ಅಕ್ಷೋಭ್ಯತೀರ್ಥರಾ
ಸಾಕ್ಷಿ ಇಪ್ಪರಾ ಅಪೇಕ್ಷೆ ರಹಿತರ || ೪ ||
ವಿಜಯ ವಿಠಲಾನಂಘ್ರಿ ಭಜನೆ ಮಾಳ್ಪರ
ಕುಜನ ಭಂಜರಾದಿಗ್ವಿಜಯರಾಯರ || ೫ ||

ಕನ್ನಡ ಭಾಷೆಯಲ್ಲಿ ರಚಿತವಾದ ಶ್ರೀಮನ್ನ್ಯಾಯಸುಧಾ ಗ್ರಂಥವೆಂದೂ ಪ್ರಸಿದ್ಧವಾದ ಶ್ರೀ ಹರಿಕಥಾಮೃತಸಾರವನ್ನು ಬರೆದು ಹರಿಗುರುಗಳ ಅನುಗ್ರಹಕ್ಕೆ

ಪಾತ್ರರಾದ ಶ್ರೀ ಜಗನ್ನಾಥದಾಸರು ಅನುದಿನದಲ್ಲಿ ಜಯರಾಯರ ದಯವನ್ನು ಪ್ರಾರ್ಥಿಸಿದ್ದಾರೆ.

ಜಯತೀರ್ಥರು ಸುರನಾಥರು. ಧರೆಯೊಳಗೆ ದಯದಿ ಅವತರಿಸಿದವರು. ಅವರು ವಿದ್ವನ್ಮಂಡಲಿಯಲ್ಲಿ ಸದ್ವಿನುತರು.

ಅವರು ವಿದ್ಯಾರಣ್ಯರ ಅವಿದ್ಯಾಮತದ ಕುಸಿದ್ಧಾಂತಗಳನ್ನು ಅಪಧ್ವನಿಸಿದರು. ಪೂರ್ಣಪ್ರಜ್ಞರ ಸನ್ಮತವನ್ನು ಉದ್ಧರಿಸಿದ ಭೂಸುರವರವರದರು.

ಜಯತೀರ್ಥ ಗುರುರಾಯರು ಕವಿಗೇಯರು, ಕಾರುಣ್ಯಸಾಗರರು, ಕಾಮಿತ ಫಲದಾತ ಜಗನ್ನಾಥ ವಿಠಲಸ್ವಾಮಿಯ ಪರಮ ದೂತರು.

ಅಂಥ ಮಹಾನುಭಾವರನ್ನು ಆನಂದದಾತ, ಪರಮಹಂಸ, ಕುಲವರ ಎಂದು ಕರೆದು ಸುತತ್ತ್ವವನ್ನು ಕರುಣದಿಂದ, ತಮಗೆ ಅರುಪಲು ಭಕ್ತಿಭಾವದಿಂದ ಪ್ರಾರ್ಥಿಸಿದ್ದಾರೆ.

ಐಜಿ ಆಚಾರ್ಯರ ವಿದ್ಯಾಶಿಷ್ಯರಾದ ಅಡವಿ ಆಚಾರ್ಯರೆಂದು ಪ್ರಸಿದ್ಧರಾದ ವಿಷ್ಣುತೀರ್ಥಾಚಾರ್ಯರೆಂಬುವರು ಜಯತೀರ್ಥರನ್ನು ತಮ್ಮದೇ ಆದ ರೀತಿಯಿಂದ ಸ್ತುತಿಸಿದ್ದಾರೆ.

ಜಯತೀರ್ಥರು ದುರ್ಮಾಯಿಮತಗಳ ಮರ್ಮಭೇದಿಸಿ ಸುಧಾ ನಿರ್ಮಾಣ ಮಾಡಿದ ಸನ್ಮಾನ್ಯರು. ಯಾವಾಗಲೂ ವಾಸುದೇವ ವಿಠಲನ್ನ ಸೇವಿಸಿ ಭಜಿಸುವವರು.

ಅವರ ಒಂದೊಂದು ವಚನವೂ ಗುರುತರಾನಂದತೀರ್ಥರ ಭಾವಕ್ಕೆ, ವಂದಿಸುವ ಜನ ಬೇಡಿದ ಫಲಕ್ಕೆ ಮಂದಾರತರು.

ಗುರುಮಧ್ವಶ್ರೀಕೃತಿವಿವೃತಿ ರಚಿಸುವಲ್ಲಿ ಅವರಿಗೆ ಸರಿಯಾರು ? ಸಮನಾರು? ಅವರು ದುರ್ವಾದಿಗಳ ಸಂದುಗಳನ್ನು ಸೀಳಿ ಮೆರೆದ ಮಹಾನುಭಾವರು. ಶ್ರೀ ಮಧ್ವಾಚಾರ್ಯರ ಮೂಲ ವಚನಗಳನ್ನು ಕಲ್ಪಲತೆಗಳನ್ನಾಗಿ ಮಾಡಿ ಮೇಲಾದ ತತ್ತ್ವ ಫಲಗಳನ್ನು ಶಿಷ್ಯಶಿಶುಗಳಿಗೆ ಉಣಬಡಿಸಿದ ಮಹಾನುಭಾವರು.

ತಮ್ಮ ದರ್ಶನ ಕಣ್ಣುಗಳಿಂದ ಶ್ರೀಕೃಷ್ಣನ ಬಾಲಲೀಲೆಗಳನ್ನು ಕಂಡು, ಸರಳ ಕನ್ನಡ ನುಡಿಯಲ್ಲಿ ಅದನ್ನು ಕಂಡರಿಸಿದ ಮಹಾನುಭಾವರಾದ ಪ್ರಸನ್ನ ವೆಂಕಟದಾಸರು ಜಯತೀರ್ಥರನ್ನು ಹೀಗೆ ಕೊಂಡಾಡಿದ್ದಾರೆ.

ಜಯತೀರ್ಥರು ಶ್ರೀ ಮಧ್ವಗುರುಗಳ ದಯವನ್ನು ಪಡೆದವರು. ತುರ್ಯಾಶ್ರಮದಲ್ಲಿ ಇಂದ್ರನಂತೆ ಮೆರೆದವರು. ವೇದಾಂಬುಧಿಯೊಳಗೆ ಸುಧೆ

ತೆಗೆದು ರಾಮ ಪಾದಕ್ಕೆ ಅರ್ಪಿಸಿ, ಬುಧಜನಕೆ ಎರೆದವರು. ಪ್ರಮೇಯಾರ್ಥ ಗಳನ್ನು ಕೈದುಗಳಂತೆ ಪಿಡಿದವರು. ಜಯನಾದದಿಂದ ದುರ್ವಾದಿಗಳನ್ನು ಗೆಲಿದವರು. ಮಾರುತಮತವನ್ನು ಸಾರಿ, ವೈಷ್ಣವರ ಮೊರೆಯನ್ನು ಲಾಲಿಸಿ, ಭಯ ಕಳೆದವರು—ಎಂದು ಹೊಗಳಿದ್ದಾರೆ.

ವ್ಯಾಸ ವಿಠಲರು ಅವರ ಪೂರ್ವ ಜನ್ಮ ವೃತ್ತಾಂತವನ್ನು ಒಂದು ಸುಳಾದಿ ಯಲ್ಲಿ ಸುಂದರವಾಗಿ ವಿವರಿಸಿದ್ದಾರೆ.

ದಯದಿ ಪಾಲಿಸೋ ಜಯತೀರಥರಾಯಾ । ಅಕ್ಷೋಭ್ಯರತನಯ ॥ ಪ ॥
ಅತ್ಯಂತ್ಹರುಷದಿ ಎತ್ತಾಗಿರುತಿರಲು । ಆನಂದತೀರ್ಥರು ।
ನಿತ್ಯ ಪಠಿಸುವೊ ಪುಸ್ತಕ ಹೊರುತಿರಲು । ಗುರುರಾಯರು
ಪೇಳಿದ । ತತ್ತ್ವ ಗ್ರಂಥವನೆ ಕಿವಿಯಲ್ಲಿ ಕೇಳುತಲಿ ।
ತಲೆಯ ತೂಗುತಲಿ । ಮತ್ತೆ ಪುಟ್ಟಿದ್ಯೊ ಮಂಗಳ
ವೇಢೆಯಲಿ । ಅತಿಮತಿವಂತರಲಿ ॥ ೧ ॥
ದೇಶಪಾಂಡೆ ಕೂಸಾಗಿ ಜನಿಸಿ । ಘನರಾವುತನೆನಿಸಿ ।
ದೇಶದೇಶದೊಳು ಸೈನ್ಯವನೆ ಚಲಿಸಿ । ಹಣವನ್ನೇ ಗಳಿಸಿ ।
ವಾಸುಕಿಯಂಬೋ ಗುರುತನೆ ತಪ್ಪಿಸಿ । ನದಿಗೆ ನೀರಡಿಸಿ ।
ಶ್ರೀಶನಾಜ್ಞೆಯಿಂ ಇವರನೆ ಕರೆತರಿಸಿ । ಶಿಖಿ ಸೂತ್ರತೆಗೆಸಿ ॥ ೨ ॥
ಹಿಂಡು ಹಿಂಡು ಜನ ಅಂಡಲೆಯುತ ಬಂದು । ಅಕ್ಷೋಭ್ಯತೀರ್ಥರ ।
ಕಂಡು ಬೇಟೆಯ ಮಾಡುತಲೆ ನಿಂದು । ಧೊಂಡೋ ರಘುನಾಥನ ।
ಹೆಂಡತಿ ಗಂಡನ ಕೂಡಿಸಬೇಕೆಂದು । ಸುಮ್ಮನೆ ಕರೆತಂದು ।
ಪ್ರಚಂಡ ಸರ್ಪದ ರೂಪ ತಾಳ್ದಂದು । ಭಯವ ಪಟ್ಟರಂದು ॥ ೩ ॥
ಮಧ್ವಶಾಸ್ತ್ರಗಳನುದ್ಧರಿಸುತಲದಕೆ । ಟೀಕೆಯನು ಮಾಡಿ ।
ವಿದ್ವಜ್ಜನರಿಗೆ ತಿದ್ದಿಯೆ ಪೇಳುತಲಿ । ನಾನಾ ಬಗೆಯಲ್ಲಿ ।
ಪದ್ಧತಿಗಳಿಸಿದ ಗುರುರಾಯರು ನೀವು । ಯತಿವರ ಸುರಧೇನು ।
ಅದ್ವೈತರಗುರುವಿದ್ಯಾರಣ್ಯನ ಗೆದ್ದ ಸಿಂಹ ನೀನು ॥ ೪ ॥
ಅಷಾಢಬಹುಳ ಪಂಚಮಿಯು ಬರುತ । ಕಳೆಬರವನು ಬಿಡುತಾ ।
ವ್ಯಾಸ ವಿಠಲನ ಪಾದದಲೆ ನಿರುತಾ । ಮಳಖೇಡದಿನಿರುತಾ ।
ವಾಸಿಪ ಪಾವಿನ ತೆರದೊಳು ಪ್ರಖ್ಯಾತಾ । ನಿಜಗುಣ ಗಣನೀತ ।
ಬೇಸರದಲೆ ಕೊಂಡಾಡಿದರೆ ನಿತ್ಯಾ । ಇಷ್ಟಾರ್ಥವನಿತ್ತ ॥ ೫ ॥

ಶ್ರೀಪತಿ ವಿಠಲರು ಟೀಕಾರಾಯರನ್ನು ಸೇವಿಸಿ ಸೌಖ್ಯದಿ ಜೀವಿಸಿರೆಂದು ಕರೆ ಇತ್ತಿದ್ದಾರೆ.

ಅವರು ಮಧ್ವಶಾಸ್ತ್ರಾಬ್ಧಿಗೆ ಪೂರ್ಣಸೋಮರು. ವಿದ್ವಜ್ಜನಮನಕೆ ಕವಿರಾಜರು. ಅದ್ವೈತಮತಕೆ ಧ್ವಾಂತ ದಿವಾಕರು. ಅಂಥ ಗುರುಗಳ ಬೃಂದಾವನ ವನ್ನು ದರ್ಶನ ಮಾತ್ರ ಮಾಡಿದರೆ ಭವಭಯ ದೂರ. ನಿರುತಾ ಸುಖವನ್ನೂ ಸಂಪತ್ತನ್ನೂ ಕುಂದದೆ ಕೊಡುವರು—"ಈ ನುಡಿ ಪುಸಿಯಲ್ಲ"—ಎಂದು ಪ್ರತಿಜ್ಞೆ ಮಾಡಿ ಹೇಳಿದ್ದಾರೆ.

ವರದೇಶ ವಿಠಲರು ಜಯತೀರ್ಥರನ್ನು ಯತಿಕುಲ ಮುಕುಟರೆಂದೂ ಸದ್ಗುಣ ಭರಿತರೆಂದೂ ಕೊಂಡಾಡಿದ್ದಾರೆ. ಅವರು ನಿಷ್ಕಾಮಮುನಿಸಾರ್ವ ಭೌಮರು. ಮಧ್ವ ಮುನಿಗಳ ಗ್ರಂಥಕ್ಕೆ ವ್ಯಾಖ್ಯಾನ ರಚಿಸಿದ ಸುಜ್ಞಾನಿಗಳು. ಅದ್ವೈತಾಟವಿದಗ್ಧ ಕೃಶಾನಲ ಸದುವೈಷ್ಣವಹೃತ್ಪದ್ಮ ಸುನಿಲಯ

ಎಂದು ಹೇಳಿ ಜಯರಾಯರು

"ಅತಿ ಸದ್ಭಕುತಿಲಿ ನುತಿಪ ಜನರ ಸಂ

ತತ ಪಾಲಿಸುತಲಿ ಪೃಥಿವಿಲಿ ಮೆರೆವರು

ಎಂದು ಘೋಷಿಸಿದ್ದಾರೆ.

ಹೀಗೆ ಹರಿದಾಸರೆಲ್ಲರೂ ಜಯತೀರ್ಥರನ್ನು ಜ್ಞಾನ ಭಕ್ತಿ ವೈರಾಗ್ಯಗಳ ಮೂರ್ತಿ ಎಂದೂ, ಕರುಣಾಸಾಗರರೆಂದೂ, ಭಕ್ತಜನರ ಇಷ್ಟಾರ್ಥಗಳನ್ನು ಈಡೇರಿಸುವ ಕಲ್ಪತರುವೆಂದೂ ಕೊಂಡಾಡಿದ್ದಾರೆ. ಇಂದಿಗೂ ಈ ಮಾತು ಸತ್ಯವಾಗಿದೆ.

# ಜಯತೀರ್ಥರು ಅವತರಿಸಿದಾಗ ಇದ್ದ ದೇಶದ ಪರಿಸ್ಥಿತಿ

**ಹಿನ್ನಲೆ—**

ಜಯತೀರ್ಥರು ಮಾಡಿದ ಮಹಾತ್ಕಾರ್ಯವನ್ನು ಅರಿಯಲು ಹಿನ್ನೆಲೆಯಾಗಿ ಅವರ ಕಾಲದಲ್ಲಿ ಇದ್ದ ದೇಶದ ರಾಜಕೀಯ ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿಗತಿಗಳನ್ನು ತಿಳಿಯುವುದು ಅವಶ್ಯಕ.

ಯಾವುದೇ ವ್ಯಕ್ತಿ ತನ್ನ ಕಾಲದ ಮಹಾಪುರುಷನಾಗಲು ಅವನಲ್ಲಿ

ವ್ಯಕ್ತಿತ್ವದ ಹಿರಿಮೆ ಇರುವುದು ಆಗತ್ಯವಾಗಿರುವಂತೆಯೇ ಅವನನ್ನು ಮಹಾ ಪುರುಷನನ್ನಾಗಿಸಿದ ಸುತ್ತಲಿನ ಪರಿಸರವೂ ಅಷ್ಟೇ ಮಹತ್ವದ ಪಾತ್ರ ವಹಿಸುತ್ತದೆ.

ಶ್ರೀ ಮಧ್ವಾಚಾರ್ಯರ ಅವತಾರ ಲೀಲೆಯ ಹಿನ್ನೆಲೆಯಲ್ಲಿ ಈ ಮಾತಿನ ಸ್ಪಷ್ಟ ದರ್ಶನವಾಗುತ್ತದೆ.

ಶ್ರೀ ಮಧ್ವಾಚಾರ್ಯರು ಪರಶುರಾಮ ಕ್ಷೇತ್ರವೆನಿಸಿದ ದಕ್ಷಿಣ ಕನ್ನಡ ಜಿಲ್ಲೆಯ ಉಡಪಿ ಸಮೀಪದ ಪಾಜಕ ಕ್ಷೇತ್ರದಲ್ಲಿ ಕ್ರಿ.ಶ. 1238 ರಲ್ಲಿ ಜನಿಸಿದರು. ಆಗ ದೇಶದಲ್ಲಿ ಒಂದು ವಿಲಕ್ಷಣ ಪರಿಸ್ಥಿತಿ ಉಂಟಾಗಿತ್ತು.

ರಾಜಕೀಯವಾಗಿ ವಿಧರ್ಮೀಯರಾದ ಮುಸಲ್ಮಾನರ ಪ್ರಭುತ್ವ ಉತ್ತರ ಭಾರತದಲ್ಲಿ ಬಲವಾಗಿ ನೆಲೆಗೊಂಡಿತ್ತು. ಉತ್ತರಭಾರತದ ಬಹುಪಾಲಿನ ಹಿಂದೂರಾಜ್ಯಗಳು ಸ್ವಾತಂತ್ರ್ಯವನ್ನು ಕಳೆದುಕೊಂಡು, ಅವರಿಗೆ ಕಪ್ಪ ಕೊಡುವ ಮಟ್ಟಕ್ಕೆ ಇಳಿದಿದ್ದವು. ಉತ್ತರಭಾರತದ ಕಾಶ್ಮೀರ, ಸಿಂಧ್, ಮಾಳವ, ಗುರ್ಜರ, ರಾಜಾಸ್ಥಾನದ ಮಿಥಿಲೆ, ಮೇವಾರ, ಮಾಂದಿಡಗಳೂ, ಕಳಿಂಗ, ವಂಗದೇಶಗಳೂ, ಮಧ್ಯಭಾರತದ ಅನೇಕ ಸಣ್ಣ ಪುಟ್ಟ ರಾಜ ಮನೆತನಗಳು ನಾಮಾವಶೇಷವಾಗಿದ್ದವು. ಇದಕ್ಕೆ ಮುಖ್ಯ ಕಾರಣ ವಿದೇಶೀಯರೆನಿಸಿದ್ದ ಮುಸಲ್ಮಾನದಾಳಿಕಾರರ ಶೌರ್ಯ ಸಾಹಸಗಳು ಒಂದು ಕಾರಣವಾದರೆ, ದೇಶೀಯ ಅರಸರ ಪರಸ್ಪರ ದ್ವೇಷಾಸೂಯೆ, ಅನೈಕಮತ್ಯಗಳೂ ಇತರ ಕಾರಣಗಳಾಗಿದ್ದವು. ಇವುಗಳ ಲಾಭ ಪಡೆದ, ಗುಲಾಮಿ ಸಂತತಿಯ ದೊರೆಗಳು ಭಾರತದ ದಿಲ್ಲಿ ಸಿಂಹಾಸನದಲ್ಲಿ ಮಂಡಿಸಿ ಪ್ರಭುತ್ವ ಮಾಡಿದ್ದರು. ಅನಂತರ ಖಿಲ್ಜಿ ಸಂತತಿಯವರು ದೇಶವನ್ನಾಳಿದರು. ಅವರು ಗೆದ್ದ ಪ್ರದೇಶಗಳಲ್ಲಿ ಹಿಂದೂಗಳನ್ನು ಬಲಾತ್ಕಾರವಾಗಿ ಇಸ್ಲಾಂ ಧರ್ಮಕ್ಕೆ ಸೇರಿಸುತ್ತಾ ನಡೆದಿದ್ದರು. ಇದಕ್ಕೂ ಮೊದಲು ಬೌದ್ಧ ಮತದ ಪ್ರಭಾವವನ್ನು, ಅವರ ಅವೈದಿಕವಾದವನ್ನು ಕುಗ್ಗಿಸಲು ಶಂಕರಾಚಾರ್ಯರೂ, ರಾಮಾನುಜಾಚಾರ್ಯರೂ, ವೈದಿಕ ಮತಗಳಾದ ಅದ್ವೈತ ಹಾಗೂ, ವಿಶಿಷ್ಟಾದ್ವೈತ ಮತವನ್ನು ಪ್ರಚಾರಕ್ಕೆ ತಂದಿದ್ದರೂ, ಜಗತ್ತು ಸತ್ಯವಲ್ಲವೆಂಬ ಮಾಯಾವಾದಿಗಳಿಂದ ಜನರಲ್ಲಿ ಜೀವನದ ಬಗೆಗೆ ಅಶ್ರದ್ಧೆಯೂ ನಿರುತ್ಸಾಹವೂ, ಪುರುಷ ಪ್ರಯತ್ನದ ಅಭಾವವೂ ತಲೆದೋರಿತ್ತು. ರಾಜಕೀಯ ಕ್ಷೇತ್ರದಲ್ಲಿ ತಲೆದೋರಿದ್ದ ಗೊಂದಲ, ಅನಿಶ್ಚಯತೆ ಹಾಗೂ ನೈರಾಶ್ಯ ಭಾವನೆಗಳು ಧಾರ್ಮಿಕ ಕ್ಷೇತ್ರದಲ್ಲೂ ತಲೆದೋರಿದವು.

ಮುಂದೆ ಬಸವಣ್ಣನವರು ಏಕದೇವೋಪಾಸನೆಯನ್ನು ಎತ್ತಿ ಹಿಡಿದು, ಸಮಾಜದಲ್ಲಿ ಉಚ್ಚನೀಚರೆನ್ನುವ ವರ್ಗಭೇದವನ್ನು ತಿರಸ್ಕರಿಸಿ, ಒಂದು ಬಗೆಯ ಧಾರ್ಮಿಕ ಸಮತಾವಾದವನ್ನು ಎತ್ತಿಹಿಡಿದರೂ ಅವರು ಬಿತ್ತಿದ ಕಾಯಕದ ಹಿರಿಮೆ, ಭಕ್ತಿಗಳು ಕಾಲಾನಂತರದಲ್ಲಿ ತಮ್ಮ ಮೌಲ್ಯವನ್ನು ಕಳೆದುಕೊಂಡಿದ್ದವು. ಜನಸಾಮಾನ್ಯರಲ್ಲಿ ಅವೈದಿಕ ಪ್ರಜ್ಞೆಯನ್ನು ಮೂಡಿಸಿ, ವೈದಿಕ ಧರ್ಮದ ನಿಜವಾದ ಸಂದೇಶವನ್ನು ಜನತೆಯ ಕಣ್ಣಿನಿಂದ ಮರೆಮಾಡಿದ್ದವು. ಅಂತಹ ಜನರಲ್ಲಿ ನೂತನ ಕರ್ತವ್ಯಪ್ರಜ್ಞೆ, ಜೀವನೋತ್ಸಾಹಗಳನ್ನು ಪ್ರಚೋದಿಸಲು ಶ್ರೀ ಮಧ್ವಾಚಾರ್ಯರು ತಮ್ಮ ಹಿಂದಣ ಇಪ್ಪತ್ತೊಂದು ಕುಭಾಷ್ಯಗಳನ್ನು1 ನಿರಾಕರಿಸಿ ಪ್ರಸ್ಥಾನತ್ರಯಗಳಿಗೆ2 ನಿತ್ಯ ನೂತನವೂ, ಅನಾದಿಯೂ ಅಪೌರುಷೇಯವೂ ಆದ ದ್ವೈತ ವಾದವನ್ನು ಪ್ರಚಾರಕ್ಕೆ ತಂದು, ಭಗವಂತನಾದ ಶ್ರೀಹರಿಯನ್ನು ಜ್ಞಾನಪೂರ್ವಕವಾಗಿ ಮಾಡುವ ಭಕ್ತಿಗೆ, ಜ್ಞಾನ ಮಾರ್ಗಕ್ಕೆ ಹೆಚ್ಚಿನ ಒತ್ತು ಕೊಟ್ಟರು. ಈ ಮಹಾತ್ಕಾರ್ಯದಿಂದ ಅವರು ಅವತಾರ ಪುರುಷರಾಗಿ ಮೆರೆದರು.

ಜಯತೀರ್ಥರಾದರೋ ಶ್ರೀ ಮಧ್ವಾಚಾರ್ಯರು ಆರಂಭಿಸಿದ್ದ ಆ ಮಹಾತ್ಕಾರ್ಯವನ್ನು-ವೇದಾಂತ ಸಂಸ್ಕೃತಿ ಧರ್ಮಗಳ ಮೇಲೆ ದೇಶವನ್ನು ಮತ್ತೆ ಕಟ್ಟುವ, ಜನತೆಯನ್ನು ಪುನಃ ಸಂಘಟಿಸುವ ಮಹತ್ಕಾರ್ಯವನ್ನು— ಕೈಗೊಂಡು ಮುಂದುವರೆಸಿದರು. ಶ್ರೀ ಮಧ್ವಾಚಾರ್ಯರು ಬಿತ್ತಿದ ಬೀಜ ಮೊಳಕೆ ಒಡೆದು ಜಯತೀರ್ಥರ ಕೈಯಿಂದ ಹೊಯ್ ನೀರುಂಡು, ವ್ಯಾಸರಾಯರ ಕಾಲಕ್ಕೆ ಚಿಗುರಿ ವಿಜಯೀಂದ್ರರ ಕಾಲಕ್ಕೆ ಹೂಬಿಟ್ಟು, ರಾಘವೇಂದ್ರ ಸ್ವಾಮಿಗಳ ಕಾಲಕ್ಕೆ ಹಣ್ಣನ್ನು ಲೋಕಕ್ಕೆ ನೀಡುವ ಮಧ್ವಸಿದ್ಧಾಂತ ಮಹಾವೃಕ್ಷವಾಯಿತು.

---

1) ಇಪ್ಪತ್ತೊಂದು ಕುಭಾಷ್ಯಗಳು :

ಭಾರತೀವಿಜಯ-ಸಚ್ಚಿದಾನಂದ-ಬ್ರಹ್ಮಘೋಷ-ಶತಾನಂದ-ಉದ್ವರ್ತ-ವಿಜಯ-ರುದ್ರಭಟ್ಟ-ವಾಮನ-ಯಾದವಪ್ರಕಾಶ-ರಾಮಾನುಜ- ಭರ್ತೃಪ್ರಪಂಚ-ದ್ರವಿಡ-ಬಹ್ಮದತ್ತ-ಭಾಸ್ಕರ-ವಿಶಾಖ-ವೃತ್ತಿಕಾರ - ವಿಜಯಭಟ್ಟ - ವಿಷ್ಣುಕ್ರಾಂತ-ವಾದೀಂದ್ರ-ಮಾಧವದಾಸ ಮತ್ತು ಶಂಕರ.

2) ಪ್ರಸ್ಥಾನತ್ರಯಗಳು :

ಸೂತ್ರಪ್ರಸ್ಥಾನ, ಗೀತಾಪ್ರಸ್ಥಾನ, ಉಪನಿಷತ್ಪ್ರಸ್ಥಾನ.

ಈ ಬೆಳವಣಿಗೆಯನ್ನು ಗುರುತಿಸುವ ಮೊದಲು ಜಯತೀರ್ಥರು ಬೆಳೆದು ಬಂದ ಪರಿಸರವನ್ನೂ—ರಾಜಕೀಯ, ಸಾಮಾಜಿಕ, ಧಾರ್ಮಿಕ ಹಿನ್ನೆಲೆಯನ್ನೂ ಅರಿಯುವುದು ಅವಶ್ಯಕವಾಗಿದೆ.

ಭಾರತದಲ್ಲಿ ಇಸ್ಲಾಮಿ ಮತದ ಉದಯದೊಂದಿಗೆ ಭಾರತದ ಇತಿಹಾಸ ದಲ್ಲಿ ಹೊಸ ಅಧ್ಯಾಯವು ಆರಂಭವಾಗಿತ್ತು. ಇದು ಕ್ರೂರವೂ ಕರಾಳವೂ ಆದ ರಕ್ತರಂಜಿತ ಅಧ್ಯಾಯ.

ಪ್ರವಾದಿ ಮೊಹಮ್ಮದನು (ಕ್ರಿ.ಶ. 570—632) ಅರೇಬಿಯಾ ದೇಶ ದಲ್ಲಿ ಇಸ್ಲಾಂ ಮತವನ್ನು ಸ್ಥಾಪಿಸಿದ ಮೇಲೆ ಅವನ ಉತ್ತರಾಧಿಕಾರಿಗಳಾದ ಕಲೀಫರು, ಏಷ್ಯಾ, ಆಫ್ರಿಕಾ ಮತ್ತು ಯೂರೋಪಿನ ಕೆಲವು ಭಾಗಗಳಲ್ಲಿ ಕತ್ತಿಯ ಸಹಾಯದಿಂದ ವಿಸ್ತಾರವಾದ ಇಸ್ಲಾಂ ಸಾಮ್ರಾಜ್ಯವನ್ನು ಕಟ್ಟಿದರು. ಅವರು ಝಳಪಿಸಿದ ಇಸ್ಲಾಂ ಖಡ್ಗ ಕ್ರಿ.ಶ. 711 ರ ಸುಮಾರಿಗೆ ಭಾರತವನ್ನು ತಲುಪಿ, ಸಿಂಧ್ ಪ್ರದೇಶವು ಅರಬ್ಬರ ದುರಾಕ್ರಮಣಕ್ಕೆ ತುತ್ತಾಯಿತು. ಘಜನೀಮಹಮದನು ಹದಿನೇಳುಬಾರಿ ಭಾರತದ ಮೇಲೆ ದಂಡೆತ್ತಿ ಬಂದರೂ, ಅವನು ಭಾರತದಲ್ಲಿ ನೆಲೆಯೂರಿ ನಿಲ್ಲುವ ಪ್ರಯತ್ನ ಮಾಡದೆ, ಇಲ್ಲಿನ ಪೂಜ್ಯ ಪವಿತ್ರ ವಸ್ತುಗಳನ್ನು ಅಪವಿತ್ರಗೊಳಿಸಿ, ಅಪಾರವಾದ ಸಂಪತ್ತಿನ ರಾಶಿಯೊಡನೆ ತನ್ನ ರಾಜ್ಯಕ್ಕೆ ಹಿಂದಿರುಗಿದ್ದನು.

ಆದರೆ ಹನ್ನೊಂದನೇ ಶತಮಾನದ ಪ್ರಾರಂಭದಲ್ಲಿ ಘಜನಿಮಹಮದನು ಆರಂಭಿಸಿದ ಈ ದುರಾಕ್ರಮಣ ಕಾರ್ಯ ಘೋರಿಮಹಮದನ ಕಾಲಕ್ಕೆ (ಕ್ರಿ.ಶ. 1093) ಅಂಕುರಾರ್ಪಣವಾಗಿ, ಅತ್ಯಲ್ಪ ಕಾಲದಲ್ಲಿ ಹೆಮ್ಮರವಾಗಿ ಬೆಳೆದಿತ್ತು. ಖಿಲ್ಜಿ ಸಂತತಿಯ ಅಲ್ಲಾವುದ್ದೀನನ ಕಾಲಕ್ಕೆ (ಕ್ರಿ.ಶ. 1296-1316) ಕೇವಲ ಇನ್ನೂರು ವರ್ಷಗಳ ಅವಧಿಯಲ್ಲಿ ಭಾರತದ ಹಿಂದೂ ರಾಜಸತ್ತೆ ಇಸ್ಲಾಮಿನ ಪದಾಘಾತಕ್ಕೆ ಸಿಕ್ಕಿ ತತ್ತರಿಸಿ ಹೋಗಿತ್ತು. ಈ ವೇಳೆಗೆ ಉತ್ತರ ಭಾರತದ ಎಲ್ಲ ಪ್ರದೇಶಗಳೂ ಗುಜರಾತ್, ಸಿಂಧ್, ಕಾಶ್ಮೀರ, ಮೇವಾರ, ಮಾಳವಗಳು, ಇಸ್ಲಾಂ ಖಡ್ಗಕ್ಕೆ ತಲೆಬಾಗಿದ್ದವು. ಆದರೆ ಸುದೈವದಿಂದ ಈ ಖಡ್ಗದ ಬಿಸಿಗೆ, ಉರುಬಿಗೆ ದಕ್ಷಿಣ ಭಾರತ ರಾಜ್ಯಗಳಾದ ದೇವಗಿರಿ, ಓರಂಗಲ್, ದ್ವಾರಸಮುದ್ರ, ಮಧುರೆ, ಮಲಬಾರು ರಾಜ್ಯಗಳು ಸಿಕ್ಕಿರಲಿಲ್ಲ.

ಈ ನೆಮ್ಮದಿ ಬಹಳ ಕಾಲ ಉಳಿಯಲಿಲ್ಲ. ಕ್ರಿ.ಶ. 1307 ರಲ್ಲಿ ಅಲ್ಲಾ ವುದ್ದೀನನು ತನ್ನ ಸಮರ್ಥ ದಂಡನಾಯಕ ಮಲ್ಲಿಕಾಫರನ ಕೈಯಲ್ಲಿ ದೊಡ್ಡ

ದೊಂದು ದಂಡನ್ನು ಕೊಟ್ಟು ದೇವಗಿರಿ, ಓರಂಗಲ್ಲುಗಳ ಮೇಲೆ ದಾಳಿ ಮಾಡಲು ಕಳುಹಿಸಿದಾಗ, ದಕ್ಷಿಣ ಭಾರತದ ಪತನಕ್ಕೆ ಆರಂಭವಾಯಿತು.

ಈ ಹಿಂದೂ ಸಾಮ್ರಾಜ್ಯಗಳ ಪತನ, ನಾಶಗಳ ಕಥೆ ಮನೋಭೇದಕವಾದ ಇತಿಹಾಸ. ಈ ದುರಾಕ್ರಮಣ, ಕೊಲೆ, ಸುಲಿಗೆ, ಅತ್ಯಾಚಾರ. ಮತಾಂತರಗಳ ಮಹಾಪೂರದಲ್ಲಿ ಸಿಕ್ಕಿ ಸಾವು ಬದುಕಿನ ಹೋರಾಟದಲ್ಲಿ ಹಿಂದೂ ಜನತೆ ಇರುವಾಗ ಶ್ರೀಮದಾನಂದತೀರ್ಥರ ಅವತಾರ ಕಾರ್ಯವು ಮುಗಿದು, ಸರ್ವಜ್ಞ ಪೀಠಕ್ಕೆ ಅವರ ಸಾಕ್ಷಾತ್ ಶಿಷ್ಯರಾದ ಪದ್ಮನಾಭ ತೀರ್ಥರು (ಕ್ರಿ.ಶ. 1317—1324) ಅಧಿಪತಿಗಳಾಗಿ ಏರಿದರು. ಅವರ ಕಾಲದಲ್ಲೂ ಅನಂತರ ಪಟ್ಟಕ್ಕೆ ಬಂದ ನರಹರಿತೀರ್ಥರು, (1324—1339) ಮಾಧವತೀರ್ಥರು, (1339—1350) ಮತ್ತು ಅಕ್ಷೋಭ್ಯತೀರ್ಥರು (1350—1365) ಕಾಲದವರೆಗೂ, ಈ ಎರಡು ಸಂಸ್ಕೃತಿಗಳ ಘರ್ಷಣೆ, ಸ್ವಾತಂತ್ರ್ಯಕ್ಕಾಗಿ ನಡೆದ ಹೋರಾಟ, ಜನ ಜಾಗ್ರತೆ ಪ್ರಯತ್ನಗಳು ಸತತವಾಗಿ ನಡೆದವು. ಅಂದು ಆರಂಭವಾದ ಈ ಹೋರಾಟದ ಕಥೆ ಅಖಂಡವಾಗಿ ಮೂವತ್ತು ವರ್ಷಗಳ ಕಾಲ ನಡೆದು, ಕ್ರಿ.ಶ. 1336 ರಲ್ಲಿ ಸ್ಥಾಪನೆಯಾದ ಸ್ವತಂತ್ರ ಹಿಂದೂ ರಾಜ್ಯವಾದ ವಿಜಯನಗರದ ಉದಯದಲ್ಲಿ ಪರಿಸಮಾಪ್ತಿಯಾಯಿತು. ಜಯತೀರ್ಥರೂ, ಅವರ ಗುರುಗಳಾದ ಅಕ್ಷೋಭ್ಯತೀರ್ಥರೂ ಈ ಹೋರಾಟದ ಹಿನ್ನೆಲೆಯಲ್ಲಿ ಬದುಕಿದರು. ಸಂಘರ್ಷದ ಈ ಸಂಕ್ರಮಣದ ಕಾಲದಲ್ಲಿ ಬದುಕಿದ ಪದ್ಮನಾಭತೀರ್ಥರೂ, ಅವರ ಪರಂಪರೆಯಲ್ಲಿ ಬಂದ ಮುಂದಿನ ಯತಿಗಳೂ, ಈ ರಾಜಕೀಯ ವಿಪ್ಲವದ ಬೆಳಕಿನಲ್ಲಿ ಬೆಳಗಿದರು.

### ರಾಜಕೀಯ ಪರಿಸ್ಥಿತಿ—

ದಕ್ಷಿಣ ಭಾರತದ ಚರಿತ್ರೆಯೆಂದರೆ, ಕನ್ನಡ ನಾಡಿನ ಚರಿತ್ರೆಯೆಂದು ಒಬ್ಬ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಈ ಮಾತು ಯಥಾರ್ಥವಾಗಿದೆ. ಗಂಗ, ಕದಂಬ, ರಾಷ್ಟ್ರಕೂಟ, ಚಾಲುಕ್ಯ, ಹೊಯ್ಸಳ ಸಾಮ್ರಾಜ್ಯಗಳ ಹೋರಾಟದ ಏಳುಬೀಳಿನ ಕಥೆಯೇ ದಕ್ಷಿಣ ಭಾರತದ ಇತಿಹಾಸದ ಕಥೆ ಎನ್ನಲು ಯಾವ ಸಂದೇಹವೂ ಇಲ್ಲ.

ಆರಂಭದ ಗಂಗರನ್ನು ಹಿಂದೊತ್ತಿ ಬಾದಾಮಿ ಚಾಲುಕ್ಯರೂ, ಅವರನ್ನು ಮೂಲೆಗೊತ್ತಿ ರಾಷ್ಟ್ರಕೂಟರೂ, ಅವರನ್ನು ತಳ್ಳಿ ನಿಸ್ಸತ್ವರನ್ನಾಗಿ

ಮಾಡಿ ಹೊಯ್ಸಳರೂ ಉಜ್ವಲವಾದ ಇತಿಹಾಸ ಪರಂಪರೆಯನ್ನು ನಿರ್ಮಿಸಿದರು.

ಆದರೆ ಹೊಯ್ಸಳರ ವಿಷ್ಣುವರ್ಧನ, ಇಮ್ಮಡಿ ವೀರನರಸಿಂಹರಂಥ ಸಮರ್ಥರು ಆಗಿಹೋದ ಮೇಲೆ ವಿನಾಶದ ಹಾದಿಯಲ್ಲಿ ನಡೆದ ದ್ವಾರಸಮುದ್ರದ ಹೊಯ್ಸಳ ಸಾಮ್ರಾಜ್ಯವು ಮುಮ್ಮಡಿ ನರಸಿಂಹನ ಕಾಲದಲ್ಲಿ (ಕ್ರಿ ಶ. 1254) ಸ್ವಯೂಥ ಕಲಹಕ್ಕೆ ತುತ್ತಾಗಿ, ವಿಭಜನೆಯಾಯಿತು. ದ್ವಾರಾವತಿಯನ್ನು ನರಸಿಂಹನೂ, ತಮಿಳು ಪ್ರಾಂತ್ಯವನ್ನು ಸೋಮೇಶ್ವರನ ಮಗ ರಾಮನಾಥನೂ ಹಂಚಿಕೊಂಡು ಆಳಲಾರಂಭಿಸಿದರು. ಈ ರಾಜ್ಯ ವಿಭಜನೆಯು ಉತ್ತರೋತ್ತರ ಪರಸ್ಪರ ದ್ವೇಷಾಸೂಯೆಗಳಿಗೆ ಕಾರಣವಾಗಿ ಈ ದಳ್ಳುರಿಯಲ್ಲಿ ಇಡೀ ದಕ್ಷಿಣಾ ಪಥದ ಜನಜೀವನವೇ ದಗ್ಧವಾಯಿತು. ಆದರೆ ನರಸಿಂಹನ ನಂತರ ಪಟ್ಟಕ್ಕೆ ಬಂದ ಮುಮ್ಮಡಿ ಬಲ್ಲಾಳನ ಕಾಲದಲ್ಲಿ ಒಡೆದಿದ್ದ ಸಾಮ್ರಾಜ್ಯವು ಒಂದಾಯಿತು. ಆದರೆ ಅಲ್ಲಿ ನೆಮ್ಮದಿಯು ಸ್ಥಾಪನೆಗೊಳ್ಳುವ ಮೊದಲೇ ಮಲ್ಲಿಕಾಫೂರನ ದಾಳಿ ದಕ್ಷಿಣದ ಮೇಲೆ ಎರಗಿಬಂದು, ಅವನ ಕನಸು ಕನಸಾಗಿಯೇ ಉಳಿಯಿತು. ಕ್ರಿ.ಶ. 1310 ರಲ್ಲಿ ದ್ವಾರಸಮುದ್ರದ ಮೇಲೆ ದಾಳಿ ಇಟ್ಟ ಮಲ್ಲಿಕಾಫೂರನು, ಬಲ್ಲಾಳನ ಮಹತ್ವಾಕಾಂಕ್ಷೆಯನ್ನು ಬುಡಮೇಲು ಮಾಡಿದನು. ಇದು ಅವನ ದೌರ್ಭಾಗ್ಯವೇ ಸರಿ.

ಕ್ರಿ ಶ. 1296 ರಲ್ಲಿ ಮೊದಲ ಬಾರಿಗೆ ದಂಡೆತ್ತಿಬಂದ ಅಲ್ಲಾವುದ್ದೀನನು ದೇವಗಿರಿಯ ರಾಮಚಂದ್ರದೇವನನ್ನು ಸೋಲಿಸಿ, ಅಲ್ಲಿನ ಸಂಪತ್ತನ್ನು ಕೊಳ್ಳೆ ಹೊಡೆದನು. ಅವನಿಗೆ ಸೋತ ಯಾದವರು ಪೊಗದಿಯನ್ನು ಒಪ್ಪಿಸಿದರು. ಆದರೆ ಹತ್ತು ವರ್ಷಗಳ ನಂತರ (1307ರಲ್ಲಿ) ಅವನು ಪೊಗದಿಯನ್ನು ಕೊಡಲು ನಿರಾಕರಿಸಿದ್ದರಿಂದ ಅಲ್ಲಾವುದ್ದೀನನು ಅವನ ಮೇಲೆ ಮಲ್ಲಿಕಾಫೂರನನ್ನು ಮತ್ತೆ ದಂಡಿನೊಡನೆ ಕಳುಹಿಸಿದನು. ಅವನು ರಾಮಚಂದ್ರದೇವನನ್ನು ಸೆರೆ ಹಿಡಿದು ದಿಲ್ಲಿಗೆ ಕರೆದುಕೊಂಡುಹೋದನು. ಅಲ್ಲಿ ಅಪಮಾನಕರ ಒಪ್ಪಂದ ಮಾಡಿಕೊಂಡು ರಾಜ್ಯಕ್ಕೆ ಹಿಂದಿರುಗಬೇಕಾಯಿತು. ಅವನ ಮಗ ಶಂಕರದೇವನು ಸ್ವಾತಂತ್ರ್ಯವನ್ನು ಮತ್ತೆ ಘೋಷಿಸಿದಾಗ ಮಲ್ಲಿಕಾಫೂರನು ಅವನ ಮೇಲೆ ಮತ್ತೆ ದಂಡೆತ್ತಿ ಬಂದು ಯುದ್ಧದಲ್ಲಿ ಸೋಲಿಸಿ ಅವನನ್ನು ಕೊಂದುಹಾಕಿದನು. ಮುಂದೆ ಅಲ್ಲಾವುದ್ದೀನನು ಕಾಲವಾದ ಮೇಲೆ ರಾಮಚಂದ್ರದೇವನ ಅಳಿಯನಾದ ಹರಪಾಲದೇವನು ದಂಗೆ ಎದ್ದು ಅಲ್ಲಾವುದ್ದೀನನ ಮೂರನೆಯ ಮಗ ಮುಬಾರಕನಿಗೆ ಸೆರೆಸಿಕ್ಕಿ ಜೀವಸಹಿತ ದಹನವಾದನು. ಅಲ್ಲಿಂದಾಚೆಗೆ ದೇವಗಿರಿಯಲ್ಲಿ

ಮುಸಲ್ಮಾನರ ಆಳ್ವಿಕೆ ನೆಲೆಗೊಂಡಿತು.

ನೆರೆಯ ರಾಜ್ಯವಾದ ಓರಂಗಲ್ಲಿನ ಕಾಕತೀಯ ದೊರೆ ಪ್ರತಾಪರುದ್ರಗಜ ಪತಿಗೂ ಇದೇ ದುರ್ಗತಿ ಪ್ರಾಪ್ತವಾಯಿತು. ಹಿಂದೊಮ್ಮೆ ಅವನ ಮೇಲೆ ಅಲ್ಲಾವುದ್ದೀನನು ದಾಳಿ ಇಟ್ಟು ಸೋತು ಹಿಂದಿರುಗಿದ್ದರೂ, ಕ್ರಿ. ಶ. 1309 ರಲ್ಲಿ ಮಲ್ಲಿಕಾಫೂರನು ಅವನ ಮೇಲೆ ಪುನಃ ದಾಳಿ ಇಟ್ಟನು. ದುರ್ದೈವದ ಸಂಗತಿ ಎಂದರೆ ದೇವಗಿರಿ ಯಾದವರು ಸ್ವಾರ್ಥಸಾಧನೆಗಾಗಿ ಶತ್ರುಗಳಿಗೆ ಸೈನ್ಯಸಹಾಯ ಮಾಡಿದರು. ರಾಮದೇವರಾಯನು ಶತ್ರುಗಳಿಗೆ ಒಂದು ಮರಾಟಾ ಪದಾತಿದಳವನ್ನೂ, ರಾವುತ ಪಡೆಯನ್ನೂ ಕಳುಹಿಸಿದನು. ಮಲ್ಲಿಕಾಫೂರನು ತೆಲಂಗಾಣದಲ್ಲೂ ನುಗ್ಗಿ ಸುರಪುರದ ಕೋಟೆಯನ್ನೂ ಗೆದ್ದನು. ಅದನ್ನು ತನ್ನದು ಮಾಡಿಕೊಂಡು, ದೊರೆಯಿಂದ ಕಪ್ಪವನ್ನು ಸ್ವೀಕರಿಸಿ, ಹನುಮಕೊಂಡವನ್ನು ಮುತ್ತಿದನು. ಪ್ರತಾಪರುದ್ರನ ಬಳಿ ಆಗ ಇಪ್ಪತ್ತು ಸಾವಿರ ರಾವುತ ಪಡೆಯೂ, ತೊಂಬತ್ತು ಸಾವಿರ ಬಿಲ್ಗಾರರೂ ಇದ್ದರು. ಶತ್ರುಗಳ ಸಂಖ್ಯೆ ಒಂದು ಲಕ್ಷ ಮೀರಿತ್ತು. ಓರಂಗಲ್ಲಿನ ಕೋಟೆ ಶತ್ರುವಶವಾಯಿತು. ಒಂದು ತಿಂಗಳ ಕಾಲ ಭೀಕರ ಹೋರಾಟ ನಡೆದ ಮೇಲೆ ಪ್ರತಾಪರುದ್ರನು ಸರ್ವನಾಶ ತಪ್ಪಿಸಿಕೊಳ್ಳಲು ಶಾಂತಿ ಭಿಕ್ಷೆ ಬೇಡಿದನು. ವಿಜೇತರಿಗೆ ತನ್ನ ತೂಕದ ಚಿನ್ನದ ಪ್ರತಿಮೆಯೊಂದನ್ನು ಕಾಣಿಕೆ ಕಳುಹಿಸಿಕೊಟ್ಟನು. ನೂರು ಆನೆ, ಏಳು ಸಾವಿರ ಕುದುರೆಗಳು, ಭಂಡಾರ ದಲ್ಲಿದ್ದ ಎಲ್ಲ ಸಂಪತ್ತು ಶತ್ರುವಶವಾಯಿತು. ಈ ಸೂರೆಯಲ್ಲಿ ಕೋಹಿನೂರು ರತ್ನವೂ ಇತ್ತೆಂದು ಹೇಳುತ್ತಾರೆ. ತನಗೆ ಅಲ್ಲಿ ದೊರೆತ ಸಂಪತ್ತನ್ನು ಮಲ್ಲಿ ಕಾಫೂರನು ಒಂದು ಸಾವಿರ ಒಂಟೆಗಳ ಮೇಲೆ ದೆಹಲಿಗೆ ಕಳುಹಿಸಿಕೊಟ್ಟನೆಂದು ಇತಿಹಾಸಕಾರರು ಬರೆಯುತ್ತಾರೆ.

ಈ ದಿಗ್ವಿಜಯವಾದ ಮೇಲೆ ಕೇವಲ ಸಂಪತ್ತಿನ ಆಸೆಯಿಂದ ಮಲ್ಲಿ ಕಾಫೂರನು ದಕ್ಷಿಣದ ಮೇಲೆ ದಂಡೆತ್ತಿ ಹೊರಟನು. ಅವನು ದೊಡ್ಡ ಸೈನ್ಯ ದೊಡನೆ ಹೊರಟು ದೇವಗಿರಿಯಲ್ಲಿ ಕೆಲವು ಕಾಲ ತಂಗಿ, ದ್ವಾರಸಮುದ್ರದ ಮಾರ್ಗ ಹಿಡಿದನು. ದುರ್ದೈವದಿಂದ ಈ ಬಾರಿಯೂ ರಾಮದೇವನು ಪರಶು ರಾಮದೇವನೆಂಬ ಅಧಿಕಾರಿಯನ್ನೂ ಈ ಕಾರ್ಯದಲ್ಲಿ ನೆರವೀಯಲು ಕಳುಹಿಸಿ ಕೊಟ್ಟನು.

ಈ ಸಮಯದಲ್ಲಿ ಮಲಬಾರಿನ ಗಡಿಯಲ್ಲಿ ಮಧುರೆಯ ಪಾಂಡ್ಯ ಸಹೋದರ ರಾದ ಸುಂದರಪಾಂಡ್ಯ ಮತ್ತು ವೀರಪಾಂಡ್ಯರ ನಡುವೆ ರಾಜ್ಯಕ್ಕಾಗಿ ಯಾದವೀ

ಕಲಹ ನಡೆಯುತ್ತಿತ್ತು. ಈಗ ಸ್ವಾರ್ಥ ಸಾಧಿಸಲು ಹೊಯ್ಸಳ ದೊರೆ ಮುಮ್ಮಡಿ ಬಲ್ಲಾಳನು ತನ್ನ ಸೈನ್ಯದೊಡನೆ ಅತ್ತ ನಡೆದಿದ್ದನು. ಮಲ್ಲಿಕಾಫೂರನು ಈ ಸುದ್ದಿ ಕೇಳಿ ಹಿಗ್ಗಿ ರಕ್ಷಕರಿಲ್ಲದಿದ್ದ ದ್ವಾರಸಮುದ್ರದ ಮೇಲೆ ಹತ್ತು ಸಾವಿರ ಅಶ್ವಾರೋಹಿಗಳ ಪಡೆಯೊಡನೆ ಪ್ರಯಾಣ ಮಾಡಿ ಹನ್ನೆರಡೇ ದಿನಗಳಲ್ಲಿ ರಾಜಧಾನಿಯನ್ನು ಮುತ್ತಿ, ಎದುರಾದವರನ್ನು ಕೊಂದು ಅಪಾರವಾದ ಸಂಪತ್ತನ್ನು ಸೂರೆ ಮಾಡಿದನು.

ಅನಂತರ ಮಲ್ಲಿಕಾಫೂರನು ಪಾಂಡ್ಯ ರಾಜ್ಯವನ್ನು ಗೆದ್ದು ಕಣ್ಣಾನೂರಿನ ಮೇಲೂ ದಾಳಿ ಇಟ್ಟನು. ಅವನು ವೀರಪಾಂಡ್ಯನು ತಲೆಮರೆಸಿಕೊಂಡಿದ್ದ ಕುಂದೂರನ್ನು ಮುತ್ತಿ ವಶಪಡಿಸಿಕೊಂಡಾಗ ಅಲ್ಲಿ ಅವನಿಗೆ 120 ಆನೆಗಳ ಮೇಲೆ ಸಾಗಿಸಲಾಗಿದ್ದ ಪಾಂಡ್ಯ ರಾಜರ ಸಂಪತ್ತೆಲ್ಲವೂ ಸುಲಭವಾಗಿ ಕೈವಶವಾಯಿತು. ಅವನು ವಿಜಯೋನ್ಮತ್ತನಾಗಿ ಚಿದಂಬರವನ್ನು ಮುತ್ತಿ ಅಲ್ಲಿನ ನಿವಾಸಿಗಳನ್ನು ಕಗ್ಗೊಲೆ ಮಾಡಿದನು. ಅಲ್ಲಿನ ದೇವಾಲಯಗಳನ್ನು ನಾಶ ಮಾಡಿ, ಇಲ್ಲವೇ ಹಾಳುಗೆಡವಿ, ವಿಗ್ರಹಗಳನ್ನು ಒಡೆದು ಪವಿತ್ರ ಸ್ಥಳಗಳನ್ನು ಅಪವಿತ್ರಗೊಳಿಸಿದನು. ಮುಂದೆ ಶ್ರೀರಂಗದ ದೇವಸ್ಥಾನವೂ ಶತ್ರುಗಳ ದಾಳಿಗೆ ಸಿಕ್ಕಿ ನಾಶವಾಯಿತು. ಈ ಎಲ್ಲ ದಾಳಿಯಿಂದ 250 ಆನೆಗಳ ಹೇರಿನಷ್ಟು ಸಂಪತ್ತು ಅವನ ವಶವಾಯಿತು.

ಅಲ್ಲಿಂದ ಮಧುರೆಯ ಮೇಲೆ ಏರಿ ಹೋದನು. ಅಲ್ಲಿದ್ದ ಸುಂದರ ಪಾಂಡ್ಯನು ಈ ಮೊದಲೇ ತನ್ನ ಸಂಪತ್ತಿನೊಡನೆ ಪರಾರಿಯಾಗಿದ್ದನು. ಅಲ್ಲಿನ ಚೊಕ್ಕನಾಥ ದೇವಾಲಯಕ್ಕೆ ಬೆಂಕಿ ಇಟ್ಟು, ಸೆರೆ ಸಿಕ್ಕಿದ ಸುಂದರಪಾಂಡ್ಯನ ಚಿಕ್ಕಪ್ಪ ವಿಕ್ರಮಪಾಂಡ್ಯನ ಕೈಗಳನ್ನು ಕತ್ತರಿಸಿ, ಅಪಾರವಾದ ಸೂರೆಯೊಡನೆ ಮುಂದೆ ಹೊರಟನು. ಅಲ್ಲಿ ಅವನಿಗೆ ಐನೂರ ಹನ್ನೆರಡು ಆನೆಗಳು, ಐದು ಸಾವಿರ ಕುದುರೆಗಳು, ಐನೂರು ಮಣ ಮುತ್ತು ರತ್ನಗಳೇ ಮೊದಲಾದ ಒಡವೆಗಳು ದೊರೆತವು.

ಮುಂದೆ ರಾಮೇಶ್ವರದವರೆಗೂ ಮಲ್ಲಿಕಾಫರನನ್ನು ಅವನ ಉನ್ಮತ್ತ ದೈತ್ಯದಳವನ್ನು ಎದುರಿಸುವವರೇ ಇರಲಿಲ್ಲ. ಇಲ್ಲೆಲ್ಲಾ ಕೊಲೆ ಸುಲಿಗೆ ಅತ್ಯಾಚಾರ ಮತಾಂತರಗಳನ್ನೂ ಎಸಗಿ, ರಾಮೇಶ್ವರದಲ್ಲಿ ಒಂದು ಗೆಲ್ಗಂಭವನ್ನು ನಿಲ್ಲಿಸಿ, ಮಸೀದಿಯನ್ನು ನಿರ್ಮಿಸಿ ತನ್ನ ವಿಪುಲಸಂಪತ್ತಿನೊಡನೆ ದೆಹಲಿಗೆ ಹಿಂತಿರುಗಿದನು.

ಈ ಎಲ್ಲ ದಂಡ ಯಾತ್ರೆಯಿಂದ ಅಲ್ಲಾವುದ್ದೀನನಿಗೆ 600 ಮಣ ಚಿನ್ನ, 7 ಮಣ ಮುತ್ತು, 2 ಮಣ ವಜ್ರ ಕೆಂಪು ಪಚ್ಚೆ ನೀಲ ಮಣಿ ಮತ್ತಿತರ ಪ್ರಶಸ್ತ ಶಿಲೆಗಳು, 1000 ಮಣ ಬೆಳ್ಳಿ, 4000 ರೇಷ್ಮೆ ಮತ್ತಿತರ ಬೆಲೆ ಬಾಳುವ ವಸ್ತ್ರಗಳು ದೊರಕಿತೆಂದು ಫೆರಿಸ್ತನೆಂಬ ಮುಸ್ಲಿಂ ಇತಿಹಾಸಕಾರನು ಹೇಳುತ್ತಾನೆ.1

ದಖನ್ನಿನ ಮತ್ತು ದಕ್ಷಿಣ ಭಾರತದ ರಾಜ್ಯಗಳು ನಿಸ್ಸಂದೇಹವಾಗಿ ದೆಹಲಿ ಸುಲ್ತಾನರ ಪಾಲಿಗೆ ಕಾಮಧೇನುಗಳಾದವು. ಅಲ್ಲಿನ ದೇವಾಲಯಗಳ ಸಂಪತ್ತೆಲ್ಲವೂ ಅಪಹರಿಸಲ್ಪಟ್ಟವು. ಈ ಹಿಂದೂ ರಾಜ್ಯಗಳಲ್ಲಿ ಇದ್ದ ಅನೈಕಮತ್ಯ ಅನ್ಯೋನ್ಯ ದ್ವೇಷಾಸೂಯೆಗಳೂ, ಅಂತರರಾಜ್ಯ ವೈಷಮ್ಯಗಳೂ, ಹೊರಗಿನಿಂದ ಬಂದ ವಿಧರ್ಮೀಯರಾದ ಶತ್ರುಗಳ ಪಾಲಿಗೆ ಅವರನ್ನು ಸುಲಭವಾಗಿ ಸೋಲಿಸಿ ಸದೆ ಬಡಿಯಲು ಅವಕಾಶ ಕೊಟ್ಟಿತು. ಈ ಹಿಂದೂ ರಾಜ್ಯಗಳನ್ನು ತಮ್ಮ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳಬೇಕೆಂಬ ಬಯಕೆ ದಿಲ್ಲಿ ಸುಲ್ತಾನರಿಗೆ ಇರಲಿಲ್ಲ. ಈ ಸಂಕಟದ ಸಮಯದಲ್ಲಿ ಹಿಂದೂ ರಾಜರು ಐಕ್ಯಭಾವದಿಂದ ಸುಸಂಘಟಿತರಾಗಿ ಶತ್ರುಗಳನ್ನು ಎದುರಿಸಬೇಕು ಎಂಬ ಅವಶ್ಯಕತೆಯಾಗಲೀ, ವಿವೇಕವಾಗಲೀ ಅವರಲ್ಲಿ ಕಂಡು ಬಾರದಿದ್ದುದು ನಾಡಿನ ದೌರ್ಭಾಗ್ಯ. ಎಲ್ಲರೂ ತಮ್ಮ ಪ್ರತಿಷ್ಠೆ ಮತ್ತು ಸ್ವಾರ್ಥ ಸಾಧನೆಯ ಕಾರ್ಯದಲ್ಲಿ ಮಗ್ನರಾಗಿ ಆತ್ಮನಾಶ ಮಾಡಿಕೊಂಡಿದ್ದರು.

ಇಂತಹ ಅಭದ್ರ ರಾಜಕೀಯದ, ಗೊಂದಲಮಯ ವಾತಾವರಣದಲ್ಲಿ ಧೋಂಡೋಪಂತರು ಜನ್ಮತಾಳಿದ್ದರು.

### ಶೈಕ್ಷಣಿಕ—

ಧಾರ್ಮಿಕವಾಗಿಯೂ, ಸಾಂಸ್ಕೃತಿಕವಾಗಿಯೂ, ಅದು ಅಶಾಂತಿ ಪರ್ವವೇ ಆಗಿತ್ತು. ಎಲ್ಲೆಲ್ಲೂ ಕೊಲೆ ಸುಲಿಗೆ, ಕಳ್ಳಕಾಕರ ಹಾವಳಿ, ಮತೀಯ ಕಾರಣಗಳಿಗಾಗಿ ದ್ವೇಷಾಸೂಯೆ ತಾಂಡವಾಡುತ್ತಿದ್ದುವು, ಇಡೀ ದಕ್ಷಿಣಾಪಥವೆಲ್ಲವೂ ಮುಸಲ್ಮಾನರ ಪದಾಘಾತಕ್ಕೆ ಸಿಕ್ಕಿ ತತ್ತರಿಸಿತ್ತು. ಅದು ಸಿಡಿಮದ್ದಿನ ಕೋಠಿಯಾಗಿತ್ತು. ದ್ರವರೂಪ ಕಲ್ಲಿನ ಕುದಿಯುವ (ಲಾವಾ) ರಸವನ್ನು ಉಗುಳುವ

1) ಕರ್ನಾಟಕ ಪರಂಪರೆ, ಪುಟ-483

ಸ್ಫೋಟಿಸುವ ಅಗ್ನಿ ಪರ್ವತವಾಗಿತ್ತು. ಜನಜೀವನವು ಊರ್ಧ್ವಸ್ತಗೊಂಡಿತ್ತು. ನ್ಯಾಯನೀತಿಆದರ್ಶಗಳು ಮರೆತುಹೋದ ಮಾತುಗಳಾಗಿದ್ದವು. ಎಲ್ಲೆಲ್ಲೂ ಸ್ವಾರ್ಥ, ದ್ವೇಷಗಳು ಮನೆ ಮಾಡಿಕೊಂಡಿದ್ದವು.

ಮುಸಲ್ಮಾನರು ದಕ್ಷಿಣಾಪಥದ ಮೇಲೆ ದುರಾಕ್ರಮಣ ಮಾಡುವವರೆಗೂ ನಾಡಿನ ಜನ ಜೀವನ ಬೇರೊಂದು ಬಗೆಯಾಗಿತ್ತು. ಅದು ಸುಖ, ಸಂಮೃದ್ಧಿ, ನೆಮ್ಮದಿಗಳ ಕಾಲವಾಗಿತ್ತು. ದೊರೆಗಳು ಯಾರೇ ಇರಲಿ, ಯಾವ ಧರ್ಮದವರೇ ಆಗಿರಲಿ, ದೇಶದಲ್ಲಿನ ಜನತೆ ವರ್ಣಾಶ್ರಮ ಧರ್ಮಗಳನ್ನು ಪಾಲಿಸುತ್ತಾ, ಕೃಷಿ, ವಾಣಿಜ್ಯ ವ್ಯವಹಾರಗಳಿಂದ ಸಂಪತ್ತನ್ನು ಗಳಿಸಿ, ಸಾಹಿತ್ಯ, ಸಂಗೀತ, ಶಿಲ್ಪ ಮೊದಲಾದ ಲಲಿತ ಹಾಗೂ ವಾಸ್ತು ಕಲೆಗಳಿಗೂ ಪ್ರೋತ್ಸಾಹ ನೀಡುತ್ತಿದ್ದರು. ಗುಡಿ ದೇವಸ್ಥಾನಗಳ ನಿರ್ಮಾಣಕ್ಕೆ ಕಾರಣವಾಗಿ, ಸುಸಂಸ್ಕೃತ ಜೀವನವನ್ನು ನಡೆಸುತ್ತಿದ್ದರು.

ಅರಸೊತ್ತಿಗೆಗಳ ಏಳುಬೀಳುಗಳಲ್ಲೂ, ಅಭ್ಯುದಯಅವನತಿಗಳಲ್ಲೂ ಅವರ ದೈನಂದಿನ ಜೀವನವಾಹಿನಿ ಅಡೆತಡೆಗಳಿಲ್ಲದೆ ಸಾಗಿತ್ತು. ವೈದಿಕ ಸಂಸ್ಕೃತಿಯ ಉಚ್ಚ ಜೀವನ ಅವರ ಆದರ್ಶವಾಗಿತ್ತು, ದೇವಾಲಯಗಳೂ ಮಠಗಳೂ ಅಗ್ರಹಾರ ಶಿವಪುರಿಗಳೂ ಜನತೆಗೆ ಮಾರ್ಗದರ್ಶನ ನೀಡುವ ಕೇಂದ್ರಗಳಾಗಿದ್ದವು.

ರಾಜ್ಯವನ್ನು ಆಳುವವರು ಗಂಗರಾಗಲಿ ಚಾಲುಕ್ಯರಾಗಲಿ, ರಾಷ್ಟ್ರಕೂಟ ರಾಜವಂಶದವರಾಗಲೀ, ಹೊಯ್ಸಳರಾಗಲೀ ಸನಾತನರಾಜ್ಯಪದ್ಧತಿಯಲ್ಲಿ ನಂಬಿಕೆಯುಳ್ಳವರೇ ಆಗಿದ್ದರು ಅವರು ಹಿಂದಿನಿಂದ ನಡೆದು ಬಂದಿದ್ದ ಧಾರ್ಮಿಕ ಸಾಮಾಜಿಕ, ಸಂಘ ಸಂಸ್ಥೆಗಳ ಒಳಾಡಳಿತದಲ್ಲಿ ತಲೆ ಹಾಕುತ್ತಿರಲಿಲ್ಲ. ಹಿಂದಿನ ಸಂಪ್ರದಾಯಗಳನ್ನು ಮೀರಿ ನಡೆಯುತ್ತಿರಲಿಲ್ಲ.

ಶಿಕ್ಷಣ ಸಂಸ್ಥೆಗಳ ಆಡಳಿತ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಹಿಂದಿನವರು ಹಾಕಿಕೊಟ್ಟ ಮಾರ್ಗದಲ್ಲೇ ಮುನ್ನಡೆಯುತ್ತಿದ್ದರು. ಹೀಗಾಗಿ ಮತೀಯ ವೈಷಮ್ಯಗಳಾಗಲೀ ಸಂಘಸಂಸ್ಥೆಗಳ ನಡುವೆ ಸಂಘರ್ಷವಾಗಲೀ ನಡೆದರೆ ಹಿಂದಿನವರು ಹಾಕಿಕೊಟ್ಟಿದ್ದ ರಾಜಿ ಪಂಚಾಯಿತಿ ವಿಧಾನದಲ್ಲಿ ಪರಿಹಾರವನ್ನು ಕಂಡುಕೊಳ್ಳುತ್ತಿದ್ದರು.

ಆ ಕಾಲದ ಜನತೆಯು ಬದುಕಿನ ಸರ್ವತೋಮುಖ ವಿಕಾಸವು ಯೋಗ್ಯವಾದ ಶಿಕ್ಷಣದ ಮೂಲಕವೇ ಸಾಧ್ಯವೆಂದು ನಂಬಿತ್ತು. ಅದೇ ವ್ಯಕ್ತಿತ್ವದ ಅಡಿಪಾಯ. ಏಳನೆ ಶತಮಾನದಲ್ಲಿ ಪುಲಿಕೇಶಿಯ ರಾಜ್ಯಕ್ಕೆ ಭೇಟಿ ನೀಡಿದ್ದ ಚೀನಾ

ದೇಶದ ಯಾತ್ರಿಕನಾದ ಹ್ಯೂಯೆನ್‌ತ್ಸಾಂಗನು ಜನಸಾಮಾನ್ಯರೂ ಪಾಂಡಿತ್ಯಪ್ರಿಯ ರಾಗಿದ್ದರೆಂದು ತಿಳಿಸುತ್ತಾನೆ. ಪ್ರಾಚೀನ ಪದ್ಧತಿಯಂತೆ ಶಿಕ್ಷಣವು ಹನ್ನೆರಡು ಅಧ್ಯಾಯಗಳನ್ನೂ ಒಳಗೊಂಡಿತ್ತು. ಮಕ್ಕಳಿಗೆ ಏಳು ವರ್ಷ ವಯಸ್ಸಾಗುತ್ತಲೇ ಅವರಿಗೆ ಐದು ವಿಜ್ಞಾನಗಳ ಮಹಾ ಗ್ರಂಥಗಳನ್ನು ಕ್ರಮವಾಗಿ ಕಲಿಸುತ್ತಿದ್ದರು. ಇವುಗಳಲ್ಲಿ ಮೊದಲನೆಯ ವಿಜ್ಞಾನ ವ್ಯಾಕರಣ. ಇದರಲ್ಲಿ ಭಾಷೆಯ ಸಾಮಾನ್ಯ ಸ್ವರೂಪ, ಪದಗಳ ರಚನೆ- ಇವುಗಳನ್ನು ಕಲಿಸುತ್ತಿದ್ದರು. ಎರಡನೆಯದು, ಕುಶಲ ಕಲೆಗಳಿಗೆ ಸಂಬಂಧಿಸಿದ ವೃತ್ತಿಗಳು. ಇವುಗಳಲ್ಲಿ ಯಂತ್ರೋಪಕರಣ ಕಲೆಯ ವಿಧಾನಗಳು ಮತ್ತು ಜ್ಯೋತಿಶ್ಯಾಸ್ತ್ರ ತತ್ತ್ವಗಳನ್ನು ಕಲಿಸುತ್ತಿದ್ದರು. ಮೂರನೆಯದು ವೈದ್ಯಕೀಯ ಶಾಸ್ತ್ರ. ಇದರಲ್ಲಿ ಮಂತ್ರ ಪ್ರಯೋಗ, ಔಷಧಿಗಳು, ಅವುಗಳ ಉಪಯೋಗ ತಿಳಿಸಿ ನೋಡುತ್ತಿದ್ದರು, ನಾಲ್ಕನೆಯದು ತರ್ಕಶಾಸ್ತ್ರ. ಇಲ್ಲಿ ಸತ್ಯ ವಿದ್ಯೆಗಳ ಪೂರ್ಣವಾದ ಚರ್ಚೆ ಕಲಿಸುತ್ತಿದ್ದರು. ಐದನೆಯದು ಮನೋವಿಜ್ಞಾನ ಮತ್ತು ಆತ್ಮ ವಿಜ್ಞಾನ. ಹೀಗೆ ಆರಂಭಿಸಿದ ಜ್ಞಾನಾರ್ಜನೆಯು ಹಂತಹಂತಗಳಲ್ಲಿ ಮುಗಿದು ವ್ಯಕ್ತಿಯನ್ನು ಪಂಡಿತನನ್ನಾಗಿಸುತ್ತಿತ್ತು.

ಆ ಕಾಲದ ಶಿಕ್ಷಣ ಕೇಂದ್ರಗಳೆಂದರೆ ಘಟಕಗಳು, ಅಗ್ರಹಾರಗಳು, ಮಠಗಳು ಮತ್ತು ದೇವಾಲಯಗಳು. ಪ್ರಾಥಮಿಕ, ಶಿಕ್ಷಣವು ಕನ್ನಡದಲ್ಲಿ ನಡೆಯುತ್ತಿತ್ತು. ಜೊತೆಯಲ್ಲಿ ಸಂಸ್ಕೃತದ ಶಿಕ್ಷಣವೂ ಆರಂಭವಾಗುತ್ತಿತ್ತು. ಇದನ್ನು ಕರ್ನಾಟಕ ಬಾಲ ಶಿಕ್ಷೆ ಎಂದು ಕರೆಯುತ್ತಿದ್ದರು. ಪ್ರೌಢ ಶಿಕ್ಷಣವು ಘಟಕ ಅಗ್ರಹಾರಗಳಲ್ಲಿ ನಡೆಯುತ್ತಿತ್ತು.

ಕರ್ನಾಟಕದಲ್ಲಿ ಇಂಥ ಅನೇಕ ಉಚ್ಚಮಟ್ಟದ ಪ್ರೌಢ ವಿದ್ಯಾ ಸಂಸ್ಥೆಗಳಿದ್ದವು. ನಾಗಾಯಿ, ಕಡಿಯೂರು, ಕುಕ್ಕೂರು, ಹೆಂಜೇರು, ಮೋರಿಗೆರೆ, ರಾಯಬಾಗ– ಮುಂತಾದ ಸ್ಥಳಗಳಲ್ಲಿದ್ದ ಘಟಕಗಳ ಬಗ್ಗೆ ಶಾಸನಗಳಲ್ಲಿ ವಿವರಗಳು ದೊರಕುತ್ತವೆ. ಈ ಘಟಕಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದರು. ಗುಲ್ಬರ್ಗ ಜಿಲ್ಲೆಯ ನಾಗಾಯಿಯ ಘಟಕ ಮಂದಿರದಲ್ಲಿ ಒಂದು ಆವರಣದಲ್ಲಿ 257 ಸದಸ್ಯರೂ, ಮತ್ತೊಂದರಲ್ಲಿ 400 ವಿದ್ಯಾರ್ಥಿಗಳೂ ಇದ್ದರಂತೆ. ಈ ಘಟಕಗಳಲ್ಲಿ ವೇಳಾ ನಿಗದಿಕಾರರೂ ಇದ್ದರು. ಅವರನ್ನು ಘಟಿಕಾನಾಯಕರೆಂದು ಕರೆಯುತ್ತಿದ್ದರು.

ನಾಗಾಯಿಘಟಿಕಾಶಾಲೆಯಲ್ಲಿ 200 ವಿದ್ಯಾರ್ಥಿಗಳು ಇದ್ದು ವೇದಗಳನ್ನು ಕಲಿಯುತ್ತಿದ್ದರಂತೆ. ಅವರು ಭಟ್ಟದರ್ಶನ, ನ್ಯಾಸ (ವ್ಯಾಕರಣ)

ಪ್ರಭಾಕರನ ಗ್ರಂಥಗಳನ್ನು ಕಲಿಯುತ್ತಿದ್ದರು. ಈ ಘಟಕವನ್ನು ಹೊಂದಿದ ದೇವಸ್ಥಾನದ ರಕ್ಷಣೆಗಾಗಿಯೂ, ವಿದ್ವಾಂಸರ ಹಾಗೂ ವಿದ್ಯಾರ್ಥಿಗಳ ಅನ್ನ ವಸತಿಗಳ ಸಲುವಾಗಿಯೂ ಸಾವಿರಾರು ಧನಿಕರು ಭೂಮಿಯನ್ನು ದತ್ತಿ ಬಿಟ್ಟಿರುತ್ತಿದ್ದರು.

ಶಿವಮೊಗ್ಗ ಜಿಲ್ಲೆಯ ತಾಳಗುಂದ ಅಗ್ರಹಾರದಲ್ಲಿದ್ದ ಬ್ರಾಹ್ಮಣರು ಉತ್ತರದ ಸಿಂಧೂ ದೇಶದ ಅಹಿಚ್ಛತ್ರಪುರದಿಂದ ಬಂದವರಾಗಿದ್ದು, ವೇದಗಳು ವೇದಾಂಗಗಳು, ಮೀಮಾಂಸೆ, ಮತ್ತು ತರ್ಕದ ಆರು ಪದ್ಧತಿಗಳು, ಸ್ಮೃತಿಗಳು, ಪುರಾಣಗಳು ಮತ್ತು ನಾಟಕ ಕಲೆಗಳಲ್ಲಿ ಪರಿಣತರಾಗಿದ್ದರೆಂದು 11 ನೇ ಶತಮಾನದ ಒಂದು ಶಾಸನ ತಿಳಿಸುತ್ತದೆ.

ಕದಂಬರ ಕಾಲದಲ್ಲಿ ತಾಳಗುಂದವು ಪಡೆದ ಪ್ರಾಶಸ್ತ್ಯವನ್ನು ಚಾಲುಕ್ಯರ ಕಾಲದಲ್ಲಿ ಬಾದಾಮಿ ಪಡೆದಿತ್ತು. ವಾತಾಪಿಯಲ್ಲಿ ಹಲವು ಸಾವಿರ ಉತ್ತಮೋತ್ತಮರಾದ ದ್ವಿಜರಿದ್ದರು. ಅವರು ಚತುಶ್ಶಾಸ್ತ್ರಗಳಲ್ಲಿ ಜ್ಞಾನಸಂಪನ್ನರಾಗಿದ್ದರು. ಐಹೊಳೆಯು ಆ ಕಾಲದ ಒಂದು ಪ್ರೌಢವಿದ್ಯಾಕೇಂದ್ರವಾಗಿತ್ತು. 12ನೆಯ ಶತಮಾನದ ಶಾಸನದಲ್ಲಿ ಅದು 500 ಜನ ಸ್ವಾಮಿಗಳು ಇಲ್ಲವೇ ಪ್ರಭುಗಳ ಒಂದು ಅಗ್ರಹಾರವಾಗಿತ್ತೆಂದು ತಿಳಿಸಿದೆ.

ರಾಷ್ಟ್ರಕೂಟರ ಕಾಲದ ಪ್ರಮುಖ ಅಗ್ರಹಾರ-ಬಿಜಾಪುರ ಜಿಲ್ಲೆಯ ಸೋಲೊಟಗಿ. ಇಲ್ಲಿ ಅನೇಕ ನಾಡಿನ ವಿದ್ವಾಂಸರಿದ್ದರು. ಇವರ ಸಲುವಾಗಿ 500 ನಿವರ್ತಗಳ ಶ್ರೇಷ್ಠ ಭೂಮಿಯನ್ನು ಕೊಟ್ಟಿದ್ದರು, 27 ಸುಸಜ್ಜಿತ ಗೃಹಗಳು, ಹೂದೋಟ ಹಾಗೂ ದೀಪಗಳಿಗಾಗಿ ಭೂಮಿಗಳನ್ನು ಕೊಡಲಾಗಿತ್ತು. ಮದುವೆ ಮುಂಜಿ ಮತ್ತು ಚೌಲ ಸಮಾರಂಭಗಳಲ್ಲಿ ವಿದ್ವಾಂಸರಿಗೆ ಕಾಣಿಕೆ ಕೊಡಲಾಗುತ್ತಿತ್ತು. ಅಗ್ರಹಾರದಲ್ಲಿ ಸಭೆ, ಔತಣಕೂಟಗಳಲ್ಲಿ ಇವರು ಪಾಲುಗೊಳ್ಳುತ್ತಿದ್ದರು. ಶಾಲೆಯ ಶಿಕ್ಷಕರಿಗೆ ಕಂದಾಯದ ವಿನಾಯ್ತಿತಿ ಇತ್ತು. ಅಧ್ಯಾಪಕನನ್ನು ಗದುಗಿನ ಬಳಿಯ ಉಮ್ಮಚಿಗೆ ಅಗ್ರಹಾರದಲ್ಲಿ ಅಕ್ಕರಿಗನೆಂದು ಕರೆಯುತ್ತಿದ್ದರು. ಇವನು ಗಣಿತ, ಖಗೋಳ, ಛಂದಸ್ಸು, ಕಾವ್ಯಶಾಸ್ತ್ರಗಳ ಬೋಧಕನಾಗಿದ್ದನು. ವ್ಯಾಕರಣ ಶಾಸ್ತ್ರದಲ್ಲಿ ಪ್ರವೀಣನಾಗಿದ್ದನು.

ಬೆಳಗಾವಿ ಜಿಲ್ಲೆಯ ದೇಗಾಂವೆ ಅಗ್ರಹಾರವನ್ನು ಕದಂಬ ರಾಜ್ಯದ ದೊರೆಯಾದ ಶಿವಚಿತ್ತನ ರಾಣಿ ಕಮಲಾದೇವಿಯು ಸ್ಥಾಪಿಸಿದ್ದಳು. ಅವಳು ಮಾಡಿದ ದಾನವನ್ನು ಸ್ವೀಕರಿಸಿದ ಬ್ರಾಹ್ಮಣರು ವೇದ, ವೇದಾಂಗ, ನ್ಯಾಯ,

ಮೀಮಾಂಸೆ, ಸಾಂಖ್ಯ, ಯೋಗ, ವೇದಾಂತ, ಶ್ರುತಿ, ಸ್ಮೃತಿ, ಇತಿಹಾಸ ಪುರಾಣ ಮತ್ತು ಖಗೋಲ ಶಾಸ್ತ್ರಗಳಲ್ಲಿ ಪರಿಣತರಿದ್ದರೆಂದು ತಿಳಿಯುತ್ತದೆ.

ಬ್ರಹ್ಮಪುರಿಗಳು ನಗರ ಅಥವಾ ಪಟ್ಟಣಗಳ ಭಾಗವಾಗಿ ಇದ್ದುಕೊಂಡು ವಿದ್ಯಾದಾನ ಮಾಡುತ್ತಿದ್ದವು. ಕೇಶವದೇವನೆಂಬ ಪ್ರಾಂತ್ಯಾಧಿಕಾರಿ ಸ್ಥಾಪಿಸಿದ ಬಳ್ಳಿಗಾಮೆ ಬ್ರಹ್ಮಪುರಿಯಲ್ಲಿ 38 ಮಂದಿ ಬ್ರಾಹ್ಮಣ ಪಂಡಿತರಿದ್ದರು. ಅವರು ಅನೇಕ ಪುರಾಣಗಳು, ಸ್ಮೃತಿಗಳು, ಕಾವ್ಯಗಳು, ನಾಟಕಗಳು, ಭಾಷ್ಯಗಳು ಮತ್ತು ಮಂಜರಿಗಳಲ್ಲಿ ಪರಿಣತರಾಗಿದ್ದರು. ಅವರು ಚತುರವಾಗ್ಮಿಗಳೂ, ಭಾಷಾಸಂಪನ್ನರೂ ಆಗಿದ್ದರು. ಅವರ ವಸತಿಗಾಗಿ ವೀರಕೇಶವಪುರ ಪಟ್ಟಣವನ್ನು ನಿರ್ಮಿಸಿ, ಸುಸಜ್ಜಿತವಾದ ಮನೆಗಳನ್ನು ದಾನ ಮಾಡಿದನಂತೆ. ಇಂಥ ಬ್ರಹ್ಮಪುರಿಗಳು ಸೂಡಿ, ಅರಸೀಬೀದಿ ಅಥವಾ ವಿಕ್ರಮಪುರ, ತಲಕಾಡು ಮುಂತಾದ ನಗರಗಳಲ್ಲಿದ್ದವೆಂದು ತಿಳಿಯುತ್ತದೆ.

ಬಳ್ಳಿಗಾಮೆಯ ಕೋಡಿಮಠದಲ್ಲಿ ಎಲ್ಲ ರೀತಿಯ ವಿಜ್ಞಾನ ಭಾಗಗಳು ಬೋಧಿಸಲ್ಪಡುತ್ತಿದ್ದವು. ಬಡಬಗ್ಗರಿಗೆ, ಅನಾಥರಿಗೆ, ಗಾಯಕರಿಗೆ, ಭಿಕ್ಷುಕರಿಗೆ ಉಚಿತ ಆಹಾರ ಹಂಚುವ ವ್ಯವಸ್ಥೆ ಇತ್ತು. ಈ ಮಠವು ಎಲ್ಲ ಜ್ಞಾನದ ಕೇಂದ್ರವಾಗಿತ್ತು. ಎಲ್ಲ ದೇಶಗಳ ವಿವಿಧ ಧರ್ಮಗಳ ಭಿಕ್ಷುಕರ ಸತ್ರವೂ, ಒಂದು ಉಚಿತ ವೈದ್ಯಾಲಯವೂ, ಸಕಲ ಜೀವಿಗಳ ರಕ್ಷಣಾನಿಲಯವೂ ಆಗಿತ್ತೆಂದು ತಿಳಿಯುತ್ತದೆ. ಈ ಸಂಸ್ಥೆಗೆ ಮಹಾಪಂಡಿತನಾದ ವಾಮಶಕ್ತಿ ಎಂಬುವನು ಅಧ್ಯಕ್ಷನಾಗಿದ್ದನು.

ನಾಗಾಯಿಯ ಮಧುಸೂಧನ ದೇವಾಲಯಕ್ಕೆ ಸೇರಿದ ಮಠವು ಒಂದು ನೃತ್ಯಶಾಲೆ, ಮೂರು ಅಂತಸ್ತಿನ ಸಭಾಭವನದಿಂದ ಕೂಡಿ ಏಕದಂಡಿ, ದ್ವಿದಂಡಿ, ತ್ರಿದಂಡಿ ವಿರಕ್ತರ ಧಾರ್ಮಿಕ ಆಚರಣೆಗೆ ಬೇಕಾದ ಸೌಕರ್ಯಗಳನ್ನು ಪಡೆದಿತ್ತು. ಸ್ನಾತಕ, ಹಂಸ, ಪರಮಹಂಸ ವರ್ಗಗಳ ಬ್ರಹ್ಮಚಾರಿ ವಿರಕ್ತರಿಗೆ ಅಲ್ಲಿ ಸೌಲಭಗಳಿದ್ದವು.

ಅದರಂತೆ ದೇವಸ್ಥಾನಗಳೂ ವಿದ್ಯಾಮಂದಿರಗಳಾಗಿದ್ದವು. ಉದಾಹರಣೆಗಾಗಿ ಹರಿಹರೇಶ್ವರ ದೇವಸ್ಥಾನದಲ್ಲಿ ಚತುರ್ವೇದ, ವ್ಯಾಕರಣ, ಮೀಮಾಂಸೆ, ಅಕ್ಷರ ಶಿಕ್ಷೆಗಳನ್ನು ಬೋಧಿಸುವ ಆರು ಜನ ಪಂಡಿತರಿದ್ದರು. ತಾಳಗುಂದದ ಪ್ರಣವೇಶ್ವರ ದೇವಸ್ಥಾನವೂ ಇಂಥದೇ ವಿದ್ಯಾ ಕೇಂದ್ರವಾಗಿತ್ತು ಎಂದು ತಿಳಿದು ಬರುತ್ತದೆ.

ಭಾರತದ ವಿದ್ವಾಂಸರು ತಮ್ಮ ವಿಷಯಗಳಲ್ಲಿ ಸಂಪೂರ್ಣ ಪಾಂಡಿತ್ಯ ಪಡೆಯಲು, ವಿದ್ಯೆಗಾಗಿ ಇಡೀ ಜೀವನ ಸೌಲಭ್ಯಗಳನ್ನು ಅವರು ಪಡೆದುದ ರಿಂದಲೇ ಇಂಥ ಸಾಧನೆ ಸಾಧ್ಯವಾಯಿತೆಂದು ಹ್ಯೂಯನ್‌ತ್ಸಾಂಗನು ಹೇಳುವ ಮಾತು—ಹನ್ನೆರಡು ಹದಿಮೂರನೆಯ ಶತಮಾನದವರೆಗೂ ಸತ್ಯವಾಗಿತ್ತು. ಅಂತೆಯೇ ಶಂಕರ, ರಾಮಾನುಜ, ಮಧ್ವರಂಥ ಪ್ರತಿಭಾವಂತ ಮತಾಚಾರ್ಯರು ಈ ಅವಧಿಯಲ್ಲಿ ಹುಟ್ಟಲು ಕಾರಣವಾಯಿತು.

ಹನ್ನೊಂದನೆಯ ಶತಮಾನದಲ್ಲಿ ಪ್ರಚಾರಕ್ಕೆ ಬಂದ ವಿದ್ಯಾಕೇಂದ್ರಗಳೇ ಶಿವಪುರಿಗಳು. ಇಲ್ಲಿ ಮೂರು ಬಗೆಯ ವಿದ್ಯೆಗಳನ್ನು ಜಂಗಮ ಇಲ್ಲವೇ ವಿರಕ್ತ ಮಠಗಳಲ್ಲಿ ಕಲಿಸುತ್ತಿದ್ದರೆಂದು ತಿಳಿದು ಬರುತ್ತದೆ.

ಓದಿಸುವ ಮಠದಲ್ಲಿ ಬೋಧನೆ, ಓದುವುದು, ಬರೆಯುವುದನ್ನು ಕಲಿಸ ಲಾಗುತ್ತಿತ್ತು. ವಿರಕ್ತಮಠದಲ್ಲಿ ಧರ್ಮ ಮತ್ತು ವೇದಾಂತ ತತ್ತ್ವಗಳನ್ನು ಬೋಧಿಸಲಾಗುತ್ತಿತ್ತು. ಶಾಲಿ ಮಠದಲ್ಲಿ ಓದುವುದು, ಬರೆಯುವುದು, ಲೆಕ್ಕ ಪತ್ರಗಳನ್ನಿಡುವುದು, ವೃತ್ತಿ ಶಿಕ್ಷಣಗಳನ್ನೂ ಹೇಳಿಕೊಡುತ್ತಿದ್ದರು. ಹೀಗೆ ಇದ್ದ ಶಿಕ್ಷಣ ವ್ಯವಸ್ಥೆ ಜಯತೀರ್ಥರ ಅವತಾರದ ಕಾಲದವರೆಗೂ ಮುಂದುವರೆದು ಕೊಂಡು ಬಂದಿತ್ತು.

**ಸಾಮಾಜಿಕ ಹಾಗೂ ಆರ್ಥಿಕ ಪರಿಸ್ಥಿತಿ—**

ಅಂದಿನ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿಗಳು ಚಾಲುಕ್ಯ ರಾಷ್ಟ್ರ ಕೂಟ ಹೊಯ್ಸಳರ ಕಾಲದಲ್ಲಿ ಇದ್ದ ವ್ಯವಸ್ಥೆಯಾಗಿತ್ತು. ಅಂತಃಕಲಹ, ಒಳ ಹೊರಗಿನ ಶತ್ರುಗಳ ಆಘಾತದಿಂದ ಝರ್ಝರಿತವಾಗಿ ವಿನಾಶದ ಮಾರ್ಗ ಹಿಡಿದಿದ್ದರೂ ಹೊಯ್ಸಳ ಸಾಮ್ರಾಜ್ಯದ ಜನಜೀವನ ಹಿಂದೆ ಇದ್ದ ಜೀವನ ವಿಧಾನವೇ ಆಗಿತ್ತು. ಸಾಮ್ರಾಜ್ಯದಲ್ಲಿ ಗ್ರಾಮಕೂಟ, ದೇವಾಲಯ, ಮಠ ಮಂದಿರಗಳು ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತಾ ಸಮಾಜದ ಆರ್ಥಿಕ ಜೀವನದಲ್ಲಿ ಉತ್ತಮ ಮಟ್ಟದ ಸಾಂಘಿಕ ಜೀವನವನ್ನು ನಡೆಸಲು ಸಹಕರಿಸಿದ್ದವು. ಪ್ರಜೆಗಳು ಯಾವ ವರ್ಣಾಶ್ರಮ ಧರ್ಮಗಳಿಗೆ ಸೇರಿದ್ದರೂ ಹಿಂದಿನಿಂದ ಬಂದಿದ್ದ ಧರ್ಮ, ಸಂಪ್ರದಾಯ ಹಾಗೂ ಆಚರಣೆಗಳಿಗೆ ಅನುಸಾರವಾಗಿ ಬದುಕುತ್ತಿದ್ದರು.

ವ್ಯಕ್ತಿ ಹಾಗೂ ಕುಟುಂಬ ಜೀವನವು ಸಾಮಾಜಿಕ ಆಗುಹೋಗು,

ಧಾರ್ಮಿಕ ತತ್ತ್ವ ಮತ್ತು ನಂಬಿಕೆಗಳ ಮೇಲೆ ನಿಂತಿದ್ದಿತು. ಕುಟುಂಬದ ಹಿರಿಯ ವ್ಯಕ್ತಿಯೇ ಮನೆಯ ಯಜಮಾನನಾಗಿರುತ್ತಿದ್ದ. ಪ್ರಾಪಂಚಿಕ ಹಾಗೂ ಪಾರಮಾರ್ಥಿಕ ಸುಖಕ್ಕೆ ಉಳಿದವರಿಗೆ ಅವನಿಂದ ನೆರವು ದೊರಕುತ್ತಿತ್ತು. ಒಳ್ಳೆಯ ನಡತೆ, ವಿನಯ, ವಿಚಾರಗಳ ಮೇಲೆ ನಿಂತ ಪ್ರಾಮಾಣಿಕ ಜೀವನ ಸುಭದ್ರತೆಗೆ ಅವನು ಕಾರಣನಾಗಿದ್ದನು. ಅಂದಿನ ಸಾಂಸಾರಿಕ ಜೀವನದ ಆದರ್ಶವೆಂದರೆ ದೀರ್ಘಾಯುಸ್ಸು, ಐಶ್ವರ್ಯ, ಖ್ಯಾತಿ, ಗಾಂಭೀರ್ಯ ಮತ್ತು ಶೌರ್ಯ.

ಕುಟುಂಬದಲ್ಲಿ ಪ್ರೀತಿ ವಿಶ್ವಾಸದ ಮೇಲೆ ನಿಂತ ಹಿರಿಯ ಕಿರಿಯರ ಬಾಂಧವ್ಯ ಮಧುರವಾಗಿತ್ತು, ಹಿರಿಯರ ಸೇವಕರಾಗಿ ಕಿರಿಯರು ಕೆರೆ, ಕುಂಟೆ, ಬಾವಿ, ದೇವಮಂದಿರಗಳನ್ನು ನಿರ್ಮಿಸುವ ಪದ್ಧತಿಯಿತ್ತು.

ವರ್ಣಾಶ್ರಮ ಧರ್ಮವು ದಕ್ಷಿಣಾಪಥದಲ್ಲಿ ದೃಢವಾಗಿ ನಿಂತಿತ್ತು. ಈ ಧರ್ಮವನ್ನು ಉಳಿಸುವ, ಬೆಳೆಸುವ ಹೊಣೆ ಹಿರಿಯರದಾಗಿತ್ತು. ವರ್ಣ ಸಾಂಕರ್ಯಕ್ಕೆ ಆದಷ್ಟು ಅವಕಾಶವಿರಲಿಲ್ಲ. 'ಸಕಲಸಮಯ ರಕ್ಷಾಮಣಿ' ಇದು ದೊರೆಗಳ ಹಾಗೂ ಸಾಮಂತರ ಬಿರುದಾಗಿತ್ತು. ಪ್ರಾಚೀನ ಪದ್ಧತಿಯಾದ ಮತಧರ್ಮ ಹಾಗೂ ಮನೋಧರ್ಮಗಳಿಗೆ ಅವರೇ ಆದರ್ಶ.

ಸಮಾಜ ಜೀವನದಲ್ಲಿ ವಣಿಕರು ಪ್ರಧಾನಪಾತ್ರ ವಹಿಸಿದ್ದರು. ಪಟ್ಟಣ ಶೆಟ್ಟಿ, ವರ್ತಕ ಮಂಡಲಿ, ಪಾಂಚಾಲ ಬಳಗಗಳಿದ್ದವು. ಅಂತೆಯೇ ಶಿಲ್ಪಕಾರರು ರತ್ನಪರೀಕ್ಷಕರು, ಸ್ವರ್ಣಕಾರರು, ಬಡಗಿಗಳು, ಗಾರೆಯವರು, ಕಂಚುಗಾರರು ಯೋಗ್ಯಸ್ಥಾನ ಅಲಂಕರಿಸಿದ್ದರು.

ಆಗಿನ ಕಾಲದಲ್ಲಿ ಶ್ರೀಮಂತರಲ್ಲಿ ಬಹುಪತ್ನಿತ್ವ ಪದ್ಧತಿ ಇತ್ತು. ಆದರೆ ಸಾಮಾನ್ಯ ಜನರು ಏಕಪತ್ನಿ ವ್ರತಸ್ಥರಾಗಿದ್ದರು. ವೇಶ್ಯಾ ಪದ್ಧತಿಗೆ ಸಮಾಜ ದಲ್ಲಿ ಗೌರವವಿತ್ತು.

ಮಹಿಳೆಯರಿಗೆ ಸಮಾಜದಲ್ಲಿ ಗೌರವದ ಸ್ಥಾನವಿತ್ತು. ವಿಷ್ಣುವರ್ಧನನ ರಾಣಿ ಶಾಂತಲಾದೇವಿಯು ಸಾಮ್ರಾಜ್ಞಿಯಾಗಿದ್ದುದಲ್ಲದೆ, ಸಾಹಿತ್ಯ ನೃತ್ಯ ಕಲೆ ಗಳಲ್ಲೂ ನಿಷ್ಣಾತಳಾಗಿದ್ದಳು. ಮಹಿಳೆಯರು ರಾಜಕೀಯ ಕ್ಷೇತ್ರವಲ್ಲದೆ, ಧಾರ್ಮಿಕ, ಹಾಗೂ ಸಾಹಿತ್ಯ ಕಲೆಗಳಲ್ಲೂ ಪ್ರಮುಖಪಾತ್ರ ವಹಿಸುತ್ತಿದ್ದರು.

ಕುಂಜೇಶ್ವರ ದೇವಾಲಯದ ಮೇಲ್ವಿಚಾರಣೆಯನ್ನು ರಾಜಕುಮಾರಿ

ಚೆಂದವ್ವೆ ಎಂಬ ಹೆಣ್ಣುಮಗಳು ನಿರ್ವಹಿಸುತ್ತಿದ್ದಳೆಂಬ ಸಂಗತಿ ಶಾಸನದಿಂದ ತಿಳಿದು ಬರುತ್ತದೆ.

ಸ್ತ್ರೀಯರು ತಮ್ಮ ಸ್ವಂತ ಆಸ್ತಿ ಹೊಂದಬಹುದಿತ್ತು. ಮಾರುವ ಹಾಗೂ ಕೊಳ್ಳುವ ಅಧಿಕಾರ ಅವರಿಗಿತ್ತು. ಆದರೂ ಕುಟುಂಬಕ್ಕೆ ಸೇರಿದ ಮಹಿಳೆಯರು ಹಿರಿಯರ ಸಲಹೆಯನ್ನು ತೆಗೆದುಕೊಂಡು ವ್ಯವಹರಿಸುತ್ತಿದ್ದರು.

ಅಂದಿನ ಸಾಮಾನ್ಯ ಜನರೂ ಕಲಾವಿಲಾಸಿಗಳಾಗಿದ್ದರು. ಸಂಗೀತ ನೃತ್ಯಗಳಿಗೆ ಪ್ರೋತ್ಸಾಹ ದೊರೆಯುತ್ತಿತ್ತು. ದೇವಾಲಯಗಳಲ್ಲಿ ದೇವರ ಅಂಗ ಭೋಗ ಹಾಗೂ ನೃತ್ಯಸೇವೆಯ ಸಲುವಾಗಿ, ದತ್ತಿಗಳನ್ನೂ ದಾನಗಳನ್ನೂ ಹಾಕಿ ಕೊಡುತ್ತಿದ್ದರು. ದೇವಾಲಯದ ವ್ಯವಸ್ಥಾಪಕರಲ್ಲಿ ಕಲಾವಿದರೂ ಇದ್ದರು. ಹಾಲು ಹೈನಿನ ಸಂಮೃದ್ಧಿ ಇತ್ತು. ಅನೇಕ ಬಗೆಯ ತಿಂಡಿತಿನಸುಗಳನ್ನು ತಯಾರಿಸ ಬಲ್ಲವರಾಗಿದ್ದರು. ಮಂಡಿಗೆ, ಇಡ್ಡಲಿಗೆ, ಶಾಲ್ಯಾನ್ನಗಳ ಉಲ್ಲೇಖನವಿದೆ.

ಕೂಲಿಗಾರರಿಗೆ ಹಣದ ಬದಲಾಗಿ ಧಾನ್ಯವನ್ನು ಕೂಲಿಯಾಗಿ ಕೊಡುವ ಪದ್ಧತಿ ಇತ್ತು. ವೀರರಿಗೆ ವೀರಮಾನ್ಯ, ಭಟಮಾನ್ಯ, ಉಂಬಳಿಗಳು ದೊರಕುತ್ತಿದ್ದವು. ಕೆರೆ ಕಟ್ಟಿಸುವುದು, ಕಾಲುವೆ ತೋಡಿಸುವುದು, ದೇವಾಲಯ ನಿರ್ಮಿಸುವುದು ಮುಂತಾದ ಸಾರ್ವಜನಿಕ ಕಾರ್ಯಗಳಲ್ಲಿ ಜನರಲ್ಲಿ ಪೈಪೋಟಿ ಇತ್ತು. ಗಡಿ ತೀರ್ಮಾನ, ದನಕರುಗಳ ರಕ್ಷಣೆ, ವ್ಯಾಜ್ಯಪರಿಹಾರ, ನ್ಯಾಯ ತೀರ್ಮಾನ—ಇವೇ ವಿಷಯಗಳಲ್ಲಿ ಪಂಚರ ಮಾತಿಗೆ ಮಾನ್ಯವಿತ್ತು.

ಜನರಿಗೆ, ಕೊಟ್ಟ ವಚನ ಪಾಲಿಸುವುದು, ದೊರೆಗಾಗಿ ಪ್ರಾಣ ಬಿಡುವುದು, ಜನಹಿತಕ್ಕಾಗಿ ಮಡಿಯುವುದು, ದನಗಳ್ಳರನ್ನು ಹಿಡಿಯುವುದು, ಸ್ತ್ರೀಯರ ರಕ್ಷಣೆಗಾಗಿ ಹೋರಾಡುವುದು ವ್ರತವಾಗಿತ್ತು. ವೀರಬಲ್ಲಾಳನ ಕ್ಷೇಮ ಹಾಗೂ ಅಭ್ಯುದಯಕ್ಕಾಗಿಯೇ ಕುವರಲಕ್ಷ್ಮನು ತನ್ನ ಐಶ್ವರ್ಯ ಹಾಗೂ ಜೀವನವನ್ನು ಮೀಸಲಿಟ್ಟ ಕಥೆ ಇನ್ನೂ ನೆನಪಿಗೆ ಬರುತ್ತದೆ.

ದೊರೆಗಾಗಿ ತನ್ನ ಒಡೆಯನಿಗಾಗಿ ಪ್ರಾಣಾರ್ಪಣೆ ಮಾಡುವ ಪುರುಷ ಪದ್ಧತಿಯೇ ಗರುಡ ಪದ್ಧತಿ. ಅವರು ಸಾಯುವ ತನಕ ತನ್ನ ಸ್ವಾಮಿಗೆ ನಿಷ್ಠೆಯಿಂದ ಸೇವೆ ಸಲ್ಲಿಸಿ, ಅನಂತರ ಮಡಿಯುವ ಧೀರರು. ಅದು ಯೋಧರಿಗೆ ದೊರೆಯುತ್ತಿದ್ದ ಅತ್ಯುನ್ನತ ಗೌರವಪದವಿಯಾಗಿತ್ತು.

ಗ್ರಾಮಜೀವನ ಸುಖ ನೆಮ್ಮದಿಯದಾಗಿತ್ತು. ಅನೇಕ ಅಗ್ರಹಾರ, ಪಟ್ಟಣ, ಹಳ್ಳಿಗಳ ನಿರ್ವಹಣೆಗೆ ದೊರೆಗಳು, ಅವರ ರಾಣಿಯರೂ ಕಾರಣ

ರಾಗಿದ್ದರು. ಇಂದಿಗೂ ಅವರ ಹೆಸರು ಹೊತ್ತ ಊರು, ಕೆರೆ, ಅಗ್ರಹಾರಗಳು ದೇವಾಲಯಗಳು ನಿಂತಿವೆ

ವೀರರ ಸಲುವಾಗಿ ವೀರಗಲ್ಲುಗಳನ್ನೂ, ಸತಿಮಣಿಗಳ ತ್ಯಾಗ ನಿರ್ದೇಶಿಸಲು ಮಾಸ್ತಿಕಲ್ಲುಗಳನ್ನೂ ನೆಡುತ್ತಿದ್ದರು. ಇದು ಕೃತಜ್ಞತೆಯ ಕುರುಹಾಗಿತ್ತು. ಗೋಬ್ರಾಹ್ಮಣರನ್ನು ಗೌರವಿಸುತ್ತಿದ್ದರು. ಗೋದಾನ, ಭೂದಾನಗಳು ಪವಿತ್ರ ಕಾರ್ಯಗಳಾಗಿದ್ದವು. ಪುರುಷರ ಉಡುಪು ವರ್ಣಮಯವಾಗಿತ್ತು. ಮಹಿಳೆಯರ ವಸ್ತ್ರಗಳು ನಯವಾಗಿಯೂ, ಕುಸುರಿಕೆಲಸದಿಂದ ಕೂಡಿದ್ದವೂ ಆಗಿದ್ದುವು.

ಆರ್ಥಿಕವಾಗಿ ಜನ ನೆಮ್ಮದಿಯಿಂದ ಇದ್ದರು. ಆದರೂ ಬಡವರು ಶ್ರೀಮಂತರ ನಡುವೆ ಕಂದಕವಿದ್ದರೂ ಸುಖ ಜೀವನಕ್ಕೆ ಬೇಕಾದ ಅಗತ್ಯ ವಸ್ತುಗಳು ಹೇರಳವಾಗಿ ಅಲ್ಪ ಬೆಲೆಗೇ ದೊರಕುತ್ತಿದ್ದವು. ಕ್ಷಾಮಡಾಮರಗಳಲ್ಲಿ, ಅತಿ ವೃಷ್ಟಿ ಅನಾವೃಷ್ಟಿಗಳಲ್ಲಿ, ದೊರೆಗಳೂ, ಶ್ರೀಮಂತರೂ, ಬಡಜನರ ನೆರವಿಗೆ ಬರುತ್ತಿದ್ದ ಉದಾಹರಣೆಗಳು ದೊರಕುತ್ತವೆ.

ದೊರೆಗಳು ವ್ಯವಸಾಯಕ್ಕೆ ಪ್ರೋತ್ಸಾಹ ನೀಡುತ್ತಿದ್ದರು. ಕರಭಾರ ಕಡಿಮೆ ಇತ್ತು. ನೀರು ಸರಬರಾಜಿನ ವ್ಯವಸ್ಥೆ ಚೆನ್ನಾಗಿತ್ತು. ಕೆರೆ ಕಾಲುವೆಗಳ ದುರಸ್ತಿ ಗ್ರಾಮಪಂಚರ ಹೊಣೆಯಾಗಿತ್ತು.

ಆ ಕಾಲದಲ್ಲಿ ಅನೇಕ ಕೈಗಾರಿಕೆಗಳು ನಡೆಯುತ್ತಿದ್ದವು. ಲೋಹ ಕೈಗಾರಿಕೆ ಅಭಿವೃದ್ಧಿ ಸ್ಥಿತಿಯಲ್ಲಿತ್ತು. ಚಿನ್ನ, ಬೆಳ್ಳಿ, ತಾಮ್ರ, ಹಿತ್ತಾಳೆ ಉದ್ದಿಮೆಗಳು ಇದ್ದುವು. ನೆಯ್ಗೆ, ಮರಗೆಲಸ, ಕುಂಬಾರ ಕೆಲಸಗಳು ಜನರನ್ನು ಆಕರ್ಷಿಸುತ್ತಿತ್ತು. ಸರಕಾರದ ರಕ್ಷಣೆ, ಸಾರ್ವಜನಿಕರ ಪೋಷಣೆಗಳಲ್ಲಿ ಅಭಿವೃದ್ಧಿ ಹೊಂದಿದ್ದವು. ವೀರಪಾಂಚಾಲರೆಂಬ ಕೈಕಸುಬಿನ ಜನರು ದೊರೆಯ ವಿಶೇಷ ಅನುಗ್ರಹಕ್ಕೆ ಪಾತ್ರರಾಗಿದ್ದರು.

ವಾಣಿಜ್ಯವು ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಧಾನ್ಯ, ವಸ್ತ್ರ, ಆನೆ, ಕುದುರೆ ಮುಂತಾದ ಕಾಲ್ನಡೆಗಳು, ಚಿನ್ನ, ವಡವೆ, ಎಣ್ಣೆ, ಸೌದೆ, ದಿನಸು— ಹೀಗೆ ನಿತ್ಯವಸ್ತುಗಳನ್ನು ಸಗಟಾಗಿಯೂ, ಚಿಲ್ಲರೆಯಾಗಿ ಅಲ್ಲದೆ ಬೀದಿಯಲ್ಲೂ ಮತ್ತು ಮನೆಮನೆಗೇ ತಂದು ಮಾರುವ ವ್ಯಾಪಾರಿಗಳಿದ್ದರು.

ಅರಸೀಕೆರೆ ತಾಲ್ಲೂಕು ಬಾಣಾವರದ ಕ್ರಿ.ಶ. 1188ರ ಒಂದು ಶಾಸನದಲ್ಲಿ ಕಮ್ಮಟ ಚಿನ್ನಸೆಟ್ಟಿ ಎಂಬುವನು ಕುದುರೆ, ಆನೆ, ಮುತ್ತುಗಳನ್ನು ಹಡಗಿನಲ್ಲಿ

ಆಮದು ಮಾಡಿಕೊಂಡು ದೊರೆಗೆ ಮಾರಿದ ಉಲ್ಲೇಖನವಿದೆ. ಅವನ ಸೋದರ ದಾಸಯ್ಯಸೆಟ್ಟಿಯು ಭಾರತದಲ್ಲೇ ದೊಡ್ಡ ವಣಿಕನಾಗಿದ್ದನು. ಕುಂಜನಂಬಿಸೆಟ್ಟಿಯೆಂಬುವನು ಮಾಳವ, ಕಳಿಂಗ, ಚೋಳ, ಪಾಂಡ್ಯ ದೊರೆಗಳಿಗೂ ಬೇಕಾದ ಪದಾರ್ಥಗಳನ್ನು ಸರಬರಾಜು ಮಾಡುತ್ತಿದ್ದನೆಂದು ಶಾಸನದಿಂದ ತಿಳಿಯುತ್ತದೆ. ಇಷ್ಟಾದರೂ ಅವನು ಸತ್ಯದ ಮೂರ್ತಿಯಾಗಿದ್ದನಂತೆ.

ಇವಲ್ಲದೆ ವಾಣಿಜ್ಯ ವೃತ್ತಿಸಂಘಗಳು ಇದ್ದವು. ಈ ಸಂಘಗಳು ದೇಶದ ಸಾಮಾಜಿಕ, ಆರ್ಥಿಕ, ರಾಜಕೀಯ ಜೀವನದ ಮೇಲೆ ವಿಶೇಷವಾದ ಪ್ರಭಾವ ಬೀರಬಲ್ಲ ಸ್ಥಿತಿಯಲ್ಲಿದ್ದವು. ಮೊಸಲೆ, ಬೆಳಗೊಳ, ಅರಸೀಕೆರೆ, ದಲಗೆ— ಇವು ಹೊಯ್ಸಳರ ಕಾಲದ ಕೆಲವು ವಾಣಿಜ್ಯ ಕೇಂದ್ರಗಳು. ಅಲ್ಲಿ ಹತ್ತಿಯ ದಾರ, ಬಟ್ಟೆ, ಮಸ್ಲಿನ್, ಸಾಮ್ರಾಣಿ, ಅಡಕೆ, ತೆಂಗು, ದಂತಗಳನ್ನು ಪರದೇಶಗಳಿಗೆ ರಫ್ತು ಮಾಡುತ್ತಿದ್ದರು.

ವಾಣಿಜ್ಯ ತೆರಿಗೆಯ ನೀತಿ ಉದಾರವಾಗಿದ್ದುದರಿಂದ ಉದ್ದಿಮೆ ವಾಣಿಜ್ಯಗಳು ಚೆನ್ನಾಗಿ ಅಭಿವೃದ್ಧಿ ಹೊಂದಿ, ಗ್ರಾಮ, ನಗರ, ಖೇಡಗಳು ಸಂಪತ್ತಿನ ಆಗರಗಳಾಗಿದ್ದವು. ಅಂತಲೇ ಮುಸಲ್ಮಾನ ದಾಳಿಕಾರರಿಗೆ ದಕ್ಷಿಣಾಪಥವು ಆಕರ್ಷಣೆಯನ್ನು ಉಂಟುಮಾಡಿತ್ತು.

## ಧಾರ್ಮಿಕ ಪರಿಸ್ಥಿತಿ—

ಜಯತೀರ್ಥರು ಅವತರಿಸುವ ಕಾಲಕ್ಕಾಗಲೇ ಜೈನಧರ್ಮವು ಕರ್ನಾಟಕದಲ್ಲಿ ಇಳಿಗಾಲ ಸ್ಥಿತಿಯಲ್ಲಿತ್ತು. ಬೌದ್ಧಧರ್ಮವಾದರೋ ಕರ್ನಾಟಕದಿಂದ ಕಣ್ಮರೆಯಾಗಿತ್ತು. ಈಗ ನಾಡಿನಲ್ಲಿ ಪ್ರಬಲವಾಗಿದ್ದ ಮತ ಪಂಥಗಳೆಂದರೆ ಅದ್ವೈತ, ವಿಶಿಷ್ಟಾದ್ವೈತ ಮತ್ತು ದ್ವೈತಮತಗಳು. ಮುಸಲ್ಮಾನರು ಬಲಾತ್ಕಾರದಿಂದ ಮತಾಂತರಗೊಳಿಸಿದುದರಿಂದ ಮುಸಲ್ಮಾನರ ಸಂಖ್ಯೆ ಬೆಳೆಯತೊಡಗಿತ್ತು. ಕ್ರೈಸ್ತಧರ್ಮ ಮಾತ್ರ ಇನ್ನೂ ಭಾರತದಲ್ಲಿ ಕಾಲಿಡುತ್ತಿತ್ತು.

ವೈದಿಕ ಮತಗಳಾದ ದ್ವೈತ-ಅದ್ವೈತಗಳ ನಡುವೆ ಸ್ಪರ್ಧೆ ನಡೆದಿತ್ತು. ಜನಸಾಮಾನ್ಯರ ಪಾಲಿಗೆ ವೀರಶೈವ ಮತ ಆಕರ್ಷಣೀಯವಾಗಿತ್ತು. ಅವರ ಸಂಖ್ಯೆ ಹೆಚ್ಚಾಗಿತ್ತು.

ಬ್ರಾಹ್ಮಣರು ಮಾತ್ರ ವೈದಿಕ ಮತಾನುಯಾಯಿಗಳಾಗಿದ್ದರು. ಶಂಕರಾಚಾರ್ಯರ ಆಗಮನದೊಂದಿಗೆ ಅದ್ವೈತ ಮತವು ಕರ್ನಾಟಕಕ್ಕೆ ಕಾಲಿರಿಸಿತ್ತು.

ಕೇರಳದ ಕಾಲಡಿಯಲ್ಲಿ ಜನಿಸಿದ ಶಂಕರಾಚಾರ್ಯರು ಚಿಕ್ಕವಯಸ್ಸಿನಲ್ಲೇ ಗ್ರಂಥರಚನೆ ಮಾಡಿ, ಭಾರತದಲ್ಲೆಲ್ಲಾ ಸಂಚರಿಸಿ, ವಾದಿಗಳನ್ನು ಗೆದ್ದು ಅದ್ವೈತಮತ ಪ್ರಸಾರದ ಸಲುವಾಗಿ ನಾಡಿನ ನಾಲ್ಕು ಭಾಗಗಳಲ್ಲಿ ತಮ್ಮ ಪೀಠಗಳನ್ನು ಸ್ಥಾಪಿಸಿದರಷ್ಟೇ.1 ಅವರ ಶಾರದಾಪೀಠ ಶೃಂಗೇರಿಯಲ್ಲಿಯು ಸ್ಥಾಪಿತವಾಗಿತ್ತು. ಇದಕ್ಕೆ ದಕ್ಷಿಣ ಆಮ್ನಾಯಪೀಠವೆಂದು ಹೆಸರಾಗಿ ಸುರೇಶ್ವರಾಚಾರ್ಯರ ಪರಂಪರೆ ಮುಂದುವರೆದಿತ್ತು.

ಶ್ರೀ ಶಂಕರಾಚಾರ್ಯರು ತಮ್ಮ ಅದ್ವೈತ ಸಿದ್ಧಾಂತವನ್ನು ಪ್ರಚಾರಕ್ಕೆ ತರುವ ಮೊದಲೇ ಅವರ ಗುರುಗಳಾದ ಗೋವಿಂದಭಗವತ್ಪಾದರೂ ಮತ್ತು ಅವರ ಗುರುಗಳಾದ ಗೌಡಪಾದರೂ ಈ ಸಿದ್ಧಾಂತವನ್ನು ಮಂಡಿಸಿದ್ದರು. ಗೌಡಪಾದರು ಮಾಂಡೂಕ್ಯ ಉಪನಿಷತ್ತಿನ ಮೇಲೆ ಒಂದು ಕಾರಿಕಾವ್ಯಾಖ್ಯಾನವನ್ನು ರಚಿಸಿ, ಜೀವ ಬ್ರಹ್ಮರ ಐಕ್ಯವಾದವನ್ನು ಸಾರಿದ್ದರು. ಶಂಕರಾಚಾರ್ಯರು ಪ್ರಸ್ಥಾನತ್ರಯಗಳಾದ ಬ್ರಹ್ಮಸೂತ್ರ, ಗೀತೆ ಮತ್ತು ಉಪನಿಷತ್ತುಗಳಿಗೆ ಅದ್ವೈತಪರ ವ್ಯಾಖ್ಯಾನ ರಚಿಸಿದರು. ಅವರು ತಮ್ಮ ಗ್ರಂಥಗಳಲ್ಲಿ ಸಂಖ್ಯಾ ಮತ್ತು ಮೀಮಾಂಸಕರ ವಾದಗಳನ್ನು ನಿರಾಕರಿಸಿ ಅದ್ವೈತ ವಾದವನ್ನು ಎತ್ತಿ ಹಿಡಿದರು.

ವೇದಗಳ ಮುಖ್ಯ ತಾತ್ಪರ್ಯ ಬ್ರಾಹ್ಮಣಗಳಲ್ಲಿ ಅಡಗಿದೆ. ಉಪನಿಷತ್ತುಗಳಲ್ಲಿ ಅಲ್ಲ—ಎಂದು ಮೀಮಾಂಸಕರು ಅಭಿಪ್ರಾಯಪಟ್ಟು ಯಜ್ಞಯಾಗಾದಿ ಕರ್ಮಗಳ ಅನುಷ್ಠಾನದಿಂದ ಮುಕ್ತಿ ದೊರಕುವುದೆಂದು ಹೇಳಿದರು. ಕರ್ಮವೇ ಮುಖ್ಯ ವಿಷಯ, ಬ್ರಹ್ಮಜ್ಞಾನವಲ್ಲವೆಂದು ಅವರ ಮತ. ಮೀಮಾಂಸಕರ ಈ ನಿಲುವನ್ನು ಖಂಡಿಸುತ್ತಾ ಶಂಕರಾಚಾರ್ಯರು, ಉಪನಿಷತ್ತುಗಳ ತಾತ್ಪರ್ಯವು ಕರ್ಮವಲ್ಲ, ಬ್ರಹ್ಮಜ್ಞಾನ. ಆತ್ಮವು ಬ್ರಹ್ಮ ಎಂಬುದನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವ ವಿಧಾನವನ್ನು ಅವು ಬೋಧಿಸುತ್ತವೆ ಎಂದು ಪ್ರತಿಪಾದಿಸಿದರು. ಸಚ್ಚಿದಾನಂದ ಸ್ವರೂಪವಾದ ಪರಮಾತ್ಮ ಅಥವಾ ಬ್ರಹ್ಮ ಅದ್ವೈತದ ಮೂಲತತ್ತ್ವ.

---

1) ನಾಲ್ಕು ಆಮ್ನಾಯ ಪೀಠಗಳು :

ಉತ್ತರದಲ್ಲಿ ಕೇದಾರ, ಪೂರ್ವದಲ್ಲಿ ಪೂರಿಜಗನ್ನಾಥ ದಕ್ಷಿಣದಲ್ಲಿ ಶೃಂಗೇರಿ, ಪಶ್ಚಿಮದಲ್ಲಿ ದ್ವಾರಕಾ.

ಈ ಬ್ರಹ್ಮದ ಅಸ್ತಿತ್ವದ ಬಗ್ಗೆ ವೇದಗಳೇ ಪರಮಪ್ರಮಾಣ. ಬ್ರಹ್ಮಜ್ಞಾನವು ಜ್ಞಾನಕ್ಕೆ ವಿಷಯವಲ್ಲ, ಅದು ಜ್ಞಾನ ಸ್ವರೂಪವೇ ಆಗಿದೆ. ಬ್ರಹ್ಮ ಭಿನ್ನವಾದದ್ದು ಯಾವುದೂ ಇಲ್ಲ. ಅದು ಸ್ವತಃ ಸಿದ್ಧ, ಸ್ವಪ್ರಕಾಶ. ಬ್ರಹ್ಮನನ್ನು ವಿಷಯವಾಗಿ ತಿಳಿದುಕೊಳ್ಳಲಾಗದು. ಬ್ರಹ್ಮವೇ ತಾನಾಗಬಹುದು. ಶಾಸ್ತ್ರ ವಿಹಿತ ಕರ್ಮ ಅನುಷ್ಠಾನದಿಂದ ಚಿತ್ತ ಶುದ್ಧಿ ಪಡೆದು, ಶಾಸ್ತ್ರ ಪ್ರತಿಪಾದಿತವಾದ ಸತ್ಯವನ್ನು ಧ್ಯಾನ ಮಾಡುವ ಸಾಧಕನಿಗೆ ಬ್ರಹ್ಮಾನುಭವ ಸಾಧ್ಯ. ಪ್ರತ್ಯಕ್ಷ ಮತ್ತು ಅನುಮಾನಗಳು ಶಾಸ್ತ್ರಸಿದ್ಧವಾದ ಸದ್ವಸ್ತುವನ್ನು ಸಮರ್ಥಿಸುತ್ತವೆ.

ಅದ್ವೈತ ವಾದಕ್ಕೆ ಎರಡು ತತ್ತ್ವಗಳು ಆಧಾರವಾಗಿವೆ. ಪರಮಾರ್ಥ ಸತ್ಯವು ಎಂದೆಂದಿಗೂ ಆಬಾಧಿತ. ಆತ್ಯಂತ ಅಸತ್ತಾದದ್ದು ಗೋಚರವಾಗುವುದಿಲ್ಲ. ಬ್ರಹ್ಮಭಿನ್ನವಾದ ಸದ್ವಸ್ತು ಇಲ್ಲವಾದುದರಿಂದ ಬ್ರಹ್ಮಕ್ಕೆ ವಿಶೇಷಣಗಳನ್ನು ಹೇಚ್ಚುವುದು ಯುಕ್ತವಲ್ಲ. ಅನಂತವಾದ ಜ್ಞಾನ ಆನಂದಗಳನ್ನು ಬ್ರಹ್ಮ ಹೊಂದಿಲ್ಲ. ಅದು ಜ್ಞಾನಾನಂದ ಸ್ವರೂಪವೇ ಆಗಿದೆ—ಎಂದು ಶಂಕರಾಚಾರ್ಯರು ಹೇಳುತ್ತಾರೆ.

ಅವರ ಪ್ರಕಾರ ಪ್ರಪಂಚವು ಬ್ರಹ್ಮಸೃಷ್ಟಿಯಲ್ಲ, ಬ್ರಹ್ಮದ ಪರಿಣಾಮವೂ ಅಲ್ಲ. ಅದು ಬ್ರಹ್ಮದ ಭ್ರಮಾತ್ಮಕವಾದ ತೋರಿಕೆ ಮಾತ್ರ. ಈ ಭ್ರಮಾತ್ಮಕ ಜಗತ್ತಿಗೆ ಮಾಯಾ ಎಂಬ ಅಜ್ಞಾನವೇ ಕಾರಣ. ಅದು ಬ್ರಹ್ಮನನ್ನು ಮರೆಮಾಡಿ, ಬಹು ವಿಧವಾದ ಪ್ರಪಂಚವನ್ನು ಮೂಡಿಸುತ್ತದೆ. ಬ್ರಹ್ಮ ಸಾಕ್ಷಾತ್ಕಾರವಾದರೆ ಈ ಅವಿದ್ಯೆಯ ರೂಪವಾದ ಜಗತ್ತು ಇರುವುದಿಲ್ಲ. ಇದಕ್ಕೆ ಬ್ರಹ್ಮವಿವರ್ತವಾದವೆಂದು ಹೆಸರು.

ಅದ್ವೈತವು ಜೀವ ಬ್ರಹ್ಮರ ಅಭೇದವನ್ನು ಹೇಳುತ್ತದೆ. ಇದಕ್ಕೆ ಮುಖ್ಯ ಪ್ರಮಾಣ ಶ್ರುತಿಗಳು. ಛಾಂದೋಗ್ಯ ಉಪನಿಷತ್ತಿನಲ್ಲಿ ತತ್ತ್ವಮಸಿ ಎಂಬ ವಾಕ್ಯ ಇದನ್ನು ತಿಳಿಸಿಕೊಡುತ್ತದೆ. ಬ್ರಹ್ಮೈಕ್ಯ ಜ್ಞಾನವನ್ನು ಇಂದ್ರಿಯಾನುಭವದಂತೆ ಅರಿಯಲಾಗದು. ಪ್ರತ್ಯಕ್ಷದಿಂದ ಉಂಟಾಗುವ ಜ್ಞಾನ ಅಪೇಕ್ಷಿತ ಸತ್ಯ ಮಾತ್ರ. ಬ್ರಹ್ಮಭಿನ್ನವಾದುದು ಅಪೇಕ್ಷಿತ ಸತ್ಯ.

ಅದ್ವೈತಸಾಧಕನು ವೈದಿಕ ನಿಯಮಗಳನ್ನು ಅನುಸರಿಸಿ, ಅಂದರೆ ಸಂಯಮ ಜೀವನ, ವಿಹಿತಕರ್ಮಗಳಿಂದ ಮನಃಪ್ರಸನ್ನತೆಯನ್ನು ಪಡೆದು, ವೇದಾಧ್ಯಯನದಿಂದ ಸಾಧನ ಚತುಷ್ಟಯಗಳಾದ ನಿತ್ಯಾನಿತ್ಯವಸ್ತುವಿವೇಕ,

ಇಹಪರಗಳಲ್ಲಿ ಕರ್ಮಭೋಗಕ್ಕೆ ಆಸೆ ಪಡದಿರುವುದು, ಶಮದಮಾದಿ ಗುಣಗಳು ಮತ್ತು ಮೋಕ್ಷಾಪೇಕ್ಷೆಗಳಿಂದ ಮುಕ್ತನಾಗಬಹುದು. ಮುಕ್ತಿಯು ಜೀವ ಪರಮಾತ್ಮಕ ಭಾವದಿಂದ ಬರುತ್ತದೆ. ಅವಿದ್ಯೆ ನಾಶವಾದೊಡನೆ ಬ್ರಹಾನುಭವವಾಗುತ್ತದೆ. ಬ್ರಹ್ಮಾನುಭವವು ಆತ್ಮಸ್ವರೂಪದ ಸಾಕ್ಷಾತ್ಕಾರ. ಇಂಥ ಆತ್ಮಸಾಕ್ಷಾತ್ಕಾರವು ಎಲ್ಲರಿಗೂ ಸಾಧ್ಯವೆಂದು ಶಂಕರರ ಅಭಿಮತ. ಆತ್ಮಸಾಕ್ಷಾತ್ಕಾರವಾದರೆ ಬ್ರಹ್ಮಸಾಕ್ಷಾತ್ಕಾರ. ಅವನಿಗೆ ದೇಹ ಬಂಧನವಿರುವುದಿಲ್ಲ. ಮುಕ್ತನಾದ ಜೀವಿಯು ಪರಮಾತ್ಮನೇ ಆಗುವುದರಿಂದ ಅವನಿಗೆ ಹೊರತಾದುದೇನೂ ಇರುವುದಿಲ್ಲವೆಂದು ಶಂಕರಾಚಾರ್ಯರು ಸರ್ವಜೀವ ಮೋಕ್ಷವನ್ನು, ಆಧುನಿಕ ಅಧ್ಯಾತ್ಮ ಸಮಾಜವಾದವನ್ನು ಹೇಳುವುದರಿಂದ ಈ ಅದ್ವೈತಮತವು ಮೋಹಕವೆನಿಸಿದೆ.1

ವಿಶಿಷ್ಟಾದ್ವೈತಮತವು ಅದರ ಪ್ರತಿಷ್ಠಾಪಕರಾದ ಶ್ರೀ ರಾಮಾನುಜಾಚಾರ್ಯರ ಆಗಮನದೊಡನೆ ಕರ್ನಾಟಕಕ್ಕೆ ಬಂದಿತು. ಅವರ ಮತಕ್ಕೆ ಶ್ರೀ ವೈಷ್ಣವ ಮತವೆಂದೂ, ಉಭಯವೇದಾಂತ ಮತವೆಂದೂ ಹೆಸರು. ಶ್ರೀ ರಾಮಾನುಜಾಚಾರ್ಯರು ಕ್ರಿ. ಶ. 1100 ರಿಂದ 1116 ರವರೆಗೆ ಕರ್ನಾಟಕದಲ್ಲಿದ್ದು, ಮೇಲುಕೋಟೆಯಲ್ಲಿ ಚಲುವ ನಾರಾಯಣ ವಿಗ್ರಹವನ್ನು ಪ್ರತಿಷ್ಠಿಸಿ ಹೊಯ್ಸಳ ಬಿಟ್ಟಿದೇವನಿಗೆ ವೈಷ್ಣವ ದೀಕ್ಷೆ ಕೊಟ್ಟು ವಿಷ್ಣುವರ್ಧನನ್ನಾಗಿ ಮಾಡಿದರೆಂದು ತಿಳಿಯುತ್ತದೆ.

ಮಹಾವಿಷ್ಣು ಜಗತ್ತಿನ ಸೃಷ್ಟಿಕರ್ತ. ಲಕ್ಷ್ಮೀಸಹಿತನಾದ ಅವನೇ ಎಲ್ಲ ಜೀವರ ಆರಾಧ್ಯ ಹಾಗೂ ಸಾಧನೆಯ ಗುರಿ. ಲಕ್ಷ್ಮಿಯು ದೈವಕೃಪೆಯ ಪ್ರತೀಕ. ಅವಳ ಅನುಗ್ರಹದಿಂದ ಭಗವಂತನ ಸಾಕ್ಷಾತ್ಕಾರವಾಗುತ್ತದೆ. ಇದಕ್ಕೆ 'ಓಂ ನಮೋ ನಾರಾಯಣಾಯ' ಎಂಬ ತಿರುಮಂತ್ರ ಸಾಧನ.

---

1) ಅದ್ವೈತ ಸಿದ್ಧಾಂತ :

ಬ್ರಹ್ಮಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ ।
ಶ್ರೀಮಚ್ಛಂಕರದರ್ಶನೇ ಜಗದಿಂದ ಮಿಥ್ಯಾ ಪರಬ್ರಹ್ಮತ
ತ್ಸತ್ಯಂ ತತ್ಪ್ರತಿಬಿಂಬಮೇತದಖಿಲಂ ಸ್ವಂ ಚ ಸ್ವಯಂ ಪಶ್ಯತಿ ।
ಮಾಯಾಯಾಂಜನಕುಂಭಪಂಕ್ತಿಶಶಿವದ್ಭೇದೋ ನ ಸನ್ಮಜ್ಞತಾ
ಹಾನಿರ್ಮುಕ್ತಿರಿತಃಪ್ರಮಾ ಚ ಕರಣಂ ಬ್ರಹ್ಮೈವಮಾಶ್ಯೇಗುಣಂ ॥

ಓಂಕಾರವು ಭಗವಂತ, ಲಕ್ಷ್ಮೀ, ಶೇಷ ಹಾಗೂ ಜೀವತ್ವಗಳ ಸಂಕೇತವೆಂದು ಶ್ರೀ ರಾಮಾನುಜರು ತಿಳಿಸುತ್ತಾರೆ. ನಾರಾಯಣನು ಜ್ಞಾನ, ಆನಂದ, ವಿವೇಕ, ಸೌಂದರ್ಯ ಮೊದಲಾದ ಅನಂತಗುಣಗಳಿಗೆ ಆಶ್ರಯನು. ಇಂಥ ಸ್ವಾಮಿಯನ್ನು ಅನವರತ ಸೇವಿಸುವ ಭಾಗ್ಯ ಒದಗಲೆಂಬುದೇ ತಿರುಮಂತ್ರದ ಸ್ಥೂಲಾರ್ಥ.

ಸಾಂಸಾರಿಕ ಸಂಬಂಧಗಳನ್ನು ಬದಿಗೊತ್ತಿ ಸ್ವಾಮಿಯೇ ಅನನ್ಯ ರಕ್ಷಕನೆಂದು ನಂಬಿ ಅನನ್ಯ ಶರಣ್ಯ ಭಕ್ತಿಯಿಂದ ಅವನ ಅನುಗ್ರಹವನ್ನು ಪಡೆಯಬಹುದೆಂದು ಅವರು ಹೇಳುತ್ತಾರೆ.

ಭಗವಂತನು ಸಕಲ ಪರಿಪೂರ್ಣ ಗುಣಗಳ ಸಾಕಾರಮೂರ್ತಿ. ಅವನು ಸುಗುಣವೆನಿಸುವ ಪರವಸ್ತು. ಭಗವಂತನ ಪ್ರಾಪ್ತಿಗಾಗಿ ಜೀವ ಹಂಬಲಿಸುತ್ತದೆ. ಇಂಥ ಬಯಕೆ ಜೀವನನ್ನು ಸಂಸಾರದ ಬಂಧನಗಳಿಂದ ವಿಮೋಚನೆ ಮಾಡುತ್ತದೆ. ಮೋಕ್ಷವೆಂದರೆ ರಾಮಾನುಜರ ದೃಷ್ಟಿಯಲ್ಲಿ ಜೀವಾತ್ಮನು ಭಗವಂತನಲ್ಲಿ ಐಕ್ಯವಾಗುವುದಲ್ಲ. ಮೋಕ್ಷವೆಂದರೆ ಭಗವಂತನೊಡನೆ ಪಡೆದ ಸಖ್ಯ. ಆತ್ಮ ಆವಿಷ್ಕಾರ. ಆತ್ಮನ ನಿಜಸ್ವರೂಪದ ಆವಿರ್ಭಾವವೇ (ಸ್ವರೂಪ ಆವಿರ್ಭಾವ) ಮೋಕ್ಷಲಕ್ಷಣವೆಂದು ಅವರು ಹೇಳುತ್ತಾರೆ.1

---

1) ರಾಮಾನುಜ ಸಿದ್ಧಾಂತ—

ಶ್ರೀರಾಮಾನುಜದರ್ಶನೇ ಪರತರಃ ಶ್ರೀವಲ್ಲಭಸ್ತಜ್ಜಗ
ತ್ಸತ್ಯಂ ಭಾನುತದೀಯ್ಯಭಾವದವಿನಾಭಾವಶ್ಚ ಜೀವೇಶಯೋಃ ।
ಆಗ್ರೇ ಜೀವಗಣಂ ಹರೇರನುಪಮಾನಂದದಸ್ತುಮುಕ್ತಿಪ್ರಪ
ತ್ತ್ಯನ್ನೇತಾತ್ರಿತಯಂ ಪ್ರಮಾಣಮಪರೋಕಶ್ಚಿಧ್ಯಾತ್ಮವೇದ್ಯೋ ಹರಿಃ ॥

ರಾಮಾನುಜ ಸಿದ್ಧಾಂತದ ಪ್ರಕಾರ ಮುಕ್ತಿಯಲ್ಲಿ ಆನಂದ ತಾರತಮ್ಯ ವಿಚಾರ ಹೀಗಿದೆ :—"ಪರಮಂ ಸಾಮ್ಯಮುಪೈತಿ" ಎಂಬ ಸಾಮ್ಯ ಶ್ರುತಿಯ ಪ್ರಕಾರ ಮುಕ್ತಿಯಲ್ಲಿ ತಾರತಮ್ಯವಿಲ್ಲ. ಸಾಯುಜ್ಯವೆಂದರೆ ಪರಮಾತ್ಮನಲ್ಲಿ ಐಕ್ಯವೆಂದು ಅವರು ಹೇಳುತ್ತಾರೆ. ಶ್ರೀನಿವಾಸ ತಾತಾಚಾರ್ಯರ ಆನಂದ ತಾರತಮ್ಯ ಖಂಡನದಲ್ಲಿ ಹೀಗಿದೆ—

ಯಚ್ಚ ಸಾಧನವೈಷಮ್ಯಾತ್ಸಾಧ್ಯವೈಷಮ್ಯಮೂಚಿರೇ ।
ನಿರಸ್ಯತೇ ತದಪ್ಯತ್ರ ಸಂಶಃ ಪಶ್ಯಂತು ಸೂರಯಃ ॥

ಜೀವವನ್ನು ಸಂಸಾರದಿಂದ ಬಿಡುಗಡೆ ಮಾಡುವವನೂ ಭಗವಂತನೇ. ಪರಿಪೂರ್ಣ ಶರಣಾಗತಿ-ಪ್ರಪತ್ತಿಯಿಂದ-ಈ ಬಂಧನದಿಂದ ಬಿಡುಗಡೆ ಹೊಂದ ಬಹುದು. ಪರಿಪೂರ್ಣ ಶರಣಾಗತಿಯಲ್ಲಿ ಉಚ್ಚ-ನೀಚ, ಗಂಡು-ಹೆಣ್ಣು ಎಂಬ ಭೇದವಿಲ್ಲ. ದೈನ್ಯದಿಂದ ಕೂಡಿದ ಆತ್ಮಾರ್ಪಣೆಗೆ ಅವನು ಒಲಿಯು ಯುತ್ತಾನೆ, ಬಂಧನದಿಂದ ಬಿಡಿಸುತ್ತಾನೆ.

ಈ ದೃಷ್ಟಿಯಿಂದ ಶ್ರೀ ರಾಮಾನುಜಾಚಾರ್ಯರು ಪ್ರಸ್ಥಾನತ್ರಯಗಳಿಗೆ ಭಾಷ್ಯ ಬರೆದಿದ್ದಾರೆ. ಅವರು ಅದರಲ್ಲಿ ಭಕ್ತಿರೂಪಾಪನ್ನ ಜ್ಞಾನ ಪರಮಾತ್ಮನನ್ನು ಪಡೆಯುವ ದಾರಿ ಎಂದು ತೋರಿಸಿದ್ದಾರೆ.

ಆಚಾರ್ಯರು ಪ್ರತಿಪಾದಿಸಿದ ವೇದಾಂತ ತತ್ತ್ವಗಳು ಮೂರು (ರಹಸ್ಯತ್ರಯ). ತತ್ತ್ವ, ಹಿತ ಮತ್ತು ಪುರುಷಾರ್ಥ. ಜೀವಜಗತ್ತು ಮತ್ತು ಬ್ರಹ್ಮಗಳ ವೇದಾಂತ ಜ್ಞಾನವೇ ತತ್ತ್ವ. ಜೀವನದ ಅಂತ್ಯ ಗುರಿ ಯನ್ನು ಸಾಧಿಸಲು ಸಹಾಯಕವಾಗುವುದೇ ಹಿತ. ಅದೇ ಕೈಂಕರ್ಯ. ಕರ್ಮ ಭಕ್ತಿ ಪ್ರಪತ್ತಿಗಳು ಜೀವನವು ಸಾಧಿಸಬೇಕಾದ ಅಂತಿಮ ಗುರಿಯೇ ಪುರುಷಾರ್ಥ ಅಂದರೆ, ಸ್ವಾಮಿಯೊಡನೆ ಅವಿಚ್ಛಿನ್ನವಾದ ಅತ್ಯಂತ ಸಮೀಪತರ ಸಂಬಂಧ ಮತ್ತು ಅವನಿಗೆ ಅನವರತ ಸೇವೆ ಇವುಗಳೇ ಜೀವನ ಪುರುಷಾರ್ಥ.

ಶ್ರೀ ರಾಮಾನುಜಾಚಾರ್ಯರ ಪ್ರಭಾವಕ್ಕೆ ಬಿದ್ದ ಉತ್ತರ ಭಾರತದ ಸ್ವಾಮಿ ರಾಮಾನಂದರು, ಪ್ರಪತ್ತಿಮಾರ್ಗವನ್ನು ಅಂದರೆ ವಿಷ್ಣುಭಕ್ತಿಯನ್ನು ಅಲ್ಲಿ ಹರಡಿದರೆಂದು ತಿಳಿಯುತ್ತದೆ. ರಾಮಾನುಜರಿಂದ ಉಕ್ತವಾದ ವಿವೇಕ, ಅಭ್ಯಾಸ, ಕ್ರಿಯಾ, ಕಲ್ಯಾಣ, ಅನವಸಾನ ಮತ್ತು ಅನುದ್ಧರ್ಶ ಮೊದಲಾದ ಸಾಧನ ಸಪ್ತಕವನ್ನು ಅವರು ಒಪ್ಪಿಕೊಂಡಿರುವುದೇ ಇದಕ್ಕೆ ಸಾಕ್ಷಿ.

ಕನ್ನಡನಾಡಿನಲ್ಲಿ ಬಹು ಪ್ರಸಾರದಲ್ಲಿರುವ ವೀರಶೈವ ಧರ್ಮವನ್ನು ಶಕ್ತಿವಿಶಿಷ್ಟಾದ್ವೈತವೆಂದು ಹೇಳುತ್ತಾರೆ. ಇದನ್ನು ರೇಣುಕ, ದಾರುಕ, ಏಕೋ ರಾಮ, ಪಂಡಿತಾರಾಧ್ಯ, ವಿಶ್ವಾರಾಧ್ಯರೆಂಬ ಪಂಚಾಚಾರ್ಯರು ಸ್ಥಾಪಿಸಿದ ರೆಂದು ಪರಂಪರಾಗತವಾಗಿ ಬೆಳೆದಿರುವ ನಂಬಿಕೆ. ಇಂದಿಗೂ ಈ ಪಂಚಾ ಚಾರ್ಯರ ಮಠಗಳು, ಬಾಳೆಹೊನ್ನೂರು (ರಂಭಾಪುರಿ), ಉಜ್ಜೈನಿ, ಹಿಮ ವತ್‌ಕೇದಾರ, ಶ್ರೀಶೈಲ ಮತ್ತು ವಾರಣಾಸಿಗಳಲ್ಲಿ ಇವೆ. ಖಿಲವಾಗಿದ್ದ ಈ ವೀರಶೈವ ಧರ್ಮವನ್ನು ಮತ್ತೆ ಪ್ರಚಾರಕ್ಕೆ ತಂದವರು ಭಕ್ತಿಭಂಡಾರಿ ಬಸವಣ್ಣ ನವರು ಎಂದು ಹೇಳುತ್ತಾರೆ. ಈ ಧರ್ಮದ ಪ್ರತಿಪಾದಕರು ಪಂಡಿತತ್ರಯ

ರೆನಿಸಿದ ಮಂಚಣ್ಣ ಪಂಡಿತ, ಶ್ರೀಪತಿ ಪಂಡಿತ ಮತ್ತು ಮಲ್ಲಿಕಾರ್ಜುನ ಪಂಡಿತರು.

ಈ ವೀರಶೈವ ಧರ್ಮಕ್ಕೆ 21 ಶಿವಾಗಮಗಳು ಪ್ರಮಾಣವೆಂದು ಭಾವಿಸುತ್ತಾರೆ.

ಹನ್ನೆರಡನೆಯ ಶತಮಾನದಲ್ಲಿ ಬಸವೇಶ್ವರ, ಅಲ್ಲಮಪ್ರಭು, ಅಕ್ಕಮಹಾದೇವಿ ಮುಂತಾದವರು ಈ ಧರ್ಮವನ್ನು ಬೆಳೆಸಿದರು.

ಈ ಶಕ್ತಿವಿಶಿಷ್ಟಾದ್ವೈತದಲ್ಲಿ ಲಿಂಗಧಾರಣೆ, ಅಷ್ಟಾವರಣ ಮತ್ತು ಷಟ್ಸ್ಥಲಗಳನ್ನು ಪ್ರಧಾನವಾಗಿ ಹೇಳಿದ್ದಾರೆ.

ವೀರಶೈವ ಸಿದ್ಧಾಂತದಲ್ಲಿ ಷಟ್ಸ್ಥಲವನ್ನು ಬ್ರಹ್ಮನೆಂದೂ ಶಿವನ ಕೊನೆಯ ವರ್ಗವೆಂದೂ ತಿಳಿಯುತ್ತಾರೆ. ಶಿವನ ಪರಮಾರ್ಥರೂಪವನ್ನು ಬ್ರಹ್ಮನೆನ್ನುತ್ತಾರೆ. ಎಲ್ಲಾ ಕ್ರಿಯಾಶಕ್ತಿಗಳೂ, ಎಲ್ಲಾ ಜೀವಿಗಳೂ ಹಿಂದಿರುಗುವ ಮೂಲಸ್ಥಾನ ಅದೇ. ಬ್ರಹ್ಮವನ್ನು ಲಿಂಗಸ್ಥಲ ಅಂಗಸ್ಥಲವೆಂದು ಕರೆಯುತ್ತಾರೆ.

ಲಿಂಗಸ್ಥಲವು ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗವೆಂದು ಮೂರು ತೆರನಾಗಿದೆ. ಸಾಧಕರು ತಮ್ಮ ದೃಷ್ಟಿ, ಯೋಗ್ಯತೆ, ತಿಳಿವಳಿಕೆಗನುಸಾರವಾಗಿ ಭಾವಿಸಿ ಧ್ಯಾನಿಸಲು ಈ ಸ್ಥಲಗಳು.

ಅಂಗಸ್ಥಲವು ಯೋಗಾಂಗ, ಭೋಗಾಂಗ ಮತ್ತು ತ್ಯಾಗಾಂಗಗಳೆಂದು ಮೂರು ವಿಧ. ಯೋಗಾಂಗವು ಪ್ರಜ್ಞೆಯ ಒಂದು ಸ್ಥಿತಿ. ಸಾಧಕನು ಶಿವನೊಡನೆ ಐಕ್ಯನಾಗಿ ಅವನ ಆನಂದವನ್ನು ಪಡೆಯುತ್ತಾನೆ. ಭೋಗಾಂಗದಲ್ಲಿ ತನ್ನದೆಲ್ಲವನ್ನೂ ಶಿವನ ಪ್ರಸಾದವಾಗಿ ಭೋಗಿಸುತ್ತಾನೆ. ತ್ಯಾಗಾಂಗದಲ್ಲಿ ಮಾಯೆಯನ್ನು ಅಂದರೆ ಜನನ ಮರಣಗಳ ಮಿಥ್ಯಾಕಲ್ಪನೆಯನ್ನು ತೊರೆಯುತ್ತಾನೆ.

ಶಕ್ತಿ (ಕ್ರಿಯಾಶಕ್ತಿ)ಯು ಶಿವನೊಂದಿಗೆ ಪ್ರತ್ಯೇಕಿಸಲಾಗದಂತೆ ಒಂದಾಗೂಡಿದೆಯೆಂಬುದು ವೀರಶೈವ ಧರ್ಮದಲ್ಲಿನ ಪ್ರಧಾನ ತತ್ತ್ವ. ಶಕ್ತಿಯ ದ್ವಿಮುಖ ಕ್ರಿಯೆಗಳಾದ ಪ್ರವೃತ್ತಿ, ನಿವೃತ್ತಿಗಳಿಂದ ಮಾಯೆ, ಭಕ್ತಿ ಎನಿಸುತ್ತದೆ. ಲಿಂಗದಲ್ಲಿನ ಶಿವಶಕ್ತಿಯು ಅಂಗದಲ್ಲಿ (ಜೀವನದಲ್ಲಿ) ಭಕ್ತಿರೂಪವಾಗಿ ಕಾಣಿಸುತ್ತದೆ. ಜೀವಾತ್ಮ ಪರಮಾತ್ಮರ ಐಕ್ಯವನ್ನು—ಅಂಗ ಲಿಂಗ ಐಕ್ಯ—ಭಕ್ತಿ ಮಾರ್ಗದಿಂದ ಸಾಧಿಸಿಕೊಳ್ಳಬಹುದು—ಅವು ಶ್ರದ್ಧೆ, ನೈಷ್ಠಿಕ, ಅವಧಾನ,

ಅನುಭಾವ, ಆನಂದ ಮತ್ತು ಐಕ್ಯಗಳ ಮೆಟ್ಟಿಲುಗಳನ್ನು ಏರಿದ ಸಾಧಕನಿಗೆ ದೊರಕುವುದು.

ಅಷ್ಟಾವರಣವೆಂದರೆ ಆತ್ಮಜ್ಞಾನ ಪ್ರಾಪ್ತಿಗೂ ಪರಮಾತ್ಮನಲ್ಲಿ ತಾದಾತ್ಮ್ಯ ಹೊಂದುವುದಕ್ಕೂ ಇರುವ ಎಂಟು ಬಗೆಯ ಸಾಧನಗಳು—ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಪಾದೋದಕ, ಪ್ರಸಾದ, ಹೀಗೆ ಸಾಧಕನು ಐಕ್ಯಸ್ಥಲ ಮುಟ್ಟುತ್ತಾನೆ ಎಂಬುದೇ ಅವರ ಸಿದ್ಧಾಂತ.

## ದ್ವೈತಮತ – ಕಿರುಪರಿಚಯ

### ಶ್ರೀ ಮಧ್ವಾಚಾರ್ಯರು—

ಶ್ರೀ ಮಧ್ವಾಚಾರ್ಯರು ಕ್ರಿ.ಶ. 1238 ರಲ್ಲಿ ಉಡುಪಿಯ ಬಳಿ ಇರುವ ಪಾಜಕ ಎಂಬ ಗ್ರಾಮದಲ್ಲಿ ಹುಟ್ಟಿದರು.1 ಅವರ ತಂದೆ ಮಧ್ಯಗೇಹಭಟ್ಟರು ; ತಾಯಿ ವೇದವತಿ. ಭಟ್ಟರು ಪುರಾಣ ಪ್ರವಚನ ಮಾಡುತ್ತಿದ್ದರು. ಇವರು ನಡುಮನೆಯೆಂಬ ಮನೆತನಕ್ಕೆ ಸೇರಿದ್ದುದರಿಂದ ತುಳು ಭಾಷೆಯಲ್ಲಿ ನಡ್ಡಂತಿಲ್ಲಾಯರೆಂದು ಕರೆಯುತ್ತಿದ್ದರು.

---

1) ಶ್ರೀ ಮಧ್ವಾಚಾರ್ಯರ ಕಾಲದ ಬಗೆಗೆ ವಿದ್ವಾಂಸರಲ್ಲಿ ಒಮ್ಮತವಿಲ್ಲ. ಇವರ ಕಾಲವನ್ನು ಪ್ರಾಚೀನರು ಕ್ರಿ. ಶ. 1199—1278 ಎಂದು ಹೇಳಿದರೆ ಅರ್ವಾಚೀನರು ಕ್ರಿ.ಶ. 1238—1318 ಎಂದು ಹೇಳುತ್ತಾರೆ. ಪ್ರಾಚೀನ ವಿದ್ವಾಂಸರ ವಾದವು ಶ್ರೀ ಮಧ್ವಾಚಾರ್ಯರು ಬರೆದಿರುವ 'ಮಹಾಭಾರತ ತಾತ್ಪರ್ಯ ನಿರ್ಣಯ' ಗ್ರಂಥದಲ್ಲಿ ಆಚಾರ್ಯರು ಕೊಟ್ಟಿರುವ ಕಾಲದ ಮೇಲೆ ನಿಂತಿದೆ. "ಚತುಃ ಸಹಸ್ರೇ ತ್ರಿಶತೋತ್ತರೇಗತೇ ಸಂವತ್ಸರಾಣಾಂ ತು ಕಲೌ ಪೃಥಿವ್ಯಾಂ। ಜಾತಃ ಪುನರ್ವಿಪ್ರತನುಃ ಸ ಭೀಮೋ ದೈತ್ಯೈರ್ನಿಗೂಢಂ ಹರಿತತ್ತ್ವಮಾಹ"—ಎಂದರೆ ಕಲಿಯುಗ ಆರಂಭವಾದ (ಶಾ.ಶ 3100) ಮೇಲೆ 4300 ವರ್ಷಗಳು ಕಳೆದ ಮೇಲೆ ಭೀಮಸೇನನ ಮುಂದಿನ ಅವತಾರವಾಗಿ ತಾವು ಜನಿಸಿದುದಾಗಿ ಅವರೇ ತಿಳಿಸಿದ್ದಾರೆ. ಇದು ಕ್ರಿ.ಶ. 1199 ರ ವೇಳೆಗೆ ಹೊಂದುತ್ತದೆ. (4300—3100=1200)

(ಮುಂದಿನ ಪುಟಕ್ಕೆ)

ತಂದೆ ತಾಯಿಗಳು ಮಗನಿಗೆ ವಾಸುದೇವನೆಂಬ ಹೆಸರನ್ನು ಇಟ್ಟರು. ಸನ್ಯಾಸ ಸ್ವೀಕರಿಸಿದಮೇಲೆ ಪೂರ್ಣಪ್ರಜ್ಞರೆಂಬ ಆಶ್ರಮ ನಾಮವನ್ನು ಪಡೆದರು. ಇವರ ಅಸಾಧಾರಣ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಕಂಡು ಅವರನ್ನು ಸರ್ವಜ್ಞಾಚಾರ್ಯರೆಂದೂ, ಆನಂದ ತೀರ್ಥರೆಂದೂ, ಸುಖತೀರ್ಥರೆಂದೂ ಗೌರವದಿಂದ ಕರೆದರು. ಸನಾತನವಾದ ದ್ವೈತ ಮತವನ್ನು ಇವರು ಪ್ರಚಾರಕ್ಕೆ ತಂದು ಶ್ರೀ ಮಧ್ವಾಚಾರ್ಯರೆಂಬ ಹೆಸರಿನಿಂದ ಪ್ರಸಿದ್ಧರಾದರು.

ಶ್ರೀ ಮಧ್ವಾಚಾರ್ಯರು ಜೀವೋತ್ತಮರಾದ ವಾಯುದೇವರ ಅವತಾರ ವೆಂಬ ನಂಬಿಕೆ ಇದೆ.2 ತ್ರೇತಾಯುಗದಲ್ಲಿ ಶ್ರೀ ರಾಮಸೇವಕ ಹನುಮಂತರಾಗಿ, ದ್ವಾಪರ ಯುಗದಲ್ಲಿ ಶ್ರೀಕೃಷ್ಣನ ಶಿಷ್ಯ ಭೀಮಸೇನರಾಗಿ ಲೋಕೋಪಕಾರ ಮಾಡಿದ ಶ್ರೀ ವಾಯುದೇವರೇ ಕಲಿಯುಗದಲ್ಲಿ ಶ್ರೀ ಮಧ್ವಾಚಾರ್ಯರಾಗಿ ಅವತರಿಸಿ ವೇದವ್ಯಾಸದೇವರಿಗೆ ಸಮ್ಮತವಾದ ದ್ವೈತಮತವನ್ನು ತಮ್ಮ ಪ್ರಸ್ಥಾನತ್ರಯ ಭಾಷ್ಯಗಳಿಂದ ಪ್ರತಿಷ್ಠಾಪಿಸಿದರು. ತಮ್ಮ ಹಿಂದೆ ಇದ್ದ ಇಪ್ಪತ್ತೊಂದು ಕುಭಾಷ್ಯಗಳನ್ನು ನಿರಾಕರಿಸಿ ಶ್ರೀ ಹರಿಯ ಸರ್ವೋತ್ತಮತ್ವವನ್ನು ಎತ್ತಿ ಹಿಡಿದ ಮಹಾನುಭಾವರು.3 ವಾಯು ಸ್ತುತಿಯನ್ನು ಬರೆದ ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರು ಹೇಳಿರುವ ಮಾತೂ, ಬಳಿತ್ಥಾ ಸೂಕ್ತವೂ, ಹರಿವಂಶವೂ, ಕೂರ್ಮ ಸ್ಕಾಂದ, ವಾಯು ಪುರಾಣಗಳ ವಾಕ್ಯಗಳೂ ಇದಕ್ಕೆ ಪ್ರಮಾಣಗಳಾಗಿವೆ.

---

ಶ್ರೀ ಮಧ್ವಾಚಾರ್ಯರ ಜೀವಿತಕಾಲದ ಘಟನೆಗಳು, ಐತಿಹಾಸಿಕ ಸಂಗತಿಗಳನ್ನು ಹೊಂದಿಸುವುದಕ್ಕೆ ಆಚಾರ್ಯರ ಜನ್ಮವು ಕ್ರಿ. ಶ, 1238 ರಲ್ಲಿ ಆಗಿರ ಬಹುದೆಂದು ಬಹುತೇಕ ವಿದ್ವಾಂಸರು ಒಪ್ಪಿರುತ್ತಾರೆ. ಅದನ್ನೇ ಇಲ್ಲಿ ವ್ಯಾವಹಾರಿಕವಾಗಿ ಇಟ್ಟುಕೊಳ್ಳಲಾಗಿದೆ—ಲೇ

2) ತಸ್ಯಾಂಗಂ ಪ್ರಥಮೋ ವಾಯುಃ ಪ್ರಾದುರ್ಭಾವತ್ರಯಾನ್ವಿತಃ
ಪ್ರಥಮೋ ಹನುಮನ್ನಾಮ ದ್ವಿತಿಯೋ ಭೀಮ ಏವ ಚ ।
ಪೂರ್ಣ ಪ್ರಜ್ಞಸ್ತೃತೀಯಸ್ತು ಭಗವತ್ಕಾರ್ಯಸಾಧಕಃ ॥
—ಮ॥ ಭಾ॥ ತಾ॥ ನಿ॥ ಸರ್ಗ 2 ಶ್ಲೋಕ 127

3) ಭಾರತೀವಿಜಯಶ್ಚೈವ ಸಂವಿದಾನಂದ ಏವ ಚ
ಬ್ರಹ್ಮಘೋಷಃ ಶತಾನಂದಉದ್ವರ್ತಶ್ಚೈವಪಂಚಮಃ

ಶ್ರೀ ಮಧ್ವಾಚಾರ್ಯರು ಹಂಸನಾಮಕ ಶ್ರೀ ಪರಮಾತ್ಮನ ಪರಂಪರೆಯಲ್ಲಿ ಬಂದ ಪ್ರಾಜ್ಞತೀರ್ಥರ ಶಿಷ್ಯರಾದ ಶ್ರೀ ಅಚ್ಯುತಪ್ರೇಕ್ಷರಿಂದ ಆಶ್ರಮವನು, ಸ್ವೀಕರಿಸಿ ಸರ್ವಜ್ಞಪೀಠವನ್ನೇರಿ ಕ್ರಿ.ಶ. 1317 ರಲ್ಲಿ ಅದೃಶ್ಯರಾಗಿ ವಿಶಾಲ ಬದರಿಗೆ ತೆರಳಿದರೆಂದು ಹೇಳುತ್ತಾರೆ.

ಶ್ರೀ ಮಧ್ವಾಚಾರ್ಯರು ತಮ್ಮ ಅಲೌಕಿಕ ವಿದ್ವತ್ತು, ಸಾಹಸ, ಅತ್ಯದ್ಭುತ ದೇಹಸೌಷ್ಠವ, ನಿರರ್ಗಳ ವಾಣಿಯಿಂದ ಪಾಠ ಹೇಳುವ ಕ್ರಮ, ಭಕ್ತಿ, ವೈರಾಗ್ಯಗಳಿಂದ ತಮ್ಮ ಜೀವಿತ ಕಾಲದಲ್ಲೇ ಪವಾಡಪುರುಷರಾದರು. ಅವರು 37 ಗ್ರಂಥಗಳನ್ನು ರಚಿಸಿ, ದ್ವೈತ ಮತವನ್ನು ಭದ್ರವಾದ ನೆಲೆಗಟ್ಟಿನ ಮೇಲೆ ನಿಲ್ಲಿಸಿದರು. ಅವರು ರಚಿಸಿದ ಮೂವತ್ತೇಳು ಗ್ರಂಥಗಳ ವಿವರ ಹೀಗಿದೆ :—

(1) ಗೀತಾಭಾಷ್ಯ (2) ಗೀತಾತಾತ್ಪರ್ಯ (3) ಬ್ರಹ್ಮಸೂತ್ರಭಾಷ್ಯ (4) ಅನುವ್ಯಾಖ್ಯಾನ (5) ನ್ಯಾಯ ವಿವರಣೆ (6) ಅಣುಭಾಷ್ಯ (7) ಋಗ್ಭಾಷ್ಯ (8) ಪ್ರಮಾಣ ಲಕ್ಷಣ (9) ಕಥಾಲಕ್ಷಣ (10) ಮಾಯಾವಾದ ಖಂಡನ (11) ಉಪಾಧಿಖಂಡನ (12) ಪ್ರಪಂಚ ಮಿಥ್ಯಾತ್ವಾನುಮಾನ ಖಂಡನ (13) ತತ್ತ್ವ ಸಂಖ್ಯಾನ (14) ತತ್ತ್ವ ವಿವೇಕ (15) ತತ್ತ್ವೋ-ದ್ಯೋತ (16) ಕರ್ಮ ನಿರ್ಣಯ (17) ವಿಷ್ಣುತತ್ತ್ವ ನಿರ್ಣಯ (18) ರಿಂದ (27) ದಶೋಪನಿಷದ್ಭಾಷ್ಯಗಳು (28) ನಖಸ್ತುತಿ (29) ದ್ವಾದಶ ಸ್ತೋತ್ರ (30) ಯಮಕ ಭಾರತ (31) ಕೃಷ್ಣಾಮೃತ ಮಹಾರ್ಣವ (32) ತಂತ್ರಸಾರ ಸಂಗ್ರಹ (33) ಸದಾಚಾರ ಸ್ಮೃತಿ (34) ಭಾಗವತ

---

ವಿಜಯೋ ರುದ್ರಭಟ್ಟಶ್ಚ ನಾಮಖ್ಯಸ್ತಥಾಷ್ಟಮಃ
ಸ ಯಾದವಪ್ರಕಾಶಶ್ಚ ನವಮಸ್ತತ್ರಕೀರ್ತಿತಃ
ರಾಮಾನುಜಸ್ತಥಾ ಭರ್ತೃಪ್ರಪಂಚೋ ದ್ರವಿಡಸ್ತಥಾ
ಬ್ರಹ್ಮದತ್ತೋ ಭಾಸ್ಕರಶ್ಚ ಪಿಶಾಚೋ ವೃತ್ತಿಕಾರಕಃ
ತಥಾ ವಿಜಯಭಟ್ಟಶ್ಚ ವಿಷ್ಣುಕ್ರಾಂತಸ್ತಥೈವ ಚ
ವಾದೀಂದ್ರಶ್ಚ ತಥಾ ಪಶ್ಚಾತ್ತತೋ ಮಾಧವದಾಸಕಃ
ತತಶ್ಚ ಶಂಕರಶ್ಚ ಸ್ಯಾದೇಕವಿಂಶತಿವಾದಭಿಃ
ಪ್ರಣೀತಾನಿ ನಿರಾಚಕ್ರೇ ಕುಭಾಷ್ಯಾಣಿ ಮಹಾಮತಿಃ ||
—ಮ॥ ವಿ॥ ಸರ್ಗ—9—ಶ್ಲೋಕ—12

ಏಕವಿಂಶತಿಕುಭಾಷ್ಯದೂಷಕಂ ಬ್ರಹ್ಮಸೂತ್ರಗಣಭಾಷ್ಯಮುದ್ಭುತವನ್ ।

ತಾತ್ಪರ್ಯ ನಿರ್ಣಯ (35) ಮಹಾಭಾರತ ತಾತ್ಪರ್ಯ ನಿರ್ಣಯ (36) ಜಯಂತೀ ನಿರ್ಣಯ (37) ಯತಿಪ್ರಣವ ಕಲ್ಪ.1

ಶ್ರೀ ವೇದವ್ಯಾಸರು ವೇದಾರ್ಥ ನಿರ್ಣಾಯಕಗಳಾದ ಬ್ರಹ್ಮಸೂತ್ರಗಳೆಂಬ ಬೀಜವನ್ನು ಬಿತ್ತಿದರು. ಶ್ರೀ ಮಧ್ವಾಚಾರ್ಯರಿಂದ ಅದು ನೀರುಂಡು ಮೊಳಕೆಯಾಯಿತು. ಟೀಕಾಚಾರ್ಯರೆಂದು ಪ್ರಸಿದ್ಧರಾದ ಜಯತೀರ್ಥರಿಂದ ಕೊಂಬೆಗಳು ಹೊರಟವು. ಶ್ರೀ ವ್ಯಾಸರಾಜರ ವ್ಯಾಸತ್ರಯ ಮುಂತಾದ ಗ್ರಂಥಗಳಿಂದ ಎಲೆಗಳು ಚಿಗುರಿದವು. ಶ್ರೀ ವಿಜಯೀಂದ್ರರ ಗ್ರಂಥಗಳಿಂದ ಹೂವು ಬಿಟ್ಟಿತು. ಶ್ರೀ ರಾಘವೇಂದ್ರಸ್ವಾಮಿಗಳ ಗ್ರಂಥಗಳಿಂದ ಮಧ್ವ ಸಿದ್ಧಾಂತವೆಂಬ ವೃಕ್ಷವು ಫಲಿಸಿತು—ಎಂದು ಶ್ರೀ ವಾದೀಂದ್ರತೀರ್ಥರು ಬರೆದಿರುವ ಗುರು ಗುಣ ಸ್ತವವು ಈ ಮಹತ್ಕಾರ್ಯದ ವಿವಿಧ ಘಟ್ಟಗಳನ್ನು ಕುರಿತು ಸುಂದರವಾಗಿ ವರ್ಣಿಸುತ್ತದೆ.2

---

1) ಇದನ್ನು ಯಾದವಾಚಾರ್ಯರು ಹೀಗೆ ಕ್ರೋಢೀಕರಿಸಿರುತ್ತಾರೆ.

ಭಾಷ್ಯಾಣಾಂ ದಶಕಂ ಚ ಪಂಚಕಯುತಂ ತಿಸ್ರಶ್ಚ ನಿರ್ಣೀತಯಃ
ವಿಷ್ಣೋಃಸ್ತೋತ್ರಯುಗಂ ದಶಪ್ರಕರಣಕಂ ಕಲ್ಪದ್ವಯಂ ಚ ಶ್ರುತಿಃ ।
ಶ್ರೀಕೃಷ್ಣಾಮೃತ ತಂತ್ರಸಾರಯಮಕಂ ನ್ಯಾಯಾವಲೀದೀಪನಮ್
ಯೇನಾಕಾರಿ ಸದೈವ ಮಧ್ವಮುನಿರಾಟ್ ದದ್ಯಾತ್ಸುವಿದ್ಯಾಂ ಮಮ ॥

ಶ್ರೀ ಮಧ್ವಾಚಾರ್ಯರು ರಚಿಸಿರುವ ಸರ್ವ ಮೂಲ ಗ್ರಂಥಗಳ ಸಂಖ್ಯೆ ಮೂವತ್ತೇಳು ಎಂದು ಹಿಂದಿನಿಂದಲೂ ಬಂದಿರುವ ಒಂದು ನಂಬಿಕೆ, ಈ ಸಂಖ್ಯೆಯನ್ನೇ ಶ್ರೀ ವ್ಯಾಸರಾಜರೂ, ಶ್ರೀ ಯಾದವಾರ್ಯರೂ ಎತ್ತಿ ಹಿಡಿದಿದ್ದಾರೆ, ಗ್ರಂಥಮಾಲಿಕಾ ಸ್ತೋತ್ರಕಾರರೂ ಸರ್ವ ಮೂಲ ಗ್ರಂಥಗಳ ಸಂಖ್ಯೆ ಮೂವತ್ತೇಳೆಂದು ಹೇಳಿದ್ದಾರೆ. ಆದರೆ ಇತ್ತೀಚೆಗೆ 'ತಿಥಿನಿರ್ಣಯ' ಮತ್ತು 'ನ್ಯಾಸಪದ್ಧತಿ' ಎಂಬ ಎರಡು ಸಣ್ಣ ಕೃತಿಗಳು ಬೆಳಕಿಗೆ ಬಂದಿದ್ದು ಇವುಗಳೂ ಶ್ರೀ ಮಧ್ವಾಚಾರ್ಯರು ಬರೆದಿರುವ ಗ್ರಂಥಗಳೆಂದು ಕೆಲವು ಪಂಡಿತರು ಅಭಿಪ್ರಾಯ ಪಟ್ಟಿದ್ದಾರೆ. ಇವುಗಳನ್ನು ಗಣನೆಗೆ ತೆಗೆದುಕೊಂಡರೆ ಸರ್ವ ಮೂಲ ಗ್ರಂಥಗಳ ಸಂಖ್ಯೆ ಮೂವತ್ತೊಂಬತ್ತಾಗುತ್ತದೆ. —ಲೇಖಕ

2) ವ್ಯಾಸೇನವ್ಯುಪ್ತಬೀಜಃ ಶ್ರುತಿಭುವಿಭಗವತ್ಪಾದಲಬ್ಧಾಂಕುರಶ್ರೀಃ
ಪ್ರತ್ಯೈರೀಷತ್ಪ್ರಭಿನ್ನೋಽಜನಿ ಜಯಮುನಿನಾ ಸಮ್ಯಗುದ್ಭಿನ್ನಶಾಖಾಃ ।

ಶ್ರೀ ಮಧ್ವಾಚಾರ್ಯರು ಎರಡು ಬಾರಿ ಭಾರತದೇಶವನ್ನೆಲ್ಲಾ ಸಂಚಾರ ಮಾಡಿ, ವಿಷ್ಣು ಸರ್ವೋತ್ತಮತ್ವವನ್ನೂ, ವಿಷ್ಣುವನ್ನು ಹೊಂದಲು ಇರುವ ಏಕೈಕ ಮಾರ್ಗವಾದ ಭಕ್ತಿಪಂಥವನ್ನೂ ಪ್ರಚಾರಕ್ಕೆ ತಂದರು. ಉಡುಪಿಯಲ್ಲಿ ಶ್ರೀ ಕೃಷ್ಣನ ದಿವ್ಯವಿಗ್ರಹವನ್ನು ಪ್ರತಿಷ್ಠಿಸಿ ಆ ಕ್ಷೇತ್ರವನ್ನು ಭಕ್ತಿ ಜ್ಞಾನ ವೈರಾಗ್ಯಗಳ ಸಂಗಮಕ್ಷೇತ್ರವನ್ನಾಗಿ ಮಾಡಿದರು. ಶ್ರೀಕೃಷ್ಣನ ಪೂಜೆಗಾಗಿ ಅಷ್ಟಮಠದ ಯತಿಗಳನ್ನು ನೇಮಿಸಿ, ಪರ್ಯಾಯ ಕ್ರಮದ ಪೂಜಾವಿಧಾನವನ್ನು ಏರ್ಪಡಿಸಿದರು. ಶೋಭನಭಟ್ಟರು, ಶಾಮಶಾಸ್ತ್ರಿಗಳು, ವಿಷ್ಣುಶಾಸ್ತ್ರಿಗಳು ಮತ್ತು ಗೋವಿಂದ ಶಾಸ್ತ್ರಿಗಳು ಇವರುಗಳನ್ನು ಅನುಗ್ರಹಿಸಿ ಅವರಿಗೆ ಕ್ರಮವಾಗಿ ಪದ್ಮನಾಭ ತೀರ್ಥರು, ನರಹರಿತೀರ್ಥರು, ಮಾಧವತೀರ್ಥರು, ಅಕ್ಷೋಭ್ಯತೀರ್ಥರೆಂಬ ಯತಿನಾಮಗಳನ್ನಿತ್ತು ಪರಮಹಂಸಾಶ್ರಮವನ್ನು ಕೊಟ್ಟು ದ್ವೈತ ಮತದ ಪ್ರಸಾರ ಕಾರ್ಯಕ್ಕೆ ನಿಯೋಜಿಸಿದರು.

ಈ ಸಾಕ್ಷಾತ್ ಪರಂಪರೆಯಲ್ಲಿ ಬಂದವರೂ, ಪೂರ್ವಾದಿಮಠದ ಶ್ರೀ ಬ್ರಹ್ಮಣ್ಯತೀರ್ಥಕರಕಮಲಸಂಜಾತರೂ, ದ್ವೈತಸಿದ್ಧಾಂತದ ಮುನಿತ್ರಯರಲ್ಲಿ ಒಬ್ಬರೂ ಆದ ಶ್ರೀ ವ್ಯಾಸರಾಜರು ದ್ವೈತ ಮತದ ಪ್ರಮೇಯಗಳನ್ನು ಒಂದೆಡೆ ಸುಂದರವಾಗಿ ಕ್ರೋಢೀಕರಿಸಿ ನಿರೂಪಿಸಿದ್ದಾರೆ. ಅದು ಹೀಗಿದೆ :—

ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ತ್ವತೋ
ಭೇದೋ ಜೀವಗಣಾ ಹರೇರನುಚರಾ ನೀಚೋಚ್ಚಭಾವಂಗತಾಃ ।
ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥

ಮಧ್ವಮತದ ಮುಖ್ಯತತ್ತ್ವವೆಂದರೆ ಹರಿಸರ್ವೋತ್ತಮತ್ವ. ಸಕಲ ವೇದ ಪುರಾಣ ಸಚ್ಛಾಸ್ತ್ರಗಳೂ ಶ್ರೀ ವಿಷ್ಣುವಿನ ಮಹಾಮಹಿಮೆಯನ್ನು ಬಗೆ ಬಗೆಯಾಗಿ ಬಣ್ಣಿಸಲಿಕ್ಕಾಗಿಯೆ ಹುಟ್ಟಿವೆ, ಹೊರಟಿವೆ.

---

ಮೌನೀಶವ್ಯಾಸರಾಜಾದುದಿತಕಿಸಲಯಃ ಪುಷ್ಪಿತೋsಯಂ-ಜಯೀಂದ್ರಾ
ದದ್ಯ ಶ್ರೀರಾಘವೇಂದ್ರಾದ್ವಿಲಸತಿ ಫಲಿತೋ ಮಧ್ವಸಿದ್ಧಾಂತ ಶಾಖೀ ॥

ಶ್ರೀ ವಾದೀಂದ್ರರ ಗುರುಗುಣಸ್ತವ ಶ್ಲೋಕ-7

ಆದುದರಿಂದಲೇ ಶ್ರೀ ಚಂದ್ರಿಕಾಚಾರ್ಯರೂ, ವಂಗದೇಶದಲ್ಲಿ ಅವರ ಪ್ರಶಿಷ್ಯರಾದ ಶ್ರೀ ಕೃಷ್ಣಚೈತನ್ಯ, ಬಲದೇವ, ಪದ್ಮಭೂಷಣ ಮೊದಲಾದವರೂ ವೈಷ್ಣವ ಮತದ ಮುಖ್ಯತತ್ತ್ವಗಳನ್ನು ಹೇಳುವಾಗ ಮೊದಲು 'ಶ್ರೀಮನ್ಮಧ್ವ-ಮತೇ ಹರಿಃ ಪರತರಃ' ಎಂದು ಶ್ರೀಹರಿಯ ಸರ್ವೋತ್ತಮತ್ವವನ್ನು ಹೇಳಿದ್ದಾರೆ.

ಮೇಲೆ ಉದಾಹರಿಸಿದ ಪದ್ಯವು ವೇದಶಾಸ್ತ್ರಸಾಗರವನ್ನು ಕಡೆದು ಪಡೆದ ತತ್ತ್ವರತ್ನಗಳ ಒಂದು ಸುಂದರ ಮಣಿಮಾಲೆಯಂತಿದೆ. ಇದರಲ್ಲಿ ಮಧ್ವ ಮತದ ನವರತ್ನಗಳಾದ ನವತತ್ತ್ವಗಳನ್ನು ಜಾಣತನದಿಂದ ಪೋಣಿಸಿದ್ದಾರೆ. ಇಲ್ಲಿ ಹೇಳಿದ ಪ್ರತಿಯೊಂದು ತತ್ತ್ವಕ್ಕೂ ವೇದದ ಆಧಾರವಿದೆ. ಸ್ಮೃತಿಯ ಬೆಂಬಲವಿದೆ. ಸೂತ್ರದ ಸಮ್ಮತಿ ಇದೆ. ಪುರಾಣದ ಪುಷ್ಟಿ ಇದೆ. ಗೀತೆಯ ಸಂವಾದವಿದೆ. ಇಷ್ಟೆಲ್ಲ ವಕ್ತೃ, ಶ್ರೋತೃ, ಪ್ರಸಕ್ತಿ ಅನುಕೂಲ್ಯಗಳು ಬೇರೆ ಯಾವ ಮತದ ಯಾವ ತತ್ತ್ವಕ್ಕೂ ದೊರಕಿಲ್ಲ. ಮುಂದೆಯೂ ದೊರಕುವುದಿಲ್ಲ. ಇದೇ ಮಧ್ವ ಮತದ ವೈಶಿಷ್ಟ್ಯ.

ಪಾವನ ತಮವಾದ ಈ ಮತದ ಪ್ರಮಾಣಪ್ರಮಿತತತ್ವವನ್ನು ಇಲ್ಲಿ ಸೂಕ್ಷ್ಮವಾಗಿ ವಿಚಾರ ಮಾಡೋಣ.[1]

## ೧. ಹರಿಃ ಪರತರಃ (ಶ್ರೀ ಹರಿಯೇ ಸರ್ವೋತ್ತಮ)

ಚರಾಚರಾತ್ಮಕವಾದ ಈ ವಿಶ್ವಪ್ರಪಂಚವನ್ನೆಲ್ಲಾ ವ್ಯವಸ್ಥಿತವಾಗಿ ನಿಯಮಿಸುವ, ರೂಪಿಸುವ, ರಕ್ಷಿಸುವ ಪರಶಕ್ತಿ ಒಂದನ್ನು ಎಲ್ಲ ಆಸ್ತಿಕರೂ ಒಪ್ಪುತ್ತಾರೆ. ಅದಕ್ಕೆ ವೇದದಲ್ಲಿ 'ಬ್ರಹ್ಮ' ಎಂದು ಕರೆದಿದ್ದಾರೆ.

---

1) ಶ್ರೀ ಮಧ್ವಾಚಾರ್ಯರು ಪ್ರಚಾರ ಮಾಡಿದ ದ್ವೈತಮತದ ಮುಖ್ಯ ತತ್ತ್ವಗಳೂ, ಅವುಗಳನ್ನು ದೇಶದ ಎಲ್ಲೆಡೆಗೂ ಹರಡಿದ ಅವರ ಸಾಕ್ಷಾತ್ ಶಿಷ್ಯರಾದ ಶ್ರೀ ಪದ್ಮನಾಭತೀರ್ಥರು, ಶ್ರೀ ನರಹರಿತೀರ್ಥರು, ಶ್ರೀ ಮಾಧವತೀರ್ಥರು, ಶ್ರೀ ಅಕ್ಷೋಭ್ಯತೀರ್ಥರು — ಇವರ ಜೀವಿತದ ಬಗೆಗೆ ಕೆಲವು ವಿವರಗಳೂ ಸುಪ್ರಸಿದ್ಧ ವಿದ್ವಾಂಸರಾದ ಶ್ರೀ ಪಂಢರಿನಾಥಾಚಾರ್ಯ ಗಲಗಲಿ ಅವರು ಸಂಗ್ರಹಿಸಿರುವ ಮಾಧ್ವವಾಙ್ಮಯತಪಸ್ವಿಗಳು ಎಂಬ ಗ್ರಂಥದಿಂದ ಸಂಗ್ರಹಿಸಿಕೊಳ್ಳಲಾಗಿವೆ. ಅವುಗಳನ್ನು ಉಪಯೋಗಿಸಿಕೊಳ್ಳಲು ಔದಾರ್ಯದಿಂದ ಅನುಮತಿ ನೀಡಿರುವ ಸನ್ಮಾನ್ಯ ವಿದ್ವಾಂಸರಿಗೆ ಲೇಖಕನು ಚಿರಋಣಿಯಾಗಿದ್ದಾನೆ.—ಲೇಖಕ

ಜಗತ್ತಿನ ಹುಟ್ಟು ಅಳಿವು ಉಳಿವುಗಳಿಗೆ ಮೂಲ ಕಾರಣವೇ ಬ್ರಹ್ಮ ಎಂದು ವಿಚಾರಿಸಿ ತಿಳಿದುಕೊ ಎಂದು ಉಪನಿಷತ್ತುಗಳಲ್ಲಿ ಹೇಳಿದೆ.1

ಇದೇ ಅಭಿಪ್ರಾಯವನ್ನು ಭಗವಾನ್ ಬಾದರಾಯಣರು ಬ್ರಹ್ಮಸೂತ್ರಗಳಲ್ಲಿ 'ಓಂ ಜನ್ಮಾದ್ಯಸ್ಯ ಯತಃ ಓಂ' ಎಂಬ ಲಕ್ಷಣಸೂತ್ರದಿಂದ ನಿರೂಪಿಸಿದ್ದಾರೆ,

ಈ 'ಜನ್ಮಾದ್ಯಸ್ಯಯತಃ' ಎಂಬ ಸೂತ್ರಕ್ಕೆ ಶ್ರೀ ಮಧ್ವಾಚಾರ್ಯರು ಸ್ಕಾಂದ ಪುರಾಣದ ವಚನಾನುಸಾರವಾಗಿ ಬ್ರಹ್ಮಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ. ಜ್ಞಾನ, ಅಜ್ಞಾನ, ಆವರಣ, ಬಂಧ, ಮೋಕ್ಷಗಳೆಂಬ ಅಷ್ಟಕರ್ತೃತ್ವ ಶಕ್ತ ಎಂದು ಅರ್ಥ ಮಾಡಿದ್ದಾರೆ.

ಈ ವಿಷಯದಲ್ಲಿ ಸಾಮಾನ್ಯವಾಗಿ ಎಲ್ಲ ಆಸ್ತಿಕದರ್ಶನಕಾರರಲ್ಲಿ ಐಕಮತ್ಯವಿದೆ. ಜಗತ್ಕಾರಣವಾದ ವಸ್ತು ಬ್ರಹ್ಮ ಎಂಬಲ್ಲಿ ಯಾರಿಗೂ ವಿವಾದವಿಲ್ಲ.

ಆದರೆ ಆ ಬ್ರಹ್ಮ ಯಾರು ? ಹರಿಯೋ, ಹರನೋ, ಶಕ್ತಿಯೋ, ಗಣಪತಿಯೋ, ಸೂರ್ಯನೋ, ಸ್ಕಂದನೋ ಯಾರು ?

ಇಲ್ಲಿಯೇ ಮತಭೇದ ಹುಟ್ಟಿದ್ದು.

ಪ್ರಥಮ ಸೂತ್ರದಲ್ಲಿ 'ಬ್ರಹ್ಮ' ಎಂಬ ಶಬ್ದ ಮಾತ್ರ ಇದೆ. ವಿಷ್ಣು ಎಂದಿಲ್ಲ. ಶಿವ ಎಂದಿಲ್ಲ. ಬೇರಾವುದೂ ಇಲ್ಲ. 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಎಂಬ ಶ್ರುತಿಯಲ್ಲಿಯೂ ಅದೇ ಬ್ರಹ್ಮ ಶಬ್ದದ ಪುನರುಚ್ಚಾರ.

ಶ್ರುತಿ, ಸೂತ್ರ ಪ್ರತಿಪಾದ್ಯವಾದ ಈ ಬ್ರಹ್ಮ ಯಾವುದು ?

ಅದಕ್ಕೆ ಶ್ರೀಮಧ್ವಮುನಿಗಳ ಉತ್ತರ ಸಿದ್ಧವಿದೆ. "ಬ್ರಹ್ಮ ಶಬ್ದಃ ವಿಷ್ಣಾವೇವ". ಬ್ರಹ್ಮ ಶಬ್ದವು ವಿಷ್ಣುವಿನಲ್ಲಿ ಮಾತ್ರವಿದೆ. ಏಕೆ ? ಏನು ಪ್ರಮಾಣ ? ಇದಕ್ಕೆ ಆಚಾರ್ಯರು ಹೇಳುವ ಪ್ರಮಾಣ ಒಂದಲ್ಲ, ಹತ್ತು ಹತ್ತಲ್ಲ, ನೂರು. ನೂರಲ್ಲ, ಸಾವಿರ, ಅಸಂಖ್ಯ.

ಬ್ರಹ್ಮ ಶಬ್ದವು ಪರಾತ್ಪರನಾದ ಶ್ರೀ ವಿಷ್ಣುವಿಗೇ ಕೂಡುತ್ತದೆ.

---

1) ಯತೋ ವಾ ಇಮಾನಿ ಭೂತಾನಿ ಜಾಯಂತೇ
ಯೇನ ಜಾತಾನಿ ಜೀವಂತಿ ।
ಯತ್ಪ್ರಯಂತ್ಯಭಿಸಂವಿಶಂತೀತಿ ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತಿ ॥
—ತೈತ್ತಿರೀಯೋಪನಿಷತ್

ಯಾಕೆಂದರೆ ಬ್ರಹ್ಮ ಎಂದರೆ ಗುಣಪೂರ್ಣ. ಉಳಿದವರೆಲ್ಲರೂ ಅಪೂರ್ಣರು. ಶ್ರೀವಿಷ್ಣು ಒಬ್ಬನೇ ಗುಣಪೂರ್ಣನಾಗಿರುವುದರಿಂದ ಅವನೊಬ್ಬನಿಗೇ ಆ ಬ್ರಹ್ಮ ಶಬ್ದವು ಹೊಂದುತ್ತದೆ. ಚತುರ್ಮುಖಾದಿಗಳಲ್ಲಿ ಬ್ರಹ್ಮಶಬ್ದ ಪ್ರಯೋಗ ವಿದ್ದರೂ ಅದು ಔಪಚಾರಿಕ, ಗೌಣ. ಉಳಿದವರೆಲ್ಲರೂ ಗೌಣಬ್ರಹ್ಮರು. ಮುಖ್ಯಬ್ರಹ್ಮ ಅಥವಾ ಪರಬ್ರಹ್ಮನೆಂದರೆ ವಿಷ್ಣುವೇ ಸರಿ.1

ಬ್ರಹ್ಮ, ಪರಮಾತ್ಮ, ಭಗವಾನ್, ವಾಸುದೇವ ಮುಂತಾದ ಶಬ್ದಗಳು ಆ ಶ್ರೀಹರಿಯನ್ನೇ ಬೋಧಿಸುತ್ತವೆ ಶ್ರೀಮನ್ನಾರಾಯಣನೇ ವಿಷ್ಣು. ಅವನೇ ಪರಬ್ರಹ್ಮ ಎಂದು ವೇದಗಳು ಘೋಷಿಸುತ್ತವೆ. ಈ ಮಾತನ್ನು ಕೂಡ ಎಲ್ಲ ಮತಾಚಾರ್ಯರೂ ತಮ್ಮ ಗ್ರಂಥಗಳಲ್ಲಿ ಒಪ್ಪಿದ್ದಾರೆ. ಶಂಕರಾಚಾರ್ಯರೂ ಕೂಡ 'ಪರಬ್ರಹ್ಮಲಿಂಗಂ ಭಜೇ ಪಾಂಡುರಂಗಂ' ಎಂದು ವಿಠಲನಲ್ಲಿ ಪರ-ಬ್ರಹ್ಮದ ಲಕ್ಷಣಗಳೆಲ್ಲ ಇರುತ್ತವೆ ಎಂದು ಹೇಳಿದ್ದಾರೆ.2 ಸಕಲ ಕಲ್ಯಾಣಗುಣ ಪೂರ್ಣನಾದ ಶ್ರೀ ವಾಸುದೇವನೇ ಪರಬ್ರಹ್ಮ ಎಂದು ಹೇಳಲಾಗಿದೆ.

ಬ್ರಹ್ಮಶಬ್ದವಾಚ್ಯನಾದ ವಿಷ್ಣು ಎಂಬ ಹೆಸರಿನ ವಾಸುದೇವರೂಪಿ ಶ್ರೀ ನಾರಾಯಣನೇ ಒಂದು ಮುಖ್ಯತತ್ತ್ವ ಎಂದು ವಿಶಿಷ್ಟಾದ್ವೈತವಾದಿಗಳ ಸಿದ್ಧಾಂತವಾಗಿದೆ.3

---

1) ಬ್ರಹ್ಮಶಬ್ದಃ ಪರೇ ವಿಷ್ಣೌ ನಾನ್ಯತ್ರ ಕ್ವಚಿದಿಷ್ಯತೇ ।
ಅಸಂಪೂರ್ಣಾಃ ಪರೇ ಯಸ್ಮಾದುಪಚಾರೇಣ ವಾ ಭವೇತ್ ॥
ಬ್ರಹ್ಮೇತಿ ಪರಮಾತ್ಮೇತಿ ಭಗವಾನಿತಿ ಶಬ್ದ್ಯತೇ ।
ಭಗವಾನ್ ವಾಸುದೇವೇತಿ ಪರಮಾತ್ಮೇತಿ ವೈ ಹರಿಃ ।
ವಿಷ್ಣುರ್ನಾರಾಯಣಶ್ಚೇತಿ ಬ್ರಹ್ಮೇತಿ ಶ್ರುತಯೋ ಜಗುಃ ॥
—ಬೃ. ಬ್ರ. ಸಂ. ೨-೨-೨೯.

2) 'ವಾಸುದೇವಃ ಪರಂ ಬ್ರಹ್ಮ ಕಲ್ಯಾಣಗುಣಸಂಯುತಃ'
—ಸರ್ವದರ್ಶನ

3) ಬ್ರಹ್ಮಶಬ್ದವಾಚ್ಯೋ ವಿಷ್ಣ್ವಾಖ್ಯೋ ಪರಃ ವಾಸುದೇವಃ ನಾರಾಯಣ ಏವ ಏಕಂ ತತ್ತ್ವಮಿತಿ ವಿಶಿಷ್ಟಾದ್ವೈತವಾದಿನಾಂ ದರ್ಶನಮಿತಿ
ಸಿದ್ಧಮ್ ॥

ಶ್ರೀರಾಮಾನುಜಾಚಾರ್ಯರು ಇನ್ನೂ ಸ್ಪಷ್ಟವಚನದಿಂದ ಬ್ರಹ್ಮಶಬ್ದಾರ್ಥವು ನಾರಾಯಣನೇ ಎಂದು ತಮ್ಮ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ.1

ಬ್ರಹ್ಮ ಶಬ್ದದಿಂದ ಸ್ವಭಾವತಃ ನಿರ್ದೋಷ ಅನಂತಾನಂತಕಲ್ಯಾಣಗುಣ ಪರಿಪೂರ್ಣನೂ (ಗೀತಾದಿ ಗ್ರಂಥಗಳಲ್ಲಿ) ಪುರುಷೋತ್ತಮ ಶಬ್ದದಿಂದ ವಾಚ್ಯನೂ ಆದ ಸಾಕ್ಷಾತ್ ಶ್ರೀ ಹರಿಯೇ ಹೇಳಲ್ಪಟ್ಟಿದ್ದಾನೆ.

ವಲ್ಲಭಾಚಾರ್ಯರು, ಯಶೋದೆಯ ತೊಡೆಯ ಮೇಲೆ ಆಡಿದ ಕೂಸೇ ಪರತತ್ತ್ವ. ಅದೇ ಪರಬ್ರಹ್ಮ. ಆ ಗೋಪಾಂಗನೆಯ ಉತ್ಸಂಗದಲ್ಲಿ ಆಡಿದ ಆ ಮಗುವಿನ ಹೊರತು ಬೇರೊಬ್ಬನನ್ನು ಪರಬ್ರಹ್ಮ ಎಂದು ಭಾವಿಸಿದವರು ದೈತ್ಯರೇ ಸರಿ ಎಂದು ಸ್ಪಷ್ಟವಾಗಿ ನುಡಿದಿದ್ದಾರೆ.2

ನಿಂಬಾರ್ಕಾಚಾರ್ಯರು, ದೋಷರಹಿತನೂ ಕಲ್ಯಾಣಗುಣರಾಶಿಯೂ ಆದ ಕಮಲದಂತೆ ಕಣ್ಣಿರುವ ಕೃಷ್ಣನೇ ಪರಬ್ರಹ್ಮ ಎಂದು ಹೇಳಿದ್ದಾರೆ.3

ಇನ್ನು ಸಾಕ್ಷಾತ್ ಶ್ರೀವಿಷ್ಣುವೇ ಪರದೇವತೆ ಎನ್ನುವುದಕ್ಕೆ ಅಸಂಖ್ಯ ಪ್ರಮಾಣಗಳುಂಟು.4

---

1) "ಬ್ರಹ್ಮಶಬ್ದೇನ ಸ್ವಭಾವತೋ ನಿರಸ್ತನಿಖಿಲದೋಷೋ
ಅನವಧಿಕಾತಿಶಯಾಸಂಖ್ಯೇಯಕಲ್ಯಾಣಗುಣಗಣಃ
ಪುರುಷೋತ್ತಮೋ ಅಭಿದೀಯತೇ"

—ಶ್ರೀಭಾಷ್ಯ-ಜಿಜ್ಞಾಸಾಧಿಕರಣ

2) ಜಾನೀತ ಪರಮಂ ತತ್ತ್ವಂ ಯಶೋದೋತ್ಸಂಗಲಾಲಿತಂ ।
ತದನ್ಯಮಿತಿ ಯೇ ಪ್ರಾಪುಃ ಅಸುರಾಂಸ್ತಾನಹೋ ಬುಧಾಃ ॥

—ವಲ್ಲಭಾಚಾರ್ಯಕೃತ ಅಣುಭಾಷ್ಯ

3) ಸ್ವಭಾವತೋಽಪಾಸ್ತಸಮಸ್ತದೋಷಮಶೇಷಕಲ್ಯಾಣಗುಣೈಕರಾಶಿಂ ।
ವ್ಯೂಹಾಂಗಿನಂ ಬ್ರಹ್ಮ ಪರಂ ವರೇಣ್ಯಂ ಧ್ಯಾಯೇಮ ಕೃಷ್ಣಂ
ಕಮಲೇಕ್ಷಣಂ ಹರಿಮ್ ॥—ಎಂದು ಬ್ರಹ್ಮಸೂತ್ರದ ಮೇಲಿನ ತಮ್ಮ
ನಿಂಬಾರ್ಕಭಾಷ್ಯದ ಜನ್ಮಾಧಿಕರಣದಲ್ಲಿ ಖಚಿತವಾಗಿ ಹೇಳಿದ್ದಾರೆ.

4) ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ
ವಿಮಮೇ ರಜಾಂಸಿ

—ಋಗ್ವೇದ

ವಿಷ್ಣುವಿನ ಮಹಿಮೆಯನ್ನು ಯಾರುತಾನೆ ಹೇಳಬಲ್ಲರು? ಆ ಚತುರ್ಮುಖ ಬ್ರಹ್ಮ ಬೇಕೆಂದರೆ ಭೂಮಿಯಲ್ಲಿನ ಎಲ್ಲ ಧೂಳಿನ ಕಣಗಳನ್ನು ಎಣಿಸಬಲ್ಲ. ಆದರೆ ಅವನಿಗೂ ಶ್ರೀ ಹರಿಯ ಗುಣಗಳನ್ನು ಗಣಿಸುವುದು ಶಕ್ಯವಿಲ್ಲ.

ದೇವದೇವೋತ್ತಮನಾಧ ಭಕ್ತವತ್ಸಲ ಶ್ರೀ ವಿಷ್ಣುವಿನ ಯಜನ ಭಾಜನ ಪೂಜನಗೈದು ರುದ್ರನು ಮಹಾದೇವತ್ವದ ಮಹಿಮೆಯನ್ನು ಪಡೆದನು.1

ವಿಷ್ಣುವಿನ ಅವತಾರ ಮಹಿಮೆಯನ್ನು ಯಾವ ಕಾಲದಲ್ಲಿಯೂ ಯಾರೂ ಪಡೆಯಲಾರರು. ತಿಳಿಯಲಾರರು.2

ಭಾರತೀದೇವಿಗಿಂತ ಮುಖ್ಯಪ್ರಾಣನೂ, ಎಲ್ಲ ದೇವರಿಗಿಂತ ಮಹಾವಿಷ್ಣುವೂ ಶ್ರೇಷ್ಠನಾಗಿದ್ದಾನೆ. ಆದುದರಿಂದಲೇ ಆ ಭಗವಂತನಿಗೆ ಭೂಯಾನ್ ಎಂದು ಪ್ರಸಿದ್ಧಿ.3

ಜಗತ್ತಿನ ಉದಯ ಅಳಿವು ಉಳಿವುಗಳಿಗೆ ಮುಖ್ಯಕಾರಣ ಒಬ್ಬನೇ. ಅವನೇ ಶ್ರೀಹರಿ. ಅವನಿಗೆ ಹುಟ್ಟೂ ಇಲ್ಲ, ಸಾವೂ ಇಲ್ಲ. ಅವನು ತಾನೇ ನಿಂತುಕೊಂಡು ಬ್ರಹ್ಮನಿಂದ ಉತ್ಪತ್ತಿಯನ್ನೂ, ರುದ್ರನಿಂದ ಸಂಹಾರವನ್ನೂ ಮಾಡಿಸುತ್ತಾನೆ.4

---

1) ಅಸ್ಯ ದೇವಸ್ಯ ಮೀಳ್ಹುಷೇ ವಯಾ ವಿಷ್ಣೋರೇಷಸ್ಯ ಪ್ರಭೃಥೇ-
ಹವಿರ್ಭಿಃ ।
ವಿದೇಹಿ ರುದ್ರೋರುದ್ರಿಯಂ ಮಹಿತ್ವಂ ಯಾಸಿಷ್ಟಂ ವರ್ತಿರಶ್ವಿನಾ
ವಿರಾವಿತ್ ॥ —ಋಗ್ವೇದ

2) ಪರೋಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮಶ್ನುವಂತಿ ।
ನ ತೇ ವಿಷ್ಣುರ್ಜಾಯಮಾನೋ ನ ಜಾತೋ ದೇವ ಮಹಿಮ್ನಃ
ಪರಮಂ ತಮಾಪ ॥

3) ಪ್ರಾಣೋ ವಾ ಆಶಯಾ ಭೂಯಾನ್ ವಿಷ್ಣುರ್ವೈ ದೇವೇಭ್ಯೋ
ಭೂಯಾನ್ ತಸ್ಮಾದ್ಭೂಯಾನ್ನಾಮ.
—ಛಾಂದೋಗ್ಯೋಪನಿಷತ್

4) ಬ್ರಹ್ಮಣಾ ಸೃಜತಿ ರುದ್ರೇಣ ವಿಲಾಪಯತಿ ಸೋಽನುತ್ಪತ್ತಿಲಯಃ
ಏಕ ಏವ ಹರಿಃ ಪರಃ ಪೂರ್ಣಾನಂದಃ ..... ......
—ಮಹೋಪನಿಷತ್

ವಿಷ್ಣುವಿನ ಸರ್ವೋತ್ತಮತ್ವವನ್ನು ಹೇಳುವುದೇ ವೇದಶಾಸ್ತ್ರಗಳ ಪರಮ ಮುಖ್ಯ ತಾತ್ಪರ್ಯ.1 ಅಸಂಖ್ಯವೇದೋಪನಿಷತ್ಪ್ರಮಾಣ ವಚನಗಳು ಶ್ರೀಹರಿಯ ಸರ್ವೋತ್ತಮತ್ವವಿಷಯದಲ್ಲಿ ಜಾಗರೂಕವಾಗಿವೆ ಎಂದು ಹೇಳಬಹುದು.2

ಭಗವದ್ಗೀತೆಯ ಅನೇಕ ವಚನಗಳೂ ಇದನ್ನೇ ಹೇಳುತ್ತವೆ.

ಅಂತೆಯೇ ಅನೇಕಾನೇಕ ಪುರಾಣ ವಚನಗಳೂ ಶ್ರೀಹರಿಯೇ ಸರ್ವೋತ್ತಮ ಎಂದು ಉದ್ಗರಿಸುತ್ತವೆ.3

---

1) ಸರ್ವೋತ್ಕರ್ಷೇ ದೇವದೇವಸ್ಯ ವಿಷ್ಣೋಃ — ಮಹಾತಾತ್ಪರ್ಯಂ
ನೈವಚಾನ್ಯತ್ರ ಸತ್ಯಂ —ಪೈಂಗಿ ಶ್ರುತಿ

2) ಯಂ ಕಾಮಯೇ ತಂ ತಮುಗ್ರಂ ಕೃಣೋಮಿ .... ಮಮಯೋನಿರಪ್ಸು,
ಅಗ್ನಿರ್ವೈ ದೇವಾನಾಮವಮೋ ವಿಷ್ಣುಃ ಪರಮಃ,
ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ,
ಯೋ ನಃ ಪಿತಾ ಜನಿತಾ ಯೋ ವಿಧಾತಾ,
ಏಷ ಸರ್ವಗತಃ ಏಷ ಸರ್ವೇಶ್ವರಃ,
ಏಕಃ ಪುರಸ್ತಾದ್ಯ ಇದಂ ಬಭೂವ ಸ ನೋ ಹರಿರ್ಘೃತಮಿಹಾಯುಷೇತು ದೇವಃ ।

ಮತ್ತಃ ಪರತರಂ ನಾನ್ಯತ್,
ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಳಯಃ,
ಅಹಮಾದಿರ್ಹಿ ಭೂತಾನಾಂ,
ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ,
ಯಸ್ಮಾತ್ ಕ್ಷರಮತೀತೋಽಹಂ ಅಕ್ಷರಾದಪಿ ಚೋತ್ತಮಃ ।

3) ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ
ನಾಹಂ ನ ಚ ಶಿವೋಽನ್ಯೇ ಚ ತಚ್ಛಕ್ತ್ಯೇಕಾಂಶಭಾಗಿನಃ ।

## ೨. ಸತ್ಯಂ ಜಗತ್ (ಜಗತ್ತು ಸತ್ಯ)

ಈ ಚರಾಚರವಾದ ಪ್ರಪಂಚವೆಲ್ಲವೂ ಸತ್ಯ. ಇದು ಆಚಾರ್ಯರ ಮತ್ತೊಂದು ತತ್ತ್ವ. ಈ ವಿಶ್ವವೆಲ್ಲವೂ ಸತ್ಯವಾದದ್ದು. ಎಲ್ಲರ ಕಣ್ಣಿಗೂ ಕಾಣುತ್ತದೆ. ಆದಕ್ಕಾಗಿ ಬೇರೆ ಯುಕ್ತಿ ಹೇಳುವುದು ಅಗತ್ಯವಿಲ್ಲ. ಪ್ರತ್ಯಕ್ಷ ಕಂಡದ್ದು ಸುಳ್ಳು ಎಂದು ಹೇಳಿದರೆ ಅದಕ್ಕೆ ಕಾರಣ ಹೇಳಬೇಕಾಗುವುದು. ಕಣ್ಣಿಗೆ ಕಂಡದ್ದು ಸತ್ಯ ಎಂದು ಸಾಧಿಸಲಿಕ್ಕೆ ಯಾವ ಪ್ರಮಾಣವೂ ಬೇಡ. ಯುಕ್ತಿಯೂ ಬೇಡ. ಇದೇ ಮಾತನ್ನು ಆಚಾರ್ಯರು ಛಾಂದೋಗ್ಯಭಾಷ್ಯದಲ್ಲಿ 'ದೃಷ್ಟವಸ್ತುನಃ ಮಿಥ್ಯಾತ್ವಾಂಗೀಕಾರೇ ಚ ಯುಕ್ತ್ಯಪೇಕ್ಷಾ ನ ತು ಸತ್ಯತ್ವೇ' ಎಂಬ ಮಾತಿನಿಂದ ಸ್ಪಷ್ಟಪಡಿಸಿದ್ದಾರೆ.

ಜಗತ್ತು ಸತ್ಯ ಎಂಬುದು ಪ್ರತ್ಯಕ್ಷಾನುಮಾನಗಳಿಂದ ಸಿದ್ಧವಾದಂತೆ ಆಗಮಸಿದ್ಧವೂ ಆಗಿದೆ.

ಜಗತ್ತೆಲ್ಲವೂ ಸತ್ಯವಾಗಿದೆ. ಶ್ರೀವಿಷ್ಣುವು ಮಹದಾದಿ ಪದಾರ್ಥಗಳನ್ನೆಲ್ಲಾ ಸತ್ಯಭೂತವಾದವುಗಳನ್ನಾಗಿ ಸೃಷ್ಟಿ ಮಾಡಿದ್ದಾನೆ.1

ಭಗವಂತನು ಸೃಷ್ಟಿಸಿದ ಜಗತ್ತೆಲ್ಲವೂ ಸತ್ಯವೇ ಆಗಿದೆ. ಅದಾವುದೂ ವ್ಯರ್ಥವಲ್ಲ, ಮಿಥ್ಯೆ ಅಲ್ಲ. ಯಾಕೆಂದರೆ ದೈತ್ಯರನ್ನು ಗೆದ್ದು ದೇವತೆಗಳಿಗೆ ಈ ಲೋಕಗಳನ್ನು ಶ್ರೀಹರಿಯು ಕೊಟ್ಟಿದ್ದಾನೆ.

ವೇದಗಳು ಮಹಾಮಹಿಮನಾದ ಭಗವಂತನ ಜಗತ್ಸೃಷ್ಟ್ಯಾದಿ ವ್ಯಾಪಾರಗಳೆಲ್ಲವನ್ನೂ ಸತ್ಯವೆಂದೇ ಹೇಳುತ್ತವೆ.2

---

1) ವಿಶ್ವಂ ಸತ್ಯಂ—[ಋಗ್ವೇದ 2-7-3]
"ಸ್ವಯಂಭೂರ್ಯಾಥಾತಥ್ಯತೋ ಅರ್ಥಾನ್ ವ್ಯದಧಾತ್"
ಯಚ್ಚಿಕೇತ ಸತ್ಯಮಿತ್ತನ್ನ ಮೋಘಂ
ವಸುಸ್ಪಾರ್ಹಮುತ ಜೇತೋ ತದಾ ತಾ
—ಈಶಾವಾಸ್ಯೋಪನಿಷತ್

2) "ಪ್ರಥಾನ್ಯಸ್ಯ ಮಹತೋ ಮಹಾನಿ ಸತ್ಯಾಸತ್ಯಸ್ಯ ಕರಣಾನಿ ವೋಚಂ"
—ಋಗ್ವೇದ 2-6-15

ಇದರಂತೆ ಅನೇಕ ವೇದವಚನಗಳು ಜಗತ್ತಿನ ಸತ್ಯತ್ವಕ್ಕೆ ಸಾಕ್ಷಿಯಾಗಿವೆ.[1]

ಜಗತ್ತು ಸುಳ್ಳು ಎಂದು ಹೇಳುವವರನ್ನು ಗೀತೆಯಲ್ಲಿ ಅಸುರರು ಎಂದು ಸ್ವಯಂ ಶ್ರೀಹರಿಯೇ ಬೋಧಿಸಿದ್ದಾನೆ.[2]

ಭಾಗವತದಲ್ಲಿ 'ಸತ್ಯಸ್ಯ ಯೋನಿಂ'. ಭಗವಂತನನ್ನು ಸತ್ಯಭೂತವಾದ ಪ್ರಪಂಚಕ್ಕೆ ಕಾರಣನೆಂದು ಬ್ರಹ್ಮದೇವರು ಬಣ್ಣಿಸಿದ್ದಾರೆ.

"ಅಸತ್ಯಮಾಹುರ್ಜಗದೇತದಜ್ಞಾಃ" ಎಂಬ ಸ್ಮೃತಿ ವಚನವೂ ಇದೇ ಮಾತನ್ನು ಸ್ಪಷ್ಟಪಡಿಸುತ್ತಾ ಜಗತ್ತು ಅಸತ್ಯ ಎಂದು ಹೇಳುವವರು ಅಜ್ಞಾನಿಗಳೆಂದು ಹೇಳುತ್ತದೆ.

ಈ ಜಗತ್ತೆಲ್ಲವೂ ಸುಳ್ಳಾದರೆ ಜಗತ್ಕಾರಣನೆಂದು ವೇದ ಶಾಸ್ತ್ರಗಳು ಹೊಗಳಿರುವುದೂ "ಜನ್ಮಾದಸ್ಯ ಯತಃ" ಎಂದು ವೇದಾಂತ ಸೂತ್ರದಲ್ಲಿ ಅವನ ಲಕ್ಷಣ ಹೇಳಿರುವುದೂ ವ್ಯರ್ಥವೇ ಆಗುತ್ತವೆ. ಸುಳ್ಳು ಜಗತ್ತನ್ನು ನಿರ್ಮಿಸಿದರೆ ಇದರಲ್ಲಿ ಭಗವಂತನ ಮಹಿಮೆ ಏನು ಬಂತು ? ಸುಳ್ಳು ರೂಪಾಯಿ, ಸುಳ್ಳು ಪಾತ್ರೆಗಳನ್ನು ನಿರ್ಮಿಸಿ ತೋರಿಸುವ ಜಾದೂಗಾರನಿಗೂ ಸುಳ್ಳು ಪ್ರಪಂಚ ಸೃಷ್ಟಿಸಿದ ದೇವರಿಗೂ ಏನು ವ್ಯತ್ಯಾಸ ? ಸುಳ್ಳು ಪದಾರ್ಥಗಳನ್ನು ನಿರ್ಮಿಸಿದ

---

1) "ತದೇತತ್ಸತ್ಯಂ ಸತ್ಯಮೇವೇದಂ ವಿಶ್ವಮಸೌ ಸೃಜತಿ", "ಯತ್ಸತ್ಯರೂಪಂ ಜಗದೇತದೀದೃಕ್", "ಸ್ವಯಂಭೂತ್ ಸತ್ಯಕರ್ಮಾ", "ತದೇತ್ಸತ್ಯಮುದೀರಂ". "ಯೋಽಭೂತ್ಸೋದ್ವ್ಯಸ್ಸತ್ಯಮುದ್ವಾ". "ಕಣ್ವನ್ವಿ ...... ......

2) "ಅಸತ್ಯಮಪ್ರತಿಷ್ಠಂತೇ ಜಗದಾಹುರನೀಶ್ವರಂ"
ಈ ಶ್ಲೋಕಕ್ಕೆ ಅರ್ಥ ಬರೆಯುವಾಗ ಶಂಕರಾಚಾರ್ಯರೂ ಕೂಡ ಶಂಕರ ಭಾಷ್ಯದಲ್ಲಿ "ಅಸತ್ಯಂ ಯಥಾವಯಂ ಅನೃತಪ್ರಾಯಾಃ ತಥಾ ಇದಂ ಜಗತ್ಸರ್ವಂ ಅಸತ್ಯಂ ತೇ ಅಸುರಾ ಜನಾಃ"—ಎಂದು ಜಗತ್ತು ಅಸತ್ಯ ಎಂದು ಹೇಳುವವರು ಅಸುರರೆಂದು ನಿರ್ದೇಶಿಸಿದ್ದಾರೆ.
ಸತ್ಯ ಎನ್ನುವುದಕ್ಕೆ "ನತ್ವೇವಾಹಂ ಜಾತು ನಾಽಸಂ", "ಅವಿನಾಶಿತು ತದ್ವಿದ್ಧಿ". "ಪ್ರಕೃತಿಂ ಪುರುಷಂ ಚೈವ"—ಮುಂತಾಗಿ ಅನೇಕ ಗೀತಾ ವಚನಗಳು ಸಾಕ್ಷಿಯಾಗಿವೆ.

ಜಾದುಗಾರನನ್ನು ಯಾರಾದರೂ ಬಣ್ಣಿಸುವರೇ ? ಇಂಥ ಸುಳ್ಳು ಜಗತ್ತಿನ ಸುಳ್ಳು ಕರ್ತೃತ್ವಕ್ಕೆ ಸರ್ವಸಮರ್ಥ ಪರಮಾತ್ಮನೇ ಏಕೆ ಬೇಕು ? ಭಾಗವತದಲ್ಲಿ "ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ ಸತ್ಯಂ ಪರಂ ಧೀಮಹಿ" ಎಂದಿದೆ. ಇಂದ್ರಜಾಲಿಕನಂತೆ ಪರಮಾತ್ಮನು ಮಿಥ್ಯಾಪ್ರಪಂಚದ ನಿರ್ಮಾಪಕನಲ್ಲ. ಅವನ ಕೃತಿಯೂ ಸತ್ಯ. ಕರ್ತೃತ್ವವೂ ಸತ್ಯ. ಅವನೂ ಸತ್ಯ ಎಂದು ಸ್ಪಷ್ಟವಾಗಿ ಆದಿ ಪದ್ಯದಲ್ಲಿಯೇ ಡಂಗುರ ಹೊಡೆದು ಸಾಧಿಸಿದ್ದಾರೆ ಬಾದರಾಯಣ ಪ್ರಭುಗಳು.

ಹಿರಣ್ಯಾಕ್ಷನು ಭೂಮಿಯನ್ನು ಕದ್ದು ಪಾತಾಳಕ್ಕೆ ಓಡಿದ. ವಿಷ್ಣು ವರಾಹ ರೂಪ ಧರಿಸಿ ಅದನ್ನು ಮೇಲೆ ತಂದಿರಿಸಿದ—ಎಂದು ಭಾಗವತಾದಿ ಪುರಾಣ ಗಳಲ್ಲಿ ಭೂಮಂಡಲದ ಇತಿಹಾಸ ಹೇಳಿದ್ದಾರೆ ಭೂಮಿಯು ಸುಳ್ಳೇ ಆಗಿದ್ದರೆ ದೈತ್ಯ ಏಕೆ ಕದಿಯುತ್ತಿದ್ದ. ಅದನ್ನು ತರಲಿಕ್ಕೆ ಹರಿ ಏಕೆ ವರಾಹನಾಗಿ ಅವತರಿ ಸುತ್ತಿದ್ದ ?

ಜಗತ್ತು ಸುಳ್ಳು ಎಂದು ಹೇಳಿದರೆ ಬರುವ ಅನುಪಪತ್ತಿಗಳು ಅನೇಕ. ಒಂದು ಸುಳ್ಳನ್ನು ಮುಚ್ಚಿಕೊಳ್ಳಲಿಕ್ಕಾಗಿ ಸಾವಿರ ಸುಳ್ಳು ಹೇಳಬೇಕು. ಆದರೂ ಅದು ಸಿದ್ಧಿಸುವುದಿಲ್ಲ.

ಆದ್ದರಿಂದ ಪ್ರತ್ಯಕ್ಷ ಸಿದ್ಧವಾದ, ಯುಕ್ತಿಯುಕ್ತವಾದ, ಆಗಮ ಸಮ್ಮತ ವಾದ ಜಗತ್ತು ಸತ್ಯ ಎಂದು ಮಧ್ವಮುನಿಗಳು ಹೇಳಿದ ತತ್ತ್ವವನ್ನು ಒಪ್ಪಿ ಇಂಥ ಜಗತ್ತಿನ ಕರ್ತನಾದ ಭಗವಂತನ ಉಪಾಸನೆ ಮಾಡುವುದೇ ಶ್ರೇಯಸ್ಕರ ವಾದ ಮಾರ್ಗ.

## ೩. ತತ್ತ್ವತೋ ಭೇದ (ಭೇದವು ಪಾರಮಾರ್ಥಿಕ)

ಆಚಾರ್ಯರ ಸಿದ್ಧಾಂತವು ಮುಖ್ಯವಾಗಿ ಭೇದ ಸಿದ್ಧಾಂತ. ದ್ವೈತವಾದಕ್ಕೆ ಭೇದ ವಾದ ಎಂದೇ ಹೆಸರು. ದ್ವೈತಿಗಳು ವೇದಶಾಸ್ತ್ರೋಕ್ತವಾದ ಐದು ಬಗೆಯ ಭೇದಗಳನ್ನು ಒಪ್ಪುತ್ತಾರೆ.

ಜೀವ ಪರಮಾತ್ಮರಲ್ಲಿ ಭೇದ, ಜೀವ ಜೀವರಲ್ಲಿ ಭೇದ, ಜಡ ಜೀವರಲ್ಲಿ ಭೇದ, ಜಡ ಈಶ್ವರ ಭೇದ, ಜೀವ ಜಡಗಳಲ್ಲಿ ಭೇದ—ಹೀಗೆ ಪಂಚಭೇದ ಸಿದ್ಧಾಂತವು ಅನುಭವಸಿದ್ಧವೂ ಪ್ರಮಾಣಬದ್ಧವೂ ಆಗಿದೆ.[1]

---

1) "ಜೀವೇಶಯೋರ್ಜಡಾನಾಂ ಚ ಜೀವಾನಾಂ ಚ ಪರಸ್ಪರಂ ।
ಪಂಚ ಭೇದಾ ಇಮೇ ನಿತ್ಯಾಃ ಸರ್ವಾವಸ್ಥಾಸು ಸರ್ವದಾ ॥"

ಪ್ರಮಾಣ ವಚನಗಳಿಂದ ಈ ಭೇದ ಜ್ಞಾನವು ಮೋಕ್ಷಸಾಧಕ ಎಂದು ಸಿದ್ಧವಾಗುತ್ತದೆ.1

ವಾಸ್ತವಿಕವಾಗಿ ವಿಚಾರಿಸಿದರೆ ಜಗತ್ತಿನಲ್ಲಿರುವ ಎಲ್ಲ ವಸ್ತುಗಳೂ ಭಿನ್ನ ಭಿನ್ನ ಗುಣಧರ್ಮ ಸ್ವಭಾವಗಳುಳ್ಳದ್ದಾಗಿವೆ. ಅವುಗಳಲ್ಲಿ ಪರಸ್ಪರ ಭಿನ್ನತೆ ಕೆಲವು ಸಂದರ್ಭಗಳಲ್ಲಿ ವಿರೋಧವೂ ಕೂಡ ಇರೋಣದರಿಂದ ಭೇದವಿರುವುದು ಪ್ರತ್ಯಕ್ಷ ಸಿದ್ಧವಾಗಿದೆ. ಈ ಭೇದ ಜ್ಞಾನಕ್ಕೆ ಮುಂದೆ ಎಂದೂ ಭಾದಕವು ಬರುವುದಿಲ್ಲವಾದ್ದರಿಂದ ಇದು ಪ್ರಮಾಣ ಎಂದೇ ಒಪ್ಪಬೇಕಾಗುವುದು. ಇದಕ್ಕೆ ಶ್ರುತಿ, ಸ್ಮೃತಿ, ಸೂತ್ರ ಪುರಾಣಗಳಲ್ಲಿ ಬೇಕಾದಷ್ಟು ಪ್ರಮಾಣಗಳಿವೆ.

ಪರಮಾತ್ಮನೂ ಸತ್ಯ, ಜೀವನೂ ಸತ್ಯ. ಅವರಿಬ್ಬರ ಭೇದವೂ ಸತ್ಯ.2

ದೇಹವೆಂಬ ಮರದಲ್ಲಿ ಕುಳಿತ ಎರಡು ಹಕ್ಕಿಗಳಲ್ಲಿ ಒಂದು ಆ ಮರದ ಹಣ್ಣನ್ನು ತಿನ್ನುತ್ತದೆ. ಇನ್ನೊಂದು ಏನನ್ನೂ ತಿನ್ನದಿದ್ದರೂ ಸ್ವಯಂ ಪ್ರಕಾಶ ದಿಂದ ಬೆಳಗುತ್ತಿದೆ. ಇಲ್ಲಿ ದ್ವಾಸುಪರ್ಣಾ, ಅನ್ಯಃ, ಎಂಬ ಅರ್ಥದ ಶಬ್ದಗಳು ಸ್ಪಷ್ಟವಾಗಿಯೇ ಜೀವಬ್ರಹ್ಮರ ಭೇದವನ್ನು ಬೋಧಿಸುತ್ತವೆ.3

ಭಗವದ್ಗೀತೆಯಲ್ಲಿ "ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾ-ಹೃತಃ"—ಎಂದು ಅನ್ಯಶಬ್ದವನ್ನೂ ಪ್ರಯೋಗಿಸಿ ಪರಮಾತ್ಮನು ಜೀವರಿಂದ ಅನ್ಯನೂ ಉತ್ತಮನೂ ಆಗಿದ್ದಾನೆಂದು ಸ್ಪಷ್ಟಪಡಿಸಿದೆ.

ಗಾಯತ್ರೀ ಮಂತ್ರದಲ್ಲಿ "ಧಿಯೋ ಯೋ ನಃ ಪ್ರಚೋದಯಾತ್"— ಶ್ರೀಮನ್ನಾರಾಯಣನು ನಮ್ಮಲ್ಲಿ ಜೀವರ ಬುದ್ಧಿಯನ್ನೂ ಪ್ರೇರಿಸಲಿ ಎಂಬ

---

1) ಪಂಚ ಭೇದಾಂಶ್ಚ ವಿಜ್ಞಾಯ ವಿಷ್ಣೋಃ ಸ್ವಾಭೇದಮೇವ ಚ ।
—ಮ॥ ಭಾ॥ ತಾ॥ ನಿ॥, ಸರ್ಗ 1, ಶ್ಲೋಕ 82

2) "ಸತ್ಯ ಆತ್ಮಾ ಸತ್ಯೋ ಜೀವಃ ಸತ್ಯಂ ಭಿದಾ ಸತ್ಯಂ ಭಿದಾ"
—ಪೈಂಗಿ ಶ್ರುತಿ

3) "ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ ಅನ್ಯೋ
ಅಭಿಚಾಕಶೀತಿ ॥"

ಪ್ರಾರ್ಥನೆಯಲ್ಲಿ ಪ್ರೇರಕನಾದ ಪರಮಾತ್ಮನ ಮತ್ತು ಜೀವನ ಭೇದವು ಹೇಳಲ್ಪಟ್ಟಿದೆ.1

ಈ ಉಪನಿಷತ್ತಿನ ಮಂತ್ರಗಳಲ್ಲಿ ಪ್ರೇರಕನಾದ ಆ ಪರಮಾತ್ಮನು ಪ್ರೇಯನಾದ ಜೀವನಿಗಿಂತ ಅತ್ಯಂತ ಭಿನ್ನನೇ ಆಗಿದ್ದಾನೆ, ಎಂದು ಸ್ಪಷ್ಟವಾಗಿಯೇ ಪೃಥಕ್ ಎಂಬ ಶಬ್ದದಿಂದ ಹೇಳಿದೆ. ಜೀವಪರಮಾತ್ಮರ ಭೇದವನ್ನು ಚೆನ್ನಾಗಿ ಬಲ್ಲವರು ಉಪದೇಶಿಸಿದ ಮಾತಿನಿಂದಲೇ ಮನುಷ್ಯನಿಗೆ ದಿವ್ಯಜ್ಞಾನೋದಯವಾಗುತ್ತದೆ ಎಂದು ಸಾವಧಾರಣವಾಗಿಯೇ ನಿರೂಪಿತವಾಗಿದೆ.

"ನಿರಂಜನಃ ಪರಮಂ ಸಾಮ್ಯಮುಪೈತಿ" ಎಂಬ ಅಥರ್ವಣ ಶ್ರುತಿಯಲ್ಲಿ ಜೀವನು ಶ್ರೀಹರಿಯ ದರ್ಶನವಾದ ಬಳಿಕ ದೋಷರಹಿತನಾಗಿ ಆ ಪರಮಾತ್ಮನ ಸಾಮ್ಯವನ್ನು ಹೊಂದುತ್ತಾನೆ ಎಂದು ಹೇಳಿದೆ. ಐಕ್ಯವನ್ನು ಹೊಂದುತ್ತಾನೆ ಎಂದು ಹೇಳಿಲ್ಲ. ಸಾದೃಶ್ಯವು ಭೇದಸೂಚಕವಾದದ್ದು ಎಲ್ಲರಿಗೂ ತಿಳಿದೇ ಇದೆ. ಹಾಗೂ ಪರಮಶ್ರುತಿಯಲ್ಲಿ ಬರುವ ವಚನದಿಂದ "ಮುಕ್ತಜೀವರಾಗಲಿ ಲಕ್ಷ್ಮೀದೇವಿಯೇ ಆಗಲಿ ಎಂದೂ ಆ ಮುಕುಂದನ ವೈಭವವನ್ನು ಯೋಗ್ಯತೆಯನ್ನು ಹೊಂದುವುದಿಲ್ಲ"—ಎಂದು ಸ್ಪಷ್ಟಪಡಿಸಿದೆ.2 ಅವನ ಐಕ್ಯವಂತೂ ಇಲ್ಲವೇ ಇಲ್ಲ.

ಜೀವೇಶ್ವರಭೇದಜ್ಞಾನದಿಂದಲೇ ಮಾನವನಿಗೆ ಮುಕ್ತಿ ಎಂಬ ಅಥರ್ವಣ ಮಂತ್ರವು ನಿರವಕಾಶ ಪ್ರಮಾಣವಾಗಿದೆ.3

ಈ ವೇದ ವಚನಗಳಲ್ಲದೆ ಭಗವದವತಾರಭೂತರಾದ ಶ್ರೀ ಬಾದರಾಯಣರು ರಚಿಸಿದ ಬ್ರಹ್ಮಸೂತ್ರಗಳಲ್ಲಿ ಪಂಚಭೇದಸಿದ್ಧಾಂತವು ಮುಖ್ಯವಾಗಿ ಪ್ರತಿಪಾದಿತವಾಗಿದೆ. ಬ್ರಹ್ಮಸೂತ್ರಗಳೆಲ್ಲವೂ ಭೇದ ಬೋಧಕವೇ ಆಗಿವೆ ಎಂದು ಅನೇಕ ದ್ವೈತ ಗ್ರಂಥಕಾರರು ಪ್ರತಿಪಾದಿಸಿದ್ದಾರೆ.

---

1) "ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ .. .....
ಪ್ರೋಕ್ತಾನ್ಯೇನ್ಯೈವ ಸುಜ್ಞಾನಾಯ ಪ್ರೇಷ್ಠ."

2) "ತಸ್ಮಾನ್ಮುಕ್ತಾಶ್ಚ ಸಾ ಚೈವಂ ನ ಕ್ವಚಿದ್ವಿಷ್ಣುವೈಭವಂ ।
ಪ್ರಾಪ್ನುವಂತಿ ಸ ಏವೈಕಃ ಸ್ವತಂತ್ರಃ ಪೂರ್ಣಷಡ್ಗುಣಃ ॥"

3) "ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತ-
ಶೋಕಃ ॥"

ಬ್ರಹ್ಮಸೂತ್ರದ ಪ್ರಥಮಾಧ್ಯಾಯದ ಪ್ರಥಮ ಪಾದದ ಆರನೆಯ ಆನಂದ ಮಯಾಧಿಕರಣದಲ್ಲಿ ಆನಂದಮಯ ಶಬ್ದದಿಂದ ಪರಬ್ರಹ್ಮನಾದ ನಾರಾಯಣ ನನ್ನೇ ಏಕೆ ತೆಗೆದುಕೊಳ್ಳಬೇಕು, ಚತುರ್ಮುಖಾದಿ ದೇವತೆಗಳು ಏಕಾಗಬಾರದು ಎಂಬ ಶಂಕೆಗೆ ಉತ್ತರರೂಪವಾಗಿ :

"ಓಂ ಭೇದವ್ಯಪದೇಶಾತ್ ಓಂ"

"ತೇ ಯೇ ಶತಂ ಪ್ರಜಾಪತೀರಾನಂದಃ"

ಇತ್ಯಾದಿ ತೈತ್ತಿರೀಯಶ್ರುತಿಯು ಆನಂದವಲ್ಲಿಯಲ್ಲಿ ಬ್ರಹ್ಮರುದ್ರಾದಿ ದೇವತೆಗಳಿಗೆ ಪರಿಮಿತವಾದ ಆನಂದವನ್ನೂ ಪರಮಾತ್ಮನಿಗೆ ಅಪರಿಮಿತವಾದ ಆನಂದವನ್ನೂ ಹೇಳುತ್ತದೆ. ಮಿತಾನಂದತ್ವ, ಅಮಿತಾನಂದತ್ವ ರೂಪವಾದ ಭೇದಕ ಧರ್ಮ ಗಳನ್ನು ಹೇಳಿದ್ದರಿಂದ ಆನಂದಮಯ ಶಬ್ದವಾಚ್ಯರು ಚತುರ್ಮುಖಾದಿ ಯಾವ ಜೀವರೂ ಆಗುವುದಿಲ್ಲ. ಎಲ್ಲ ದೇವರಿಂದ ಅತ್ಯಂತ ಭಿನ್ನನಾದ ಪರಮಾತ್ಮನೇ ಆನಂದಮಯನು ಎಂದು ಸ್ಪಷ್ಟವಾಗಿಯೇ ಭೇದವು ಸೂಚಿತವಾಗಿದೆ.

ಇದರಂತೆ ಬ್ರಹ್ಮಸೂತ್ರದ ಎರಡನೇ ಅಧ್ಯಾಯದ ಮೂರನೇ ಪಾದದ 28 ನೇ ಸೂತ್ರದಲ್ಲಿ ಮತ್ತು ಶ್ರುತಿಗಳಲ್ಲಿ ಜೀವರ ಸಮುದಾಯದಿಂದ ಪರಮಾತ್ಮನು ಭಿನ್ನನು ಎಂದು ವೇದವು ಉಪದೇಶಿಸುವುದರಿಂದ, ಜೀವ ಪರ ಮಾತ್ಮರಲ್ಲಿ ಅತ್ಯಂತ ಭೇದವಿದೆ ಎಂದು ತಿಳಿಯಬೇಕು.1

ಜೀವನು ಅಂತರ್ಯಾಮಿಯಾಗಿರುವುದಿಲ್ಲ. ಆದುದರಿಂದ ಅವನು ಪರ ಮಾತ್ಮನಿಂದ ಭಿನ್ನನಾಗಿದ್ದಾನೆ ಎಂದು ಕಾಣ್ವ ಮತ್ತು ಮಾಧ್ಯಂದಿನ ಶ್ರುತಿಗಳು ಸಾರುತ್ತವೆ. ಆದುದರಿಂದ ಜೀವ ಮತ್ತು ಪರಮಾತ್ಮರಲ್ಲಿ ಅತ್ಯಂತ ಭೇದವಿದೆ.2

ಜೀವನು ಶಂಸನ ಕರ್ತನಾಗಿಯೂ, ಪರಮಾತ್ಮನು ಶಂಸನ ಕರ್ಮ ನಾಗಿಯೂ ಉಲ್ಲೇಖಿತರಾಗಿದ್ದಾರೆ. ಅವರಿಬ್ಬರಲ್ಲಿಯೂ ಕರ್ತೃತ್ವ, ಕರ್ಮತ್ವ ರೂಪವಾದ ಭಿನ್ನಧರ್ಮಗಳನ್ನು ಐತರೇಯ ಶ್ರುತಿಯಲ್ಲಿ ಸ್ಪಷ್ಟವಾಗಿ ಹೇಳಿರುವು

---

1) 'ಓಂ ಪೃಥಗುಪದೇಶಾತ್ ।' ಎಂಬ ಸೂತ್ರದಲ್ಲಿ 'ಭಿನ್ನೋಽಚಿಂತ್ಯಃ ಪರಮೋ ಜೀವಸಂಘಾತ್, ದ್ವಾಸುಪರ್ಣಾ'.

2) 'ಓಂ ಶಾರಿರಶ್ಚೋಭಯಯೋಃಪಿ ಹಿ ಭೇದೇನೈನಮಧೀಯತೇ' (1-2-20)

ದರಿಂದ ಜೀವ ಪರಮಾತ್ಮರು ನಿತ್ಯಭೇದವುಳ್ಳವರು 1

"ಓಂ ಸ್ಥಿತ್ಯದನಾಭ್ಯಾಂ ಚ ಓಂ" ದ್ವಾಸುಪರ್ಣಾ ಎಂಬ ವೇದಮಂತ್ರದಲ್ಲಿ ಪರಮಾತ್ಮನಿಗೆ ತನ್ನದೇ ಪ್ರಕಾಶಮಾನ ಸ್ಥಿತಿಯನ್ನು ಜೀವನಿಗೆ ಭೋಜನವನ್ನೂ ಹೇಳಿ ಇಬ್ಬರಲ್ಲಿಯೂ ಬೇರೆ ಬೇರೆ ಗುಣಸ್ವಭಾವ ಹಾಗೂ ವ್ಯಾಪಾರಗಳನ್ನು ಹೇಳಿರೋಣದರಿಂದ ಅವರಿಬ್ಬರಲ್ಲಿಯೂ ಅತ್ಯಂತ ಭೇದವಿದೆ ಎಂದು ತಿಳಿಯಲೇಬೇಕು.

ಹೀಗೆ ಅನೇಕ ಸೂತ್ರಗಳಲ್ಲಿ ಬಾದರಾಯಣರು ಸ್ಪಷ್ಟಶಬ್ದಗಳಿಂದ ಭೇದ ಸಿದ್ಧಾಂತವನ್ನು ಸ್ಥಿರೀಕರಿಸಿದ್ದಾರೆ 2

ಇದರಂತೆ ಭಗವದ್ಗೀತೆಯಲ್ಲಿ 'ಈಶ್ವರೋಹಮಹಂ ಭೋಗೀ' ಎಂದು ಜೀವ ಈಶ್ವರರಲ್ಲಿ ಈ ಐಕ್ಯಚಿಂತನೆ ಮಾಡುವ ಜನರು ಅಂದರೆ ಐಕ್ಯೋಪಾಸಕರು ಅಸುರರೆಂದೂ ಅವರಿಗೆ ಅಂಧತಮಸ್ಸಾಗುವುದೆಂದು ಸ್ಪಷ್ಟವಾಗಿ ಶ್ರೀ ಕೃಷ್ಣನು ತಿಳಿಸಿದ್ದಾನೆ. ಮತ್ತು ಜೀವ ಪರಮಾತ್ಮರ ಭೇದವನ್ನು ಕಂಠರವೇಣ ಅನೇಕ ಪದ್ಯಗಳಲ್ಲಿ ಅಪ್ಪಣೆ ಕೊಡಿಸಿದ್ದಾನೆ.3 ಈ ಶ್ಲೋಕಗಳಿಂದ ಗೀತಾಚಾರ್ಯನು ದ್ವೈತ ಸಿದ್ಧಾಂತದ ಅಥವಾ ಅವನ ಸ್ವಂತ ಸಿದ್ಧಾಂತದ ಪಂಚಭೇದಗಳನ್ನೂ ಪ್ರತಿಪಾದಿಸಿದ್ದಾನೆ ಎಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.4

ಕ್ಷರ ಅಕ್ಷರ ಎಂದು ಜೀವರಾಶಿಗಳಲ್ಲಿ ಎರಡು ವಿಧವಿದೆ ಎಂದು ಹೇಳಿದ್ದರಿಂದ ಜೀವಜೀವರಲ್ಲಿ ಭೇದವನ್ನು, ಕ್ಷರತ್ವ ಅಕ್ಷರತ್ವ ರೂಪಗಳಾದ ಭೇದಕ

---

1) "ಓಂ ಕರ್ಮಕರ್ತೃ ವ್ಯಪದೇಶಾತ್" (1-2-4).
"ಏತದಾತ್ಮಾನಂ ಪರಸ್ಮೈ ಶಂಸತಿ"

2) ಓಂ ಭೇದವ್ಯಪದೇಶಾಚ್ಚಾನ್ಯಃ ಓಂ
ಓಂ ಭೇದವ್ಯಪದೇಶಾತ್ ಓಂ
ಓಂ ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ ಓಂ
ಓಂ ನೇತರೋಽನುಪಪತ್ತೇಃ ಓಂ.

3) 'ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।
ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಂ'

4) "ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ
ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ।
ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।

ಧರ್ಮಗಳನ್ನು ಹೇಳಿದಂತಾಯಿತು. ಸರ್ವಾಣಿ ಭೂತಾನಿ ಎಂದು ಬಹುವಚನ ಪ್ರಯೋಗ ಮಾಡಿರೋಣದರಿಂದಲೇ ಜಡಜಡಗಳಲ್ಲಿಯೂ, ಜಡಜೀವರಲ್ಲಿಯೂ ಭೇದವನ್ನು ಸೂಚಿಸಿದಂತಾಯಿತು. ಚರಾಚರಾತ್ಮಕವಾದ ಜೀವಜಡಾತ್ಮಕವಾದ ಈ ಪ್ರಪಂಚವೆಲ್ಲವೂ ಕ್ಷರ ಅರ್ಥಾತ್ ನಾಶವುಳ್ಳದ್ದು. ಮಹಾಲಕ್ಷ್ಮೀದೇವಿಯು ಅಕ್ಷರ ಎಂದರೆ ನಾಶರಹಿತಳು. ಅವಳಿಗೆ ಕೂಟ ಎಂದೂ ಹೆಸರು. ಈ ಕ್ಷರಾಕ್ಷರರಿಗಿಂತ ಅನ್ಯ ಅಂದರೆ ಭಿನ್ನನಾದವನೇ ಪರಮಾತ್ಮನೆಂದು ಕರೆಸಿಕೊಳ್ಳುತ್ತಾನೆ. ಇದರಿಂದ ಜೀವೇಶ್ವರ ಭೇದವನ್ನು ಹೇಳಿದಂತಾಯಿತು—ಹೀಗೆ ವೇದ, ಶಾಸ್ತ್ರ, ಪುರಾಣಗಳ ಸರ್ವವಚನಗಳಿಂದಲೂ ಶ್ರೀ ಮಧ್ವಾಚಾರ್ಯರ ಪಂಚಭೇದ ಸಿದ್ಧಾಂತವು ಪ್ರತಿಪಾದಿತವಾಗಿದೆ.

೪. ಜೀವಗಣಾಃ ಹರೇರನುಚರಾಃ (ಜೀವರೆಲ್ಲರೂ ವಿಷ್ಣುವಿನ ದಾಸರು)

ಶ್ರೀಹರಿಯು ಎಲ್ಲ ಜೀವರಿಂದಲೂ ಉತ್ತಮನೆಂದು ಸಿದ್ಧವಾದ ಬಳಿಕ ದೇವಾದಿ ಜೀವರೆಲ್ಲ ಅವನ ಅನುಚರರೆಂದು ಸಿದ್ಧವಾಗುತ್ತದೆ. ಜೀವ-ಜಡಾತ್ಮಕವಾದ ಪ್ರಪಂಚವು, ಹಿಂದೆ ಹೇಳಿದ ಉಕ್ತಿಯುಕ್ತಿಗಳಿಂದ, ಪರಮಾತ್ಮನು ಭಿನ್ನ ಎಂದು ಸಿದ್ಧವಾದ ಬಳಿಕ ಈ ಪ್ರಪಂಚಕ್ಕೆ ನಿಯಾಮಕನೊಬ್ಬನು ಬೇಕು ಎಂದಾಗುತ್ತದೆ. ಅವನೇ ಶ್ರೀಹರಿ. 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ' ಎಂಬ ಶ್ರುತಿಯು ನಾರಾಯಣನಿಗೆ ನಿಯಾಮಕತ್ವವನ್ನೂ ಮತ್ತು ದೇವತೆಗಳಿಗೆ ಭಗವದಧೀನತ್ವವನ್ನೂ (ನಿಯ್ಯಮ್ಯತ್ವ) ಹೇಳುತ್ತದೆ.

ನಾರಾಯಣನು ಶ್ರೇಷ್ಠರಾದ 94 ದೇವತೆಗಳನ್ನು ನಿಯಮಿಸುತ್ತಾನೆ. ಚಕ್ರದಂತೆ ತಿರುಗಿಸುತ್ತಾನೆ.1

ನಾರಾಯಣನು ಕ್ರೂರರಾದ ದುಷ್ಟ ಜನರನ್ನು ದಮನ ಮಾಡಿ ಸಜ್ಜನರನ್ನು ಅನುಗ್ರಹಿಸುತ್ತಾನೆ. ನಿತ್ಯಸಂಸಾರಿಗಳನ್ನು ತಿರುಗಿಸುತ್ತಾನೆ— ಎಂದು ಕೇಳಿದ್ದೇವೆ.2

---

1) "ಚತುರ್ಭಿಸ್ಸಾಕಂ ನವತಿಂ ಚ ನಾಮಭಿಃ ಚಕ್ರನವೃತ್ತಂ ವ್ಯತೀಂ ರವೀವಿಪತ್"—(ಋಗ್ವೇದ, 2-2-25)

2) "ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್ನನ್ಯಮನ್ಯಮತಿನೇನೀಯಮಾನಃ ಏಧಮಾನದ್ವಿಡುಭಯಸ್ಯ ರಾಜಾ ಚೋಷ್ಕೂಯತೇ ವಿಪ ಇಂದ್ರೋ ಮನುಷ್ಯಾನ್—(ಋ. 4-7-33)

ಆ ಪರಮಾತ್ಮನ ಅಂಜಿಕೆಯಿಂದಲೇ ಗಾಳಿಯು ಬೀಸುತ್ತದೆ ಸೂರ್ಯನು ಪ್ರಕಾಶಿಸುತ್ತಾನೆ. ಬೆಂಕಿಯು ಸುಡುತ್ತದೆ. ಇಂದ್ರನು ಮಳೆಗರೆಯುತ್ತಾನೆ. ಹೀಗೆ ತೈತ್ತಿರೀಯ ಶ್ರುತಿಯು ಎಲ್ಲ ದೇವೋತ್ತಮರಿಗೂ ಶ್ರೀಹರಿಯ ಆಜ್ಞಾ ಧಾರಕತ್ವವನ್ನು ಹೇಳುತ್ತದೆ.1

ಜೀವಗಣದಲ್ಲಿ ಶ್ರೇಷ್ಠರಾದ ದೇವಾಧಿದೇವತೆಗಳೇ ಅವನ ಆಜ್ಞಾಧಾರಕ ರಾದ ದಾಸರೆಂದಾದ ಬಳಿಕ ಉಳಿದ ಕ್ಷುದ್ರಜೀವರೆಲ್ಲ ಆ ವಿಷ್ಣುವಿನ ಅನುಚರ ರೆಂದು ಪ್ರತ್ಯೇಕ ಹೇಳಬೇಕಾಗಿಯೇ ಇಲ್ಲ.

ಜೀವರಲ್ಲಿ ಉತ್ಕೃಷ್ಟ ಗತಿಯನ್ನು ಹೊಂದಿದ ಮುಕ್ತಜೀವರೂ ಕೂಡ ಆ ಶ್ರೀಹರಿಯ ದಾಸರಾಗಿದ್ದಾರೆಂಬುದು 'ಉತಾಮೃತತ್ವಸ್ಯೇಶಾನಃ' 'ಅಣೀಂ ನ ರಥ್ಯಂ ಅಮೃತಾದಿತಸ್ಥುಃ'—ಮುಂತಾದ ಸ್ಮೃತಿವಾಕ್ಯಗಳು ಮುಕ್ತಜೀವನಿಯಾ ಮಕತ್ವವನ್ನು ಪರಮಾತ್ಮನಿಗೆ ಸ್ಪಷ್ಟವಾಗಿ ಉದ್ಘೋಷಿಸುತ್ತವೆ.

ಅದರಂತೆ ಭಗವದ್ಗೀತೆಯಲ್ಲಿ ಕೂಡ ವಿಷ್ಣುವು ತನ್ನ ಇಚ್ಛೆಯಿಂದ ಎಲ್ಲ ಪ್ರಾಣಿಗಳನ್ನು ಯಂತ್ರಾರೂಢವಾದ ಗೊಂಬೆಗಳಂತೆ ತಿರುಗಿಸುತ್ತ ಎಲ್ಲ ಪ್ರಾಣಿಗಳ ಹೃದಯದಲ್ಲಿ ಇರುತ್ತಾನೆ—ಎಂದು ವಿಷ್ಣುವಿಗೆ ಸರ್ವಜೀವ ನಿಯಾಮಕತ್ವವೂ ಜೀವರಿಗೆ ಅವನ ಕೈಗೊಂಬೆಯಂತೆ ಅವನ ಅನುಚರತ್ವವೂ ಹೇಳಿದೆ.2

ದೇವತೆಗಳಲ್ಲಿ ಸರ್ವಶ್ರೇಷ್ಠರೆನಿಸಿದ ರಮಾಬ್ರಹ್ಮರು, ಮುಂತಾದ ದೇವತೆ ಗಳು ತಾವು ಆ ಶ್ರೀಹರಿಯ ದಾಸರೆಂದೂ ಅವನ ಸೇವಕರೆಂದೂ ಅನೇಕ ಸಂದರ್ಭಗಳಲ್ಲಿ ಸೂಚಿಸಿದ್ದಾರೆ.

ಭಗವನ್, ನಿನ್ನ ಸೇವೆಗೈಯುವುದು ಮತ್ತು ನಿನ್ನನ್ನು ಸ್ತುತಿಸುವುದೇ ನನಗೆ ಉಚಿತವಾಗಿರುತ್ತದೆ—ಎಂದು ರಮಾದೇವಿಯು ತಾನು ಆ ಶ್ರೀ ಹರಿಯ ಸೇವಕಳೆಂದು ಹೇಳಿಕೊಂಡಿದ್ದಾಳೆ.3

---

1) 'ಭೀಷಾಸ್ಮಾದ್ವಾತಃ ಪವತೇ ಭೀಷೋದೇತಿ ಸೂರ್ಯಃ ಭೀಷಾಸ್ಮಾದಗ್ನಿ- ಶ್ಚೇಂದಶ್ಚ ಮೃತ್ಯುರ್ಧಾವತಿ ಪಂಚಮಃ ।' —ತೈತ್ತಿರೀಯೋಪನಿಷತ್.

2) ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥
—ಭಗವದ್ಗೀತೆ, 18-61

3) ಶುಶ್ರೂಷಣಂ ಮದುಚಿತಂ ಸ್ತವನಂ ರಮೇಶ ।

ನಾನು (ಬ್ರಹ್ಮ) ಮಹಾದೇವ, ಭೃಗು ಮೊದಲಾದ ಎಲ್ಲಾ ಪ್ರಜಾಪತಿಗಳೂ, ಭೂತಪತಿ, ದೇವೇಂದ್ರ ಮೊದಲಾದ ನಾವೆಲ್ಲರೂ ಆ ವಿಷ್ಣುವಿನ ನಿಯಂತ್ರಣಕ್ಕೆ ಒಳಪಟ್ಟು ಕಾರ್ಯ ಮಾಡುತ್ತೇವೆಂದು ಬ್ರಹ್ಮದೇವರು ತಾವು ಮೊದಲುಗೊಂಡು ಎಲ್ಲ ದೇವತಾಧುರೀಣರಿಗೂ ವಿಷ್ಣುವಿನ ಆಜ್ಞಾಧಾರಕತ್ವವನ್ನು ಹೇಳಿದ್ದಾರೆ.[1]

ಜೀವೋತ್ತಮರಾದ ವಾಯುದೇವರು ಕೂಡ 'ಸ್ವಾಮಿ ನಾವೆಲ್ಲ ದೇವತೆಗಳೂ ನಿನ್ನ ಕಿಂಕರರಾಗಿದ್ದು ಪರಮ ದುರ್ಲಭವಾದ ನಿನ್ನ ಪಾದಾರವಿಂದವನ್ನು ಸೇವಿಸುತ್ತೇವೆ'—ಎಂದು ತಮಗೆ ಶ್ರೀಹರಿಯ ಪಾದಸೇವಕತ್ವವನ್ನೂ ಕೈಂಕರ್ಯವನ್ನೂ ಸಾರಿದ್ದಾರೆ.[2]

ಇದೇ ಪ್ರಕಾರ ರುದ್ರದೇವರು ಶ್ರೀಹರಿಯೇ ರಕ್ಷಕನೆಂದು ಹೇಳಿ ತಮ್ಮ ಅಧೀನತ್ವವನ್ನು ಪ್ರಾಮಾಣಿಕವಾಗಿ ಒಪ್ಪಿಕೊಂಡಿದ್ದಾರೆ.[3]

ಇದರಂತೆ ಇನ್ನೂ ಅನೇಕ ಶ್ರುತಿ ಸ್ಮೃತಿ ಗೀತಾದಿ ವಾಕ್ಯಗಳನ್ನು ಈ ವಿಷಯದಲ್ಲಿ ಪ್ರಮಾಣವೆಂದು ಹೇರಳವಾಗಿ ಉದಾಹರಿಸಬಹುದು.[4]

---

1) ಅಹಂ ಭವೋ ದಕ್ಷಭೃಗುಪ್ರಧಾನಾಃ ಪ್ರಜೇಶಭೂತೇ
ಸಸುರೇಶಮುಖ್ಯಾಃ । ಸರ್ವೇ ವಯಂ ಯನ್ನಿಯಮಂ ಪ್ರಪನ್ನಾಃ ।

2) ಏತೇ ಹಿ ದೇವಾಸ್ತವ ಭೃತ್ಯಭೂತಾಃ ಪಾದಾರವಿಂದಂ
ಪರಮಂ ಸುದುರ್ಲಭಂ ।

3) ವಯಂ ನ ತಾತ ಪ್ರಭವಾಮ ಬ್ರೂಮೋ ... ।

4) ತಮೇವ ಶರಣಂ ಯಾಹಿ ಹರಿಸ್ತೇ ಶಂ ವಿಧಾಸ್ಯತಿ ॥
'ಮತ್ತಃ ಸರ್ವಂ ಪ್ರವರ್ತತೇ'
'ವಯಮನುಚರಮುಖ್ಯಾಃ ಕರ್ಮಭಿಸ್ತೇ ಮನೋಜ್ಞೈಃ'
'ಏಕಃ ಶಾಸ್ತಾ ನ ದ್ವಿತಿಯೋಽಸ್ತಿ ಶಾಸ್ತಾ'
'ತ್ವಯೋಪಭುಕ್ತಸ್ರಗ್ಗಂಧವಾಸೋಲಂಕಾರಚರ್ಚಿತಾಃ' ।
'ಉಚ್ಛಿಷ್ಟಭೋಜಿನೋ ದಾಸಾಃ ತವ ಮಾಯಾಂ ಜಯೇಮಹಿ' ॥

ಇಂಥ ಪ್ರಮಾಣವಚನಗಳಿಂದ ಜೀವರೆಲ್ಲರೂ ಆ ಪರಮಾತ್ಮನ ಅನುಚರರೆಂದು ಸಿದ್ಧವಾಗುತ್ತದೆ.

## ೫. ನೀಚೋಚ್ಚಭಾವಂ ಗತಾಃ (ಜೀವರಲ್ಲಿ ತಾರತಮ್ಯವಿದೆ)

ತಾರತಮ್ಯತತ್ತ್ವವು ಮಧ್ವಮತದ ಜೀವಾಳವಾಗಿದೆ. ಜೀವಜೀವರಲ್ಲಿ ತರತಮಭಾವವಿರುವುದು ಎಲ್ಲರ ಅನುಭವಸಿದ್ಧವಾಗಿದೆ. ಇದರಂತೆ ಜೀವೋತ್ತಮರಲ್ಲಿಯೂ ದೇವೋತ್ತಮರಲ್ಲಿಯೂ ಒಬ್ಬರಿಗಿಂತ ಒಬ್ಬರು ನಿಪ್ಕೃಷ್ಟೋತ್ಕೃಷ್ಟರಾಗಿ ಇದ್ದುದನ್ನೂ ಉಪನಿಷತ್ತುಗಳು ಪ್ರಮಾಣ ಬದ್ಧವಾಗಿ ಖಚಿತಗೊಳಿಸಿ ಹೇಳಿದ್ದನ್ನೂ ನಾವು ಕಾಣುತ್ತೇವೆ.

ಅಲ್ಲದೆ ಇಂಥ ಅನೇಕ ವಚನಗಳು ತಾರತಮ್ಯಜ್ಞಾನದ ಅವಶ್ಯಕತೆಯನ್ನು ಎತ್ತಿ ಸಾರುತ್ತವೆ 1

'ಅಗ್ನಿರ್ವೈ ದೇವಾನಾಮವಮೋ ವಿಷ್ಣುಃ ಪರಮಃ ತದನಂತರೇಣ ಸರ್ವಾ ದೇವತಾಃ' — ಎಂಬ ಶ್ರುತಿಯಲ್ಲಿ ದೇವತೆಗಳಲ್ಲಿ ಉತ್ತಮ

---

1) 'ತಾರತಮ್ಯಂ ಚ ಮುಕ್ತಿಗಂ'
'ತಾರತಮ್ಯಂ ತತೋ ಜ್ಞೇಯಂ ಸರ್ವೋಚ್ಚತ್ವಂ ತಥಾ ಹರೇಃ
'ಏತದ್ವಿನಾ ನ ಕಸ್ಯಾಪಿ ವಿಮುಕ್ತಿಃ ಸ್ಯಾತ್ಕಥಂಚನ । ॥ 81 ॥
ಪಂಚ ಭೇದಾಂಶ್ಚ ವಿಜ್ಞಾಯ ವಿಷ್ಣೋಃ ಸ್ವಾಭೇದಮೇವ ಚ
ನಿರ್ದೋಷತ್ವಂ ಗುಣೋದ್ರೇಕಂ ಜ್ಞಾತ್ವಾ ಮುಕ್ತಿರ್ನಚಾನ್ಯಥಾ॥ 82 ॥
ಅವತಾರಾನ್ ಹರೇರ್ಜ್ಞಾತ್ವಾ ನಾವತಾರಾ ಹರೇಶ್ಚ ಯೇ ।
ತದಾವೇಶಾಂಸ್ತಥಾ ಸಮ್ಯಕ್ ಜ್ಞಾತ್ವಾ ಮುಕ್ತಿರ್ನಚಾನ್ಯಥಾ ॥ 83 ॥
ಸೃಷ್ಟಿರಕ್ಷಾಹೃತಿಜ್ಞಾನನಿಯತ್ಯಜ್ಞಾನಬಂಧನಾನ್ ।
ಮೋಕ್ಷಂ ಚ ವಿಷ್ಣುತಸ್ತ್ವೇವ ಜ್ಞಾತ್ವಾ ಮುಕ್ತಿರ್ನಚಾನ್ಯಥಾ ॥ 84 ॥
ವೇದಾಂಶ್ಚ ಪಂಚರಾತ್ರಾಣಿ ಸೇತಿಹಾಸಪುರಾಣಕಾನ್ ।
ಜ್ಞಾತ್ವಾ ವಿಷ್ಣುಪರಾನೇವ ಮುಚ್ಯತೇ ನಾನ್ಯಥಾ ಕ್ವಚಿತ್ ॥ 85 ॥
ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋऽಧಿಕಃ ।
ಸ್ನೇಹೋ ಭಕ್ತಿರಿತಿ ಪ್ರೋಕ್ತಸ್ತಯಾ ಮುಕ್ತಿರ್ನಚಾನ್ಯಥಾ ॥ 86 ॥
—ಮ. ಭಾ. ತಾ. ನಿ. ಸರ್ಗ 1, ಶ್ಲೋಕ 81—86

ವಿಷ್ಣು, ಕನಿಷ್ಠ ಅಗ್ನಿ—ಉಳಿದ ದೇವತೆಗಳೆಲ್ಲರೂ ಈ ಉತ್ತಮಾಧಮರ ನಡುವೆ ತಾರತಮ್ಯ ಪ್ರಕಾರ ಬರುತ್ತಾರೆ ಎಂದು ತಿಳಿಸಿದೆ.

ಜೀವರಲ್ಲಿ ತಾರತಮ್ಯವನ್ನು ಭಗವದ್ಗೀತೆಯಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ.1

ಸಾತ್ವಿಕರು ಉತ್ತಮ ಗತಿಯನ್ನೂ ರಾಜಸರು ಮಧ್ಯಮ ಗತಿಯನ್ನೂ ತಾಮಸರು ಅಧೋಗತಿಯನ್ನೂ ಹೊಂದುತ್ತಾರೆ—ಎಂದು ಹೇಳಿ ಜೀವರಲ್ಲಿ ಮೂರು ಭಾಗಗಳಿವೆ ಎಂದು ಸೂಚಿಸಿದ್ದಾರೆ.

ಶ್ರೀಕೃಷ್ಣನಿಗೆ ಸಮ್ಮತವಾದ ಈ ಜೀವತ್ರೈವಿಧ್ಯವಾದವನ್ನು ಯುಕ್ತಿಯುಕ್ತವಾಗಿ ಮಂಡಿಸಿದವರು ಶ್ರೀ ಮಧ್ವಾಚಾರ್ಯರು ಒಬ್ಬರೇ.

ದೇವತಾತಾರತಮ್ಯವನ್ನು ತೈತ್ತಿರೀಯೋಪನಿಷತ್ತಿನಲ್ಲಿ ಚೆನ್ನಾಗಿ ವಿವರಿಸಿದ್ದಾರೆ. ಜಿಜ್ಞಾಸುಗಳು ಅದನ್ನು ಓದಿ ತಿಳಿದುಕೊಳ್ಳಬೇಕು. ತಾರತಮ್ಯ ಜ್ಞಾನವಿಲ್ಲದಿದ್ದರೆ, 'ತಾರತಮ್ಯಪರಿಜ್ಞಾನಾದನುತ್ಥಾನಂ ತಮೋ ವ್ರಜೇತ್' ಮುಂತಾದ ಪ್ರಮಾಣ ವಚನಗಳಲ್ಲಿ ನಿತ್ಯ ನರಕವಾಗುವುದೆಂದು ಜ್ಞಾನಿಗಳು ಹೇಳಿದ್ದಾರೆ. ಆದುದರಿಂದ ಇದನ್ನು ಅವಶ್ಯವಾಗಿ ತಿಳಿದು ನಡೆಯಬೇಕು.

ಶ್ರೀ ನಾರಾಯಣಪಂಡಿತಾಚಾರ್ಯರು ತಾರತಮ್ಯ ಸ್ತೋತ್ರದಲ್ಲಿ ದೇವತಾ ತಾರತಮ್ಯವನ್ನು ಚೆನ್ನಾಗಿ ತಿಳಿಸಿದ್ದಾರೆ.

## ೬. ಮುಕ್ತಿರ್ನೈಜ ಸುಖಾನುಭೂತಿ (ಸ್ವರೂಪಸುಖಾನುಭವವೇ ಮುಕ್ತಿ) :

ತನ್ನ ಸ್ವರೂಪ ಭೂತವಾದ ಆನಂದವನ್ನು ಅನುಭವಿಸುವುದೇ ಸಜ್ಜೀವರ ಮೋಕ್ಷ. ಛಾಂದೋಗ್ಯ ಶ್ರುತಿಯಲ್ಲಿ ಈ ಮುಕ್ತಿಯ ಸ್ವರೂಪವನ್ನು ಹೀಗೆ ನಿರೂಪಿಸಿದ್ದಾರೆ.

'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' ಅಂದರೆ ಜೀವನು ಪರಬ್ರಹ್ಮನನ್ನು ಹೊಂದಿ ತನ್ನ ಸುಖಸ್ವರೂಪವನ್ನು ಪಡೆಯುತ್ತಾನೆ ಎಂದು ಹೇಳಲಾಗಿದೆ.

---

1) ಊರ್ಧ್ವಂ ಗಚ್ಛಂತಿ ಸತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ ।
ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥

ನೈಯ್ಯಾಯಿಕರು 21 ವಿಧ ದುಃಖಗಳ ಧ್ವಂಸವೇ ಮೋಕ್ಷವೆನ್ನುತ್ತಾರೆ. ಜೈನರು ಮೇಲೆ ಮೇಲೆ ಮುಗಿಲಿನಲ್ಲಿ ಹಾರುತ್ತ ಶಿದ್ಧಶಿಲೆಗೆ ಹೋಗುವುದೇ ಮುಕ್ತಿ ಎಂದು ಹೇಳುತ್ತಾರೆ. ಅದ್ವೈತಿಗಳು ಜೀವಬ್ರಹ್ಮೈಕ್ಯವೇ ಮೋಕ್ಷವೆನ್ನುತ್ತಾರೆ. ರಾಮಾನುಜರು ಬ್ರಹ್ಮನ ಸಾಮ್ಯವೇ ಮುಕ್ತಿ ಎಂದು ಹೇಳುತ್ತಾರೆ. ಇವೆಲ್ಲವೂ ಯುಕ್ತಿ, ವೇದ, ಪುರಾಣ, ಉಕ್ತಿ ವಿರುದ್ಧವಾಗಿವೆ.

ನೈಯ್ಯಾಯಿಕರ ರೀತಿಯಲ್ಲಿ ಮೋಕ್ಷದಲ್ಲಿ ಆನಂದದ ಅನುಭವವೇ ಇಲ್ಲ. ಸುಖಾನುಭವವಿಲ್ಲದ ಬಳಿಕ ಅದನ್ನಾರು ಬಯಸುವರು ? ಜೈನರ ಮೋಕ್ಷವಂತೂ ಅವ್ಯವಹಾರ್ಯ. ಸುಖವಾಗಿ ಒಂದೆಡೆ ವಿಶ್ರಾಂತಿಯಿಲ್ಲದೆ ಕೂಡಲಿಕ್ಕಿಲ್ಲದೆ ನಿರಂತರವೂ ಹಕ್ಕಿಯಂತೆ ಮೇಲಕ್ಕೆ ಹಾರುತ್ತ ಹೋಗುವುದು ಮನುಷ್ಯನಿಗೆ ಮೋಕ್ಷವೆನಿಸದೆ ಶಾಪವೆನಿಸೀತು. ಅದರಂತೆ ಅದ್ವೈತಿಗಳ ನಿರ್ಗುಣಭಾವಾಪತ್ತಿರೂಪದಲ್ಲಿಯೂ ಸುಖದ ಸುದ್ದಿಯೇ ಇಲ್ಲ. ರಾಮಾನುಜರ ಮೋಕ್ಷವನ್ನು ಬಯಸುವುದು ಕೂಡಾ ಅಧಃಪತನಕ್ಕೆ ಕಾರಣ. ಯಾವ ಕಾಲದಲ್ಲಿಯೂ ಶ್ರೀ ಹರಿಯ ಸಾಮ್ಯಾಪೇಕ್ಷೆಯು ತಮಃಪ್ರದವೆಂದು ಶಾಸ್ತ್ರಗಳು ಸಾರುತ್ತವೆ. ಆದುದರಿಂದ ಆಚಾರ್ಯ ಮಧ್ವರು ಹೇಳಿದ ಸ್ವರೂಪಾನಂದಾವಿರ್ಭಾವವೇ ಮೋಕ್ಷ ಎಂಬ ಮಾತು ಯುಕ್ತಿಸಂಗತವೂ ಪ್ರಮಾಣಾನುಸಾರಿಯೂ ಆಗಿದೆ.

ಮುಕ್ತನ ದೇಹ ಇಂದ್ರಿಯ ಎಲ್ಲವೂ ಆನಂದಾತ್ಮಕವೇ ಆಗುತ್ತವೆ. ದೇವದೇವನ ದಯೆಯಿಂದ ಆ ಸುಖಶರೀರದಿಂದ ಅವನು ಅನೇಕ ವಿಧವಾದ ಭೋಗಭಾಗ್ಯಗಳನ್ನೂ ಅನುಭವಿಸುತ್ತಾನೆ.1

ಶರೀರದ ಪಾಪಗಳನ್ನೆಲ್ಲಾ ಕಳೆದುಕೊಂಡು ತನ್ನ ಕನಸಿನ ಸುಖಗಳನ್ನೆಲ್ಲಾ ಅನುಭವಿಸುತ್ತಾನೆ.2

ಬಲ, ಆನಂದ, ಶಾಂತಿ, ಜ್ಞಾನ, ಸ್ಥೈರಣೆ ಮುಂತಾದ ಜೀವನ ಸ್ವರೂಪ

---

1) "ಅಥ ವಿಮುಕ್ತಸ್ಯ ಚಿನ್ಮಾತ್ರ ಏವ ದೇಹೋ ಭವತಿ ಚಿನ್ಮಾತ್ರಾಣಿಕರಾಣಿ ತೈರೀಶಾನುಗ್ರಹಿತೈಃ ಭೋಗಾನ್ ಭುಂಕ್ತೆ"

2) "ಶರೀರೇ ಪಾಪ್ಮಾನೋ ಹಿತ್ವಾ ಸರ್ವಾನ್ ಕಾಮಾನ್ ಸಮಶ್ನುತೇ"

ಭೂತ ಗುಣಗಳೇ ಪರಮಾತ್ಮನ ದಯೆಯಿಂದ ಮುಕ್ತಿಯಲ್ಲಿ ವ್ಯಕ್ತವಾಗುತ್ತವೆ. ಇದೇ ಮೋಕ್ಷ.1

ಮುಕ್ತನು ಮೋಕ್ಷದಲ್ಲಿ ಬಯಸಿದ ಆಹಾರ ತಿಂದು ಬೇಕಾದ ಅನಿಷಿದ್ಧವಾದ ವಿಲಾಸ ವಿಹಾರ ಮಾಡುತ್ತಾ ಸಂಚರಿಸುತ್ತಾನೆ—ಎಂದು ಶ್ರುತಿಯು ಮೋಕ್ಷದ ಸ್ವರೂಪವನ್ನು ಸಾರಿಸಾರಿ ಹೇಳುತ್ತದೆ.2

ಇಂಥ ಮೋಕ್ಷವು ಆ ನಾರಾಯಣನ ಅನುಗ್ರಹದಿಂದ ಮಾತ್ರ ಲಭ್ಯ. ಬೇರಾವುದರಿಂದಲೂ, ಬೇರಾರಿಂದಲೂ ಮೋಕ್ಷ ದುರ್ಲಭ. ನಾರಾಯಣ ಶ್ರುತಿಯಲ್ಲಿ ಈ ಮಾತನ್ನು ಸ್ಪಷ್ಟಪಡಿಸಿದ್ದಾರೆ. ದುಃಖಪರಿಪೂರ್ಣವಾದ ಈ ಸಂಸಾರದಿಂದ ಬಿಡುಗಡೆಯು ಶ್ರೀಹರಿಯ ಪ್ರಸಾದದಿಂದಲೇ ಹೊಂದಲಿಕ್ಕೆ ಶಕ್ಯವಿದೆ. ಬೇರೆ ಉಪಾಯವಿಲ್ಲ.3 ಇಂಥ ಮೋಕ್ಷವನ್ನು ಹೊಂದಿದ ಬಳಿಕ ಜೀವನು 'ನ ಚ ಪುನರಾವರ್ತತೇ'—ಮರಳಿ ಈ ಲೋಕಕ್ಕೆ ಬರುವುದೇ ಇಲ್ಲ. ಇದನ್ನು ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು ಸೂಚಿಸಿದ್ದಾನೆ.4

## ಮೋಕ್ಷಸ್ವರೂಪ ವಿಚಾರ

ಎಲ್ಲ ಜೀವರಿಗೂ, ಸ್ಥೂಲ, ಸೂಕ್ಷ್ಮ, ಲಿಂಗ ಮತ್ತು ಸ್ವರೂಪ ಎಂಬ ನಾಲ್ಕು ತರಹದ ದೇಹಗಳಿರುತ್ತವೆ. ಮೊದಲಿನ ಮೂರು ಪ್ರಾಕೃತಿಕ ದೇಹಗಳನ್ನು ಕಳಚಿದ ಬಳಿಕ ನಾಲ್ಕನೆಯ ಸ್ವರೂಪದೇಹವು ಪ್ರಕಟವಾಗುತ್ತದೆ. ಈ ಸ್ವರೂಪದೇಹದಿಂದ ಯೋಗ್ಯವಾದ ಸುಖಾನುಭವವನ್ನು ಹೊಂದುವುದೇ ಮೋಕ್ಷವೆನಿಸುತ್ತದೆ. ಪ್ರಾಕೃತದೇಹಗಳಿಂದ ಅನುಭವಿಸುವ ಸುಖಕ್ಕಿಂತ

---

1) "ಬಲಮಾನಂದಓಜಶ್ಚ ಸಹೋಜ್ಞಾನಮನಾಕುಲಂ।
ಸ್ವರೂಪಾಣ್ಯೇವ ಜೀವಸ್ಯ ವ್ಯಂಜಂತೇ ಪರಮಾದ್ವಿಭೋಃ॥"

2) "ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ"

3) "ಯಸ್ಯ ಪ್ರಸಾದತ್ಪರಮಾರ್ತಿರೂಪಾತ್ ಸಂಸಾರಾನ್ಮುಚ್ಯತೇ ನಾಪರೇಣ'. ನಾನ್ಯಃ ಪಂಥಾ ಅಯನಾಯ ವಿದ್ಯತೇ.

4) "ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ।
ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ॥"

ಸ್ವರೂಪ ದೇಹದಿಂದ ಅನುಭವಿಸುವ ಸುಖವು ಉತ್ಕೃಷ್ಟವೂ ನಿರ್ದುಷ್ಟವೂ ಆಗಿರುತ್ತದೆ.

ಇಂಥ ಸ್ವರೂಪಸುಖಾನುಭವರೂಪವಾದ ಮೋಕ್ಷವು ಎಲ್ಲ ಜೀವಿಗಳಿಗೂ ಇಲ್ಲ. ಕೇವಲ ಯೋಗ್ಯ ಜೀವರಿಗೂ ಬ್ರಹ್ಮಾಂಡದೇವತೆಗಳಿಗೂ ಮಾತ್ರ ಉಂಟು.

ರಜೋಗುಣಿಗಳಾದ ಜೀವರಿಗೆ ನಿತ್ಯ ಸಂಸಾರ ರೂಪವಾದುದೇ ಮೋಕ್ಷ. ಅವರಲ್ಲಿ ಕೆಲವರು ಸ್ವರ್ಗಪ್ರಚುರರು, ಹಲವರು ಭೂಮಿಪ್ರಚುರರು, ಮತ್ತೆ ಕೆಲವರು ನರಕ ಪ್ರಚುರರು.

ತಮೋಗುಣಿಗಳಾದ ದೈತ್ಯ ಪಿಶಾಚ ಮತ್ತು ನೀಚ ಜೀವರಿಗೆ ನಿತ್ಯ ನರಕವೇ ಮೋಕ್ಷ.

ಜೀವರಿಗೆ ದೊರಕುವ ಮೋಕ್ಷಕ್ಕೆ ನಾಲ್ಕು ಮೆಟ್ಟಿಲುಗಳಿವೆ.

1) ಕರ್ಮಕ್ಷಯಃ, 2) ಉತ್ಕ್ರಾಂತಿ 3) ಮಾರ್ಗ, 4) ಭೋಗ.[1]

## ಕರ್ಮಕ್ಷಯ

ಸಾಧಕನಿಗೆ ಬಿಂಬಾಪರೋಕ್ಷವಾದ ಕೂಡಲೇ ಅವನ ಸಂಚಿತಕರ್ಮಗಳೆಲ್ಲವೂ ನಾಶವಾಗುತ್ತವೆ. ನಾಶವೆಂದರೆ ಅವನು ತನ್ನ ಅನಿಷ್ಟ ಪುಣ್ಯಗಳನ್ನೆಲ್ಲ ತನಗೆ ಬೇಕಾದವರಿಗೆ ದಾನ ಮಾಡಿಬಿಡುತ್ತಾನೆ. ಪಾಪಗಳನ್ನೆಲ್ಲ ತನಗೆ ಬೇಕಾದವರಿಗೆ ದಾನ ಮಾಡಿಬಿಡುತ್ತಾನೆ. ಪಾಪಗಳನ್ನು ಹರಿದ್ವೇಷಿಗಳಿಗೆ ಹಂಚಿಬಿಡುತ್ತಾನೆ. ಕೆಲವು ಪುಣ್ಯಗಳು ಸ್ವರೂಪದಿಂದಲೇ ನಾಶಹೊಂದುತ್ತವೆ. ಪ್ರಾರಬ್ಧ ಕರ್ಮಗಳ ನಾಶವು ಭೋಗದಿಂದಲೇ ಆಗುತ್ತದೆ. ಬ್ರಹ್ಮಾದಿ ಉತ್ತಮ ಜೀವರು ತಮ್ಮ ತಮ್ಮ ಅಧಿಕಾರಾನುಭವ ರೂಪವಾದ ಭೋಗಗಳಿಂದಲೇ ಪ್ರಾರಬ್ಧವನ್ನು ಭೋಗಿಸುತ್ತಾರೆ.

## ಉತ್ಕ್ರಾಂತಿ

ಸಾಧಕನಿಗೆ ಈ ರೀತಿಯಾಗಿ ಪ್ರಾರಬ್ಧ ಕರ್ಮವು ಭೋಗದಿಂದ ನಾಶವಾದ

---

1) "ಕರ್ಮಕ್ಷಯಸ್ತತಥೋತ್ಕ್ರಾಂತಿರ್ಮಾರ್ಗೋ ಭೋಗಶ್ಚತುಷ್ಟಯಮ್"
ಫಲಂ ಮೋಕ್ಷ ಇತಿ ಪ್ರೋಕ್ತಂ ... ....

ಬಳಿಕ ಶ್ರೀಹರಿಯ ಪ್ರಸಾದದಿಂದ ಚರಮದೇಹದಿಂದ ಬ್ರಹ್ಮನಾಡಿಯ ಮೂಲಕ ಉತ್ಕ್ರಮಣವಾಗುವುದು.1

ಬ್ರಹ್ಮ ರಂಧ್ರವೆಂದರೆ ಬ್ರಹ್ಮನಾಡಿ. ಇದಕ್ಕೆ ಸುಷುಮ್ನಾನಾಡಿ ಎಂದೂ ಹೆಸರಿದೆ.

ಹೃದಯದಲ್ಲಿಯ ನೂರೊಂದು ನಾಡಿಗಳಲ್ಲಿ ಮೂಲದಿಂದ ಶಿರಃಪರ್ಯಂತ ಸರಳವಾಗಿರುವ ನಾಡಿಗೆ ಸುಷುಮ್ನಾ ಎನ್ನುವರು 2

ವಜ್ರಿಕಾ, ಆರ್ಯಾ, ಪ್ರಕಾಶಿನೀ. ವೈದ್ಯುತಾ, ಬ್ರಹ್ಮನಾಡಿ ಎಂದು ಐದು ಪ್ರಕಾರದ್ದಾಗಿದೆ.3 ಈ ಸುಷುಮ್ನಾನಾಡಿಯು ದೇಹದಲ್ಲಿ ಮೂಲಾಧಾರದಿಂದ ಮಸ್ತಕದವರೆಗೆ ಸರಳ ರೇಖೆಯಲ್ಲಿ ನಿಂತಿದೆ. ಇದರ ಸುತ್ತಲೂ ಇರುವ ನಾಡಿಗಳು ಇಡಾ, ಪಿಂಗಲಾ, ವಜ್ರಿಕಾ, ಧಾರಿಣೀ ಎಂದು ನಾಲ್ಕು ಬಗೆಯಾಗಿವೆ.

ಅಪರೋಕ್ಷಜ್ಞಾನಿಗಳಲ್ಲಿ ಪ್ರತೀಕಾಲಂಬನರು, ಅಪ್ರತೀಕಾಲಂಬನರು ಎಂದು ಎರಡು ವಿಧ.

ಅಪ್ರತೀಕಾಲಂಬನರಿಗೆ ಪ್ರಾಣೋತ್ಕ್ರಮಣ ಸಮಯದಲ್ಲಿ ನಿರಂತರ ಹರಿಧ್ಯಾನದ ಪುಣ್ಯದಿಂದ ಅವರ ಹೃದಯದ ಅಗ್ರ ಭಾಗವು ಪ್ರಕಾಶಿತವಾಗಿ ಹೊರಬೀಳುವ ಹಾದಿಯು ಕಾಣತೊಡಗುತ್ತದೆ. ಆ ದ್ವಾರದಿಂದ ಸಾಧಕರು ಪ್ರಾಜ್ಞನಾಮಕಪರಮಾತ್ಮನೊಡನೆ ಹೊರಬಿದ್ದು ಊರ್ಧ್ವಗಮನಗೈಯುತ್ತಾರೆ. ಅವರ ಮುಂದೆ ವಾಯುದೇವರು ಮಾರ್ಗದರ್ಶನ ಮಾಡಿಸುತ್ತ ನಡೆದಿರುತ್ತಾರೆ. ಅರ್ಚಿರಾದಿ ಮಾರ್ಗದಿಂದ ಪ್ರಯಾಣಿಸುವಾಗ ಅವರಿಗೆ ಅಲ್ಲಲ್ಲಿ ಗೌರವಾದರಗಳು ಆಗುತ್ತವೆ. ಅಲ್ಲಿಂದ ಅವರು ಕ್ರಮೇಣ ವೈಕುಂಠ ಲೋಕವನ್ನು ತಲಪುತ್ತಾರೆ.

---

1) "ಹೃದಿಸ್ಥೇನೈವ ಹರಿಣಾ ತಸ್ಯೈವಾನುಗ್ರಹೇಣ ತು ।
ಉತ್ಕ್ರಾಂತಿರ್ಬ್ರಹ್ಮರಂಧ್ರೇಣ ತಸ್ಯೋವೋಪಾಸನತೋ ಭವೇತ್" ॥

2) "ಶತಂ ಚೈಕಾ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನಮಭಿನಿಸ್ಸೃತೈಕಾ"
—ಕಾಠಕೋಪನಿಷತ್.

3) "ಮಧ್ಯೇ ಸುಷುಮ್ನಾ ವಿಜ್ಞೇಯಾ ವಜ್ರಕಾರ್ಯಾಪ್ರಕಾಶಿನೀ ।
ವೈದ್ಯುತಾ ಬ್ರಹ್ಮನಾಡೀತಿ ಸೈವ ಪಂಚಪ್ರಭೇದಿನೀ"
—ತಂತ್ರಸಾರ ಸಂಗ್ರಹ

ಅಲ್ಲಿ ಅವರಿಗೆ ತುರೀಯನಾಮಕ ಪರಮಾತ್ಮನ ಪ್ರಾಪ್ತಿಯಾಗುತ್ತದೆ.

ಪ್ರತೀಕಾಲಂಬನರಾದ ಸಾಧಕರು ಅಂತ್ಯಕಾಲದಲ್ಲಿ ಹರಿಸ್ಮರಣೆ ಮಾಡುತ್ತ ಸುಷುಮ್ನಾನಾಡಿಯ ಪಕ್ಕದ ನಾಡಿಯಿಂದ ಹೊರಟು ಅರ್ಚಿರಾದಿ ಮಾರ್ಗದಿಂದ ಹೋಗುವಾಗ ಅರ್ಚಿ, ಅಹರ್ಲೋಕ, ಶುಕ್ಲಪಕ್ಷ ಕ್ರಮದಿಂದ ವಾಯು ದೇವರು ಅವರನ್ನು ತಂದು ಬ್ರಹ್ಮಲೋಕ ಮುಟ್ಟಿಸುತ್ತಾರೆ. ಬ್ರಹ್ಮದೇವರು ತಮ್ಮ ಜೊತೆಗೆ ಅವರನ್ನು ವೈಕುಂಠಕ್ಕೆ ಕರೆದೊಯ್ಯುತ್ತಾರೆ.

ಪ್ರಣವಮಂತ್ರದಿಂದ ಶ್ರೀಹರಿಯನ್ನು ಧ್ಯಾನಮಾಡಿ ಬ್ರಹ್ಮಲೋಕಕ್ಕೆ ಬಂದ ಜ್ಞಾನಿಗಳಿಗೆಲ್ಲ ಬ್ರಹ್ಮದೇವರು ಬ್ರಹ್ಮೋಪದೇಶ ಮಾಡಿದ ಬಳಿಕ ಮುಕ್ತಿಯಾಗುವುದು.1

ಸ್ವರ್ಗಕ್ಕೆ ಹೋದವರಿಗೆ ಪುನರಾವೃತ್ತಿ ಇದೆ. ಮಹರ್ಲೋಕಕ್ಕೆ ಹೋದ ಕೆಲವರಿಗೆ ಪುನರಾವೃತ್ತಿ ಇದೆ. ಕೆಲವರಿಗೆ ಇಲ್ಲ. ಆದರೆ ಜನೋಲೋಕ, ತಪೋಲೋಕ, ಸತ್ಯಲೋಕಗಳಿಗೆ ಹೋದವರು ಮಾತ್ರ ಮರಳಿ ಬರುವುದಿಲ್ಲ.

ದೇವತೆಗಳಿಗೆ ದೇಹೋತ್ಕ್ರಮಣವಿಲ್ಲ. ಅವರಿಗೆ ಸ್ವೋತ್ತಮ ದೇಹ ಪ್ರವೇಶವೇ ಲಯ. ಅರ್ಚಿರಾದಿ ಮಾರ್ಗದಿಂದ ಪ್ರಯಾಣವೂ ಇಲ್ಲ. ಅವರಿಗೆ ಲಯವಾದನಂತರ ಮುಕ್ತಿಯಾಗುತ್ತದೆ.

## ಲಯ ಮಾರ್ಗ

ಸಾಮಾನ್ಯವಾಗಿ ದೇವತೆಗಳಿಗೆ ದೇಹೋತ್ಕ್ರಮಣ ದ್ವಾರಾ ಅರ್ಚಿರಾದಿ ಪಥಪ್ರಯಾಣ ಇಲ್ಲದಿದ್ದರೂ ಮನುಷ್ಯಯೋನಿಯಲ್ಲಿ ಅವತಾರ ಮಾಡಿದಾಗ ಈ ಎಲ್ಲ ಉತ್ಕ್ರಮಣ ಅರ್ಚಿರಾದಿ ಮಾರ್ಗಗಳೂ ಉಂಟು.

ಲಯ ಮಾರ್ಗದಲ್ಲಿ ಗರುಡ ಮಾರ್ಗ, ಶೇಷ ಮಾರ್ಗ ಎಂದು ಎರಡು ವಿಧವಿದೆ. ಅಗ್ನಿ, ಸೂರ್ಯ, ಗುರು, ಇಂದ್ರ, ಸೌಪರ್ಣಿ, ಗರುಡ-ಇದು ಗರುಡ ವರ್ಗ. ವರುಣ, ಸೋಮ, ಅನಿರುದ್ಧ, ಕಾಮ, ವಾರುಣಿ, ಶೇಷ-ಇದು ಶೇಷ ಮಾರ್ಗ. ಕೆಲವು ದೇವತೆಗಳಿಗೆ ಗರುಡ ಮಾರ್ಗದಿಂದ ಲಯವಿದ್ದರೆ ಹಲವರಿಗೆ ಶೇಷ ಮಾರ್ಗದಿಂದ ಲಯವೆಂದು ಹೇಳುತ್ತಾರೆ.

---

1) ಪ್ರಣವೇನ ಹರಿಂ ಧ್ಯಾಯನ್ ಬ್ರಹ್ಮಲೋಕಂ ಸಮೇತ್ಯ ಚ
ಜ್ಞಾನಂ ಚತುರ್ಮುಖಾತ್ ಪ್ರಾಪ್ಯ ಮುಚ್ಯಂತೇ ನಾತ್ರ ಸಂಶಯಃ ||

## ಗರುಡ ಮಾರ್ಗದಲ್ಲಿ ಲಯ ಹೊಂದುವ ದೇವತೆಗಳು

ಭೃಗು ಮೊದಲಾದ ಮುನಿಗಳು ದಕ್ಷನಲ್ಲೂ, ದಕ್ಷನು ಗರುಡಮಾರ್ಗದ ಇಂದ್ರನಲ್ಲೂ ಲಯ ಹೊಂದುತ್ತಾರೆ. ಆಕಾರಾಭಿಮಾನಿಯಾದ ಗಣೇಶನು ಧರಾಭಿಮಾನದೇವತೆಯಾದ ಧರೆಯಲ್ಲಿ, ಧರೆಯು ಗುರುವಿನಲ್ಲಿ ಲಯ ಹೊಂದುವರು. ಕರ್ಮಜ ದೇವತೆಗಳು, ಪ್ರಿಯವ್ರತ, ಗಯ ಮೊದಲಾದವರು ಸ್ವಾಯಂಭುವಮನುವಿನಲ್ಲಿ ಲಯಹೊಂದುವರು.

ನಿಋತಿ ಮತ್ತು ಪಿತೃಗಳು ಯಮನಲ್ಲಿ, ಯಮನು ಮನುವಿನಲ್ಲಿ, ಮನುವು ಇಂದ್ರನಲ್ಲಿ, ಆಜಾನಜದೇವತೆಗಳೂ, ಅಗ್ನಿಪುತ್ರರೂ ಮತ್ತು ಉಳಿದ ದೇವತೆಗಳೂ-ಇವರಿಗೆಲ್ಲ ಅಗ್ನಿ ಮುಖಾಂತರ ಗರುಡ ಮಾರ್ಗವಾಗಿ ಲಯವಾಗುತ್ತದೆ.

## ಶೇಷಮಾರ್ಗ

ಗಾಂಧರ್ವರಿಗೆ ಕುಬೇರನಲ್ಲಿ, ಕುಬೇರನಿಗೆ ಸೋಮನಲ್ಲಿ, ಲಯವಾಗುವುದು. ಸನಕಾದಿಗಳಿಗೆ ಕಾಮನ ಮುಖಾಂತರ ಮತ್ತು ವಿಷ್ವಕ್ಸೇನನಿಗೆ ಅನಿರುದ್ಧನ ದ್ವಾರಾ ಶೇಷಮಾರ್ಗದಲ್ಲಿ ಲಯವಾಗುತ್ತದೆ. ಗರುಡನವರೆಗಿನ ಕೆಳಗಿನ ಜೀವರುಗಳಿಗೆ ಸ್ವೋತ್ತಮರ ದೇಹದಲ್ಲಿ ಲಯವಾದ ಬಳಿಕ ಗರುಡ, ಶೇಷರಿಗೆ ಸರಸ್ವತಿಯಲ್ಲಿ ಲಯವಾಗುತ್ತದೆ. ಸರಸ್ವತಿಗೆ ಚತುರ್ಮುಖ ಬ್ರಹ್ಮನಲ್ಲಿ, ಬ್ರಹ್ಮದೇವರಿಗೆ ಲಕ್ಷ್ಮೀದ್ವಾರಾ ಪರಮಾತ್ಮನಲ್ಲಿ ಲಯವನ್ನು ಹೇಳಿದ್ದಾರೆ.

ಪಾರ್ವತಿಗೆ ರುದ್ರನಲ್ಲಿ, ರುದ್ರದೇವರಿಗೆ ಭಾರತಿಯಲ್ಲಿ, ಭಾರತಿಗೆ ವಾಯುದೇವರಲ್ಲಿ, ವಾಯುದೇವರಿಗೆ ಲಕ್ಷ್ಮೀದ್ವಾರಾ ಪರಮಾತ್ಮನಲ್ಲಿ ಲಯವಾಗುವುದು.

ಈ ರೀತಿಯಾಗಿ ಲಯವಾದ ಬಳಿಕ ಬ್ರಹ್ಮಕಲ್ಪದಲ್ಲಿ ಲಿಂಗಭಂಗವಾಗಲು ಯೋಗ್ಯರಾದ ಎಲ್ಲ ಜೀವರಿಂದ ಒಡಗೂಡಿ ಬ್ರಹ್ಮದೇವರು ಸತ್ಯಲೋಕದ ಮೇಲಿರುವ ವಿರಜಾ ನದಿಯ ದಂಡೆಗೆ ಬರುತ್ತಾರೆ. ಆ ನದಿಯ ನೋಟದಿಂದಲೇ ಎಲ್ಲ ಜೀವರಿಗೂ ಆನಂದವಾಗುವುದು ಬ್ರಹ್ಮದೇವರು ಆ ವಿರಜಾ ನದಿಯ ನೀರನ್ನು ತಾವು ಪ್ರೋಕ್ಷಣ ಮಾಡಿಕೊಂಡು ಎಲ್ಲ ಜೀವರಿಗೂ ಆ ನದಿಯಲ್ಲಿ ಸ್ನಾನ ಮಾಡಲು ಅಪ್ಪಣೆ ಕೊಡುತ್ತಾರೆ. ಅವರ ಅಪ್ಪಣೆಯಂತೆ ಜೀವರೆಲ್ಲರೂ ಪರಮಾತ್ಮನ ನಾಮಸ್ಮರಣ ಮಾಡುತ್ತಾ ವಿರಜಾ ನದಿಯಲ್ಲಿ ಸ್ನಾನ

ಮಾಡಲು ಅಪ್ಪಣೆ ಕೊಡುತ್ತಾರೆ ಅವರ ಅಪ್ಪಣೆಯಂತೆ ಜೀವರೆಲ್ಲರೂ ಪರಮಾತ್ಮನ ನಾಮಸ್ಮರಣ ಮಾಡುತ್ತಾ ವಿರಜಾ ನದಿಯಲ್ಲಿ ಸ್ನಾನ ಮಾಡುತ್ತಾರೆ. ಆದರಿಂದ ಅವರ ಲಿಂಗದೇಹವು ಭಂಗವಾಗುವುದು. ಜೀವರಿಗೆ ಅನಾದಿಕಾಲದಿಂದ ಬಂದ ಜೀವಾಚ್ಛಾದಿಕಾ ಎಂಬ ಪ್ರಕೃತಿಯ ಪರದೆಯು ದೂರವಾಗುತ್ತದೆ. ಅನಂತರ ಜೀವರಿಗೆ ಸ್ವರೂಪ ದೇಹವು ಪ್ರಾಪ್ತವಾಗುತ್ತದೆ.

ಲಿಂಗದೇಹವು ಭಂಗವಾದ ಬಳಿಕ ಎಲ್ಲ ಮುಕ್ತಜೀವರೂ ಮತ್ತು ಬ್ರಹ್ಮದೇವರೂ ಭಗವಂತನ ಉದರದಲ್ಲಿ ಪ್ರವೇಶ ಮಾಡುವರು. ಸೃಷ್ಟಿಕಾಲವು ಬರುವವರೆಗೆ ಶ್ರೀಹರಿಯ ಉದರದಲ್ಲಿಯೆ ಇದ್ದು ಅನಂತರ ಸೃಷ್ಟಿಯ ಪ್ರಾರಂಭದ ಕಾಲದಲ್ಲಿ ಅಲ್ಲಿಂದ ಹೊರಬೀಳುತ್ತಾರೆ.

ಪ್ರಳಯ ಕಾಲದಲ್ಲಿ ಭಗವಂತನ ಉದರದಲ್ಲಿದ್ದಾಗ ಆ ಜೀವರಿಗೆ ಯಾವುದೇ ತರಹದ ಭೋಗಾನುಭವ ಇಲ್ಲ. ಸೃಷ್ಟಿಕಾಲ ಪ್ರಾರಂಭವಾದ ಬಳಿಕ ಲಿಂಗದೇಹವು ಭಂಗವಾದ ಸುಚೇತನರೆಲ್ಲ ತಮ್ಮ ಸ್ವರೂಪ ದೇಹವನ್ನು ಧಾರಣ ಮಾಡಿಕೊಂಡು ಪರಮಾತ್ಮನ ಅಪ್ಪಣೆಯಂತೆ ಶ್ವೇತದ್ವೀಪಕ್ಕೆ ಹೋಗುವರು. ಅಲ್ಲಿಂದ ಶ್ವೇತದ್ವೀಪಕ್ಕೆ ಒಡೆಯನಾದ ಶ್ರೀ ವಿಷ್ಣುವಿನ ದರ್ಶನದಿಂದ ಆನಂದತುಂದಿಲರಾಗುತ್ತಾರೆ. ಅನಂತರ ಆ ಪರಮಾತ್ಮನ ಅಪ್ಪಣೆಯಂತೆ ವೈಕುಂಠ ಮತ್ತು ಉಳಿದ ಪುಣ್ಯ ಪ್ರದೇಶಗಳಲ್ಲಿ ವಾಸಮಾಡುತ್ತಾರೆ. ಈ ಸ್ಥಳಗಳಲ್ಲಿ ಜೀವರಿಗೆ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಎಂದು ನಾಲ್ಕು ವಿಧವಾದ ಮೋಕ್ಷಗಳು ಅವರವರ ಯೋಗ್ಯತಾನುಸಾರವಾಗಿ ಪ್ರಾಪ್ತವಾಗುತ್ತವೆ.

ಇಲ್ಲಿ ಎಲ್ಲ ಜೀವರಿಗೆ ಸ್ವರೂಪದೇಹದಿಂದಲೇ ಸುಖಾನುಭವ. ಸ್ವರೂಪ ದೇಹವು ಷೋಡಶಕಲೋಪೇತ ಲಿಂಗದೇಹದಂತೆ ಇರುತ್ತದೆ.

"ಸ್ವರೂಪಂ ಜಾಯತೇ ತೇಷಾಂ ಷೋಡಶ್ಯಾ ಕಲಯೈವತು"—ಎಂದು ಆಚಾರ್ಯರು ಗೀತಾಭಾಷ್ಯದಲ್ಲಿ ಅಪ್ಪಣೆ ಕೊಡಿಸಿದ್ದಾರೆ. ಹತ್ತು ಇಂದ್ರಿಯಗಳು, ಪಂಚಪ್ರಾಣಗಳು ಮತ್ತು ಮನಸ್ಸು ಕೂಡಿ ಹದಿನಾರು ಕಲೆಗಳು. ಇಂಥ ಸ್ವರೂಪದೇಹದಿಂದ ದಿವ್ಯಲೋಕಗಳಲ್ಲಿ ಭಗವತ್ಪ್ರಸಾದದಿಂದ ಜೀವರು ಸುಖಾನುಭವವನ್ನು ಮಾಡುತ್ತಾರೆ.

## ಚತುರ್ವಿಧ ಮುಕ್ತಿ

ಮುಕ್ತಿಯು ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಎಂದು ನಾಲ್ಕು ಬಗೆಯಾಗಿದೆ.

ಸಾಲೋಕ್ಯ ಮುಕ್ತಿ:—

ಕೆಲವರು ಇಲ್ಲಿ, ಹಲವರು ಅಂತರಿಕ್ಷದಲ್ಲಿ, ಸ್ವರ್ಗದಲ್ಲಿ ಕೆಲವರು, ಇನ್ನು ಕೆಲವರು ಮಹರ್ಲೋಕ, ಜನೋಲೋಕ, ಸತ್ಯಲೋಕ, ಕ್ಷೀರಸಾಗರ, ಮುಂತಾದ ತಾಣಗಳಲ್ಲಿ ನಿಂತು, ಭಗವಂತನ ದಿವ್ಯದರ್ಶನದ ಆನಂದವನ್ನು ಅನುಭವಿಸುವುದು ಸಾಲೋಕ್ಯ ಮುಕ್ತಿ.1

ಪರಮಾತ್ಮನಂತೆ ಚತುರ್ಬಾಹು, ಪೀತಾಂಬರ, ಮಣಿ, ಸುವರ್ಣಾಭರಣಗಳಿಂದ ಭೂಷಿತರಾಗಿ ಅವನಂಥ ಶರೀರದಿಂದ ಸುಖಾನುಭವಗೈಯುವರು.2

ಸಾಯುಜ್ಯ ಮುಕ್ತಿ:—

ಶ್ರೀಹರಿಯ ಶರೀರವನ್ನು ಪ್ರವೇಶ ಮಾಡಿ ಆ ಹರಿಯ ಕೈಯಿಂದ ಉಣ್ಣುವರು. ಹರಿಯ ಕಣ್ಣಿನಿಂದಲೇ ನೋಡುವರು. ಹರಿಯ ಪಾದದಿಂದಲೇ ನಡೆಯುವರು. ಇದು ಸಾಯುಜ್ಯ ಮೋಕ್ಷ ಪಡೆದವನ ಭಾಗ್ಯ.3

ಇಷ್ಟು ಹರಿಯ ದೇಹದಲ್ಲಿ ಪ್ರವೇಶ ಮಾಡಿದ್ದರೂ ಇವನ ಆನಂದ ಇವನಿಗೆ, ಅವನ ಆನಂದ ಅವನಿಗೆ. ಹರಿಯ ಆನಂದವಾವುದೂ ಆ ಜೀವನ ಅನುಭವಕ್ಕೆ ಬರುವುದಿಲ್ಲ. ತನ್ನ ಆನಂದವೇ ಅವನಿಗೆ ಅನುಭವಕ್ಕೆ ವಿಷಯವಾಗುವುದು. ಇದೇ ಮಾತನ್ನು ಆಚಾರ್ಯರು ಹೇಳಿದ್ದಾರೆ.

ಜೀವನಿಗೆ ಈಶನ ಅನಾದಿಭೋಗವು ಸರ್ವಥಾ ಇಲ್ಲವೆಂದು ಅವರು ತಿಳಿಸಿದ್ದಾರೆ. ಮೀನು ಸಮುದ್ರದಲ್ಲಿಯೇ ಹೊಕ್ಕು ಹರಿದಾಡುತ್ತಿದ್ದರೂ ಅದಕ್ಕೆ

---

1) "ಕೇಚಿದೇವ ಹಿ ಸಂತ್ಯತ್ರ ಹ್ಯಂತರಿಕ್ಷೇ ಚ ಕೇಚನ ।
ಕೇಚಿತ್ಸ್ವರ್ಗೇ ಮಹರ್ಲೋಕೇ ಜನೇ ತಪಸಿ ಚಾಪರೇ ।
ಕೇಚಿದಂತ್ಯೇ ಮಹಾಜ್ಞಾನಾ ಗಚ್ಛಂತಿ ಕ್ಷೀರಸಾಗರಮ್" ॥

2) "ಸರ್ವೇ ಚತುರ್ಬಾಹವಉನ್ಮಿಷನ್ಮಣಿಪ್ರವೇಕನಿಷ್ಕಾಭರಣಾಃ ಸುವರ್ಚಸಃ ॥"

3) "ಆದತ್ತೇ ಹರಿಹಸ್ತೇನ ಹರಿದೃಷ್ಟ್ಯೈವ ಪಶ್ಯತಿ ।
ಗಚ್ಛೇಚ್ಚ ಹರಿಪಾದೇನ ಮುಕ್ತಸ್ಯೈಷಾ ಸ್ಥಿತಿರ್ಭವೇತ್" ॥

ಸಾಗರದ ವಿಶಾಲತೆ, ಗಾಂಭೀರ್ಯ ಇಲ್ಲದಿರುವಂತೆ ಜೀವನಿಗೆ ಭಗವಂತನ ಗುಣ ವ್ಯಾಪ್ತಿ ಆನಂದಾನುಭೂತಿ ಇಲ್ಲ.1

ಮುಕ್ತಿಯಲ್ಲಿ ಆನಂದತಾರತಮ್ಯ ಹೀಗಿದೆ :—

ನೀರು ಹಾಲು ಮಿಶ್ರವಾದಾಗ ಎರಡೂ ಒಂದಾಗುವುದಿಲ್ಲ. ಒಂದರಲ್ಲೊಂದು ಸಂಶ್ಲಿಷ್ಟವಾಗಿರುತ್ತದೆ. ಪಿಶಾಚ ಅಥವಾ ದೇವತೆ ಹಿಡಿದ ಮನುಷ್ಯ ಪಿಶಾಚ ಅಥವಾ ದೇವತೆಯಿಂದ ಹಿಡಿದ ಮನುಷ್ಯನೇ ಹೊರತು ಪಿಶಾಚ ಮತ್ತು ದೇವತೆಯೇ ಆಗುವುದಿಲ್ಲ. ಹಾಗೆಯೇ ಮುಕ್ತಿಯಲ್ಲಿ ಜೀವರು ಮತ್ತು ಪರಮಾತ್ಮ ಒಂದಾಗುವುದಿಲ್ಲ. ಆದರೆ ಪರಮಾತ್ಮನ ಸಮೀಪದಲ್ಲಿ ಅವನ ಅಧೀನದಲ್ಲಿ ಅವನಿಂದ ಕೊಡಲ್ಪಟ್ಟ ಭೋಗಗಳನ್ನು ಅನುಭವಿಸಿಕೊಂಡು ಇರುತ್ತಾರೆ.2 "ತಸ್ಮಾತ್ ಮೋಕ್ಷೇ ಆನಂದತಾರತಮ್ಯಂ ಸಿದ್ಧಮ್."

೭. ಅಮಲಾಭಕ್ತಿಶ್ಚ ತತ್ಸಾಧನಂ (ನಿರ್ಮಲವಾದ ಭಕ್ತಿಯೇ ಮುಕ್ತಿಗೆ ಕಾರಣವಾಗಿದೆ).

ಮೋಕ್ಷಕ್ಕೆ ಮುಖ್ಯ ಸಾಧನವೆಂದರೆ ನಿರ್ಮಲವಾದ ಭಕ್ತಿ. ಭಕ್ತಿ ಎಂದರೆ ಸುದೃಢ ಸ್ನೇಹ. ಮೋಕ್ಷೋಪದಾಯಕವಾದ ಸಕಲ ಸಾಮಗ್ರಿಗಳಲ್ಲಿ ಭಕ್ತಿಯು ಅತ್ಯಂತ ಶ್ರೇಷ್ಠವಾಗಿದೆ.3

---

1) "ಮುಕ್ತಾಃ ಪ್ರಾಪ್ಯ ಪರಂ ವಿಷ್ಣುಂ ತದ್ಭೋಗಾನ್ ಲೇಶತಃ ಕ್ವಚಿತ್
ಬಹಿಷ್ಠಾನ್ ಭುಂಜತೇ ನಿತ್ಯಂ ನಾನಂದಾದೀನ್ ಕಥಂಚನ
—ಬ್ರಹ್ಮಸೂತ್ರ ಭಾಷ್ಯ

2) ನಿಃಶೇಷಗತದೋಷಾಣಾಂ ಬಹುಭಿರ್ಜನ್ಮಭಿರ್ಘನಃ ।
ಸ್ಯಾದಪರೋಕ್ಷೋ ಹಿ ಹರೇರ್ದ್ವೇಷೋಷ್ಯಾದಿ ತತಃ ಕುತಃ ॥
ಭವೇಯುರ್ಯದಿಚೇಷ್ಯಾದ್ಯಾಃ ಸಮೇಷ್ವಪಿ ಕುತೋ ನ ಭವೇತ್ ॥
ತಸ್ಮಾತ್ಸಾಯುಜ್ಯಂ ನಾಮ ಕ್ಷೀರನೀರವದನ್ಯದೇಹಪ್ರವಿಷ್ಟಗ್ರಹದೇವತಾದಿವಚ್ಚ ಸಂಶ್ಲೇಷಮಾತ್ರಂ ನ ತ್ವೈಕ್ಯಂ.
—ನ್ಯಾಯಾಮೃತ ಕುಂಭಕೋಣ ಮುದ್ರಣ ಪುಟ 646, ಅನಂಕ ಪಂಕ್ತಿ 10

3) "ಸಾಧನೇಭ್ಯೋಽಧಿಕಾ ಭಕ್ತಿರ್ನೈವಾನ್ಯತ್ತಾದೃಶಂ ಕ್ವಚಿತ್ ।
ಭಕ್ತಿಶ್ಚೈವ ಹರಾವೇವ ಮುಖ್ಯಾಽನ್ಯತ್ರ ಯಥಾಕ್ರಮಮ್"॥
—ಅನುವ್ಯಾಖ್ಯಾನ—3—3—28

ಅನುವ್ಯಾಖ್ಯಾನದಲ್ಲಿ ಆಚಾರ್ಯರು ಭಕ್ತಿಯ ಆಧಿಕ್ಯವನ್ನು ಹೇಳಿ ಅದು ಶ್ರೀಹರಿಯಲ್ಲಿ ಮುಖ್ಯವಾಗಿರಬೇಕು. ಇತರ ದೇವತೆಗಳಲ್ಲಿಯೂ ತಾರತಮ್ಯಾನುಸಾರವಾಗಿ ಇರಬೇಕು. ಗುರುಗಳಲ್ಲಿಯೂ ಕ್ರಮಾನುಸಾರ ಇರಬೇಕು.

"ಯಥಾ ದೇವೇ ತಥಾ ಗುರೌ"—ಎಂದು ಭಾಷ್ಯದಲ್ಲಿ ಉದಾಹರಿಸಿದ್ದಾರೆ.

ಯಾವನ ಭಕ್ತಿಗೆ ಮೆಚ್ಚಿ ಭಗವಂತ ಅನುಗ್ರಹಗೈಯುವನೋ ಅವನಿಗೆ ಮಾತ್ರ ಭಗವದಪರೋಕ್ಷವಾಗಿ ಸ್ವರೂಪದೇಹದಿಂದ ಅನುಭವಿಸಬೇಕಾದ ಮೋಕ್ಷಸುಖ ಪ್ರಾಪ್ತವಾಗುತ್ತದೆ ಎಂಬ ವೇದವಚನವು ಮುಕ್ತಿಗೆ ಭಕ್ತಿ ಪ್ರಾಪ್ಯತ್ವವನ್ನೇ ಹೇಳುತ್ತದೆ.1 ಆದಕ್ಕಾಗಿ ಯೋಗ್ಯವಾದ ಉಪಾಸನೆಯನ್ನು ಮಾಡಬೇಕು.

'ಯೋಗ್ಯೋಪಾಸಾಂ ವಿನಾ ನೈವ ಮುಕ್ತಿಃ ಕಸ್ಯಾಪಿ ಸೇತ್ಸ್ಯತಿ'—ಎಂದು ಅನುವ್ಯಾಖ್ಯಾನದಲ್ಲಿ ಯೋಗ್ಯತಾನುರೂಪವಾದ ಭಕ್ತಿ ಉಪಾಸನೆಗಳೇ ಮೋಕ್ಷ ಜನಕವಾಗುತ್ತವೆ ಎಂದು ಆಚಾರ್ಯರು ಅಪ್ಪಣೆ ಕೊಡಿಸಿದ್ದಾರೆ.

ಈ ಭಕ್ತಿವ್ಯಾಖ್ಯೆಯನ್ನು ಸ್ವಯಂ ಶ್ರೀ ಮಧ್ವಾಚಾರ್ಯರೇ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಚೆನ್ನಾಗಿ ತಿಳಿಸಿದ್ದಾರೆ.2

ಭಗವಂತನ ಗುಣಗಳನ್ನು ಅರಿತು ಅವನ ಮಹಾಮಹಿಮೆಗಳನ್ನು ತಿಳಿದುಕೊಂಡು ಅವನದಲ್ಲಿ ನಿರತಿಶಯವಾದ ಪ್ರೇಮವನ್ನು ಮಾಡುವುದೇ ಭಕ್ತಿ. ಅದರಿಂದಲೇ ಮುಕ್ತಿ. ಇದೇ ಅಭಿಪ್ರಾಯವನ್ನು ಶ್ರೀ ಜಯತೀರ್ಥರು ಇನ್ನೂ ಹಿಗ್ಗಿಸಿ ನಿಚ್ಚಳವಾಗಿ ಶ್ರೀಮನ್ನ್ಯಾಯಸುಧೆಯಲ್ಲಿ ಹೇಳಿದ್ದಾರೆ.

ಪರಮಾತ್ಮನ ಗುಣಗಳಿಗೆ ಇತಿಮಿತಿ ಇಲ್ಲ. ಅವು ಅಸಂಖ್ಯ. ಅವನು

---

1) "ಯಮೇವೈಷ ವೃಣುತೇ ತೇನ ಲಭ್ಯಃ
ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ ।"

2) ಮಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಽಧಿಕಃ ।
ಸ್ನೇಹೋ ಭಕ್ತಿರಿತಿ ಪ್ರೋಕ್ತಸ್ತಯಾ ಮುಕ್ತಿರ್ನಚಾನ್ಯಥಾ ॥
ಮ॥ಭಾ॥ತಾ॥ನಿ॥ ಸರ್ಗ—1 ಶ್ಲೋಕ 86

ಜ್ಞಾನಪೂರ್ವಃ ಪರಃ ಸ್ನೇಹೋ ಭಕ್ತಿರಿತ್ಯಭಿಧೀಯತೇ ।
ಇತ್ಯಾದಿ ವೇದವಚನಂ ಸಾಧನಪ್ರವಿಧಾಯಕಂ ॥

ದೋಷಾತಿದೂರ. ಆವನು ಕಲ್ಯಾಣ ಗುಣಗಳ ಒಂದು ಖನಿ ಇದ್ದಂತೆ. ಅಂಥ ಅಗಣಿತಗುಣಗಳ ಒಂದು ನಿಧಿಯೆಂದು ತಿಳಿದು ಆ ಪರಮೇಶ್ವರನಲ್ಲಿ ಪ್ರೀತಿ ಮಾಡಬೇಕು. ಸಾವಿರ ವಿಘ್ನಗಳು ಬಂದರೂ ಆ ಪ್ರೇಮಕ್ಕೆ ಚ್ಯುತಿ ಬರಬಾರದು. ತನ್ನ ಆತ್ಮ ಆತ್ಮೀಯರು ಮತ್ತು ತನಗೆ ಅತ್ಯಂತ ಪ್ರಿಯವಾದ ಇತರ ವಸ್ತುಗಳು ಇವೆಲ್ಲವುಗಳಿಗಿಂತ ಅನಂತಪಟ್ಟು ಹೆಚ್ಚಿನದಾಗಿರಬೇಕು ಆ ಪ್ರೇಮ. ಇಂಥ ನಿರಂತರ ಅಚ್ಛಿನ್ನ ಪ್ರೇಮದ ಪ್ರವಾಹವೇ ಭಕ್ತಿ—ಎಂದಿದ್ದಾರೆ.1

ಎಷ್ಟು ಸುಂದರವಾಗಿದೆ ಈ ಭಕ್ತಿಯ ವ್ಯಾಖ್ಯೆ. ಇದಕ್ಕಿಂತ ಹೆಚ್ಚು ಹಿಂಜುವುದಕ್ಕೆ ಸಾಧ್ಯವೇ ಇಲ್ಲ. ಅದೇ ಶ್ರೀಮನ್ನ್ಯಾಯಸುಧಾಕಾರರ ವೈಶಿಷ್ಟ್ಯ.

ಈ ಭಕ್ತಿಯು ಸಾಧನ ಭಕ್ತಿ-ಸಾಧ್ಯ ಭಕ್ತಿ ಎಂದು ಎರಡು ವಿಧವಾಗಿದೆ. ಎರಡೂ ವಿಧವಾದ ಭಕ್ತಿಯ ಸ್ವರೂಪವನ್ನು ಅನುವ್ಯಾಖ್ಯಾನದಲ್ಲಿ ಆಚಾರ್ಯರು ತಿಳಿಸಿದ್ದಾರೆ.

ಭಕ್ತಿಯಿಂದ ಜ್ಞಾನ, ಅದರಿಂದ ನಿಶ್ಚಲಭಕ್ತಿ, ಅದರಿಂದ ಪರಮಾತ್ಮನ ಸಾಕ್ಷಾತ್ಕಾರ, ಅದರಿಂದ ಅಪರೋಕ್ಷಜ್ಞಾನ, ಅಪರೋಕ್ಷಜ್ಞಾನದಿಂದ ಪರಿಪಕ್ವಭಕ್ತಿ, ಅದರಿಂದ ಭಗವಂತನ ಪ್ರಸಾದ, ಅದರಿಂದ ಮೋಕ್ಷ. ಅನಂತ ರವೂ ಭಕ್ತಿ. ಆ ಭಕ್ತಿಯು ಮಾತ್ರ ಸುಖರೂಪ—ಎಂಬುದಾಗಿ ಆಚಾರ್ಯರು ಹೇಳಿದ್ದಾರೆ.2

ಮೋಕ್ಷದವರೆಗೆ ಎಲ್ಲ ಹಂತಗಳಲ್ಲಿಯೂ ಜೀವರು ತಮ್ಮ ಯೋಗ್ಯತಾನು ಸಾರೇಣ ಉಪಾಸನೆ ಮಾಡಬೇಕು. ಲಕ್ಷ್ಮೀದೇವಿಯು ನಿತ್ಯ ಮುಕ್ತಳಾದರೂ ಅನಂತಗುಣಗಳಿಂದ ಪರಮಾತ್ಮನ ಉಪಾಸನೆಯನ್ನು ಮಾಡುತ್ತಾಳೆ. ಬ್ರಹ್ಮ ದೇವರೂ ಕೂಡ ವೇದೋಕ್ತಸರ್ವಗುಣಗಳಿಂದ ಪರಮಾತ್ಮನ ಉಪಾ ಸನೆಯನ್ನು ಮಾಡುತ್ತಾರೆ. ಆದರೆ ಮನುಷ್ಯರು ಮಾತ್ರ ಸತ್, ಚಿತ್, ಆನಂದ

---

1) ನಿರವಧಿಕಾನಂತಾನವದ್ಯಕಲ್ಯಾಣಗುಣತ್ವಜ್ಞಾನಪೂರ್ವಕಃ
ಸ್ವಾತ್ಮಾತ್ಮೀಯಸಮಸ್ತವಸ್ತುಭ್ಯಃ ಅನೇಕ ಗುಣಾಧಿಕಃ
ಸಹಸ್ರೇಣಾಪ್ಯಪ್ರತಿಬದ್ಧಃ ನಿರಂತರಪ್ರೇಮಪ್ರವಾಹಃ"

2) ಭಕ್ತ್ಯಾ ಜ್ಞಾನಂ ತತೋ ಭಕ್ತಿಸ್ತತೋದೃಷ್ಟಿಸ್ತತಶ್ಚ ಸಾ ।
ತತೋ ಮುಕ್ತಿಸ್ತತೋ ಭಕ್ತಿಃ ಸ್ಯೈವ ಸ್ಯಾತ್‌ಸುಖರೂಪಿಣೀ ॥

ಆತ್ಮ ಎಂದು ಚತುರ್ಗಣೋಪಾಸನೆಯನ್ನು ಮಾಡಬೇಕೆಂದು ಆಚಾರ್ಯರು ತಿಳಿಸಿದ್ದಾರೆ.1

ಶ್ರುತಿಸ್ಮೃತಿ ಪುರಾಣಗಳಲ್ಲಿಯೂ, ಮತ್ತು ಭಗವದ್ಗೀತೆಯ ಅನೇಕ ಸಂದರ್ಭಗಳಲ್ಲಿ ಶ್ರೀಕೃಷ್ಣನು ಆ ಭಕ್ತಿಯ ಹಿರಿಮೆಯನ್ನು ಹೇಳಿದ್ದಾನೆ.2

ಅನನ್ಯವಾದ ಭಕ್ತಿಯಿಂದಲೇ ಆ ಪರಮಾತ್ಮನ ಜ್ಞಾನ ಹಾಗೂ ಅವನ ಸಾಕ್ಷಾತ್ಕಾರ ಮತ್ತು ಮೋಕ್ಷಾದಿ ಪ್ರಾಪ್ತಿಯು ಆಗುವುದು—ಎಂದಿದ್ದಾನೆ.

ಇದರಂತೆ ಭಾಗವತಾದಿ ಗ್ರಂಥಗಳಲ್ಲಿಯೂ ಹೇಳಿದೆ.

ಶ್ರೀಹರಿಯಲ್ಲಿ ಮಾಡಿದ ನಿಷ್ಕಾಮಭಕ್ತಿಯೇ ಮುಕ್ತಿಗೆ ಕಾರಣವಾಗುತ್ತದೆ. ಅದು ಬೆಂಕಿಯು ಒಣ ಸೌದೆಯನ್ನು ಸುಡುವಂತೆ ಲಿಂಗದೇಹವನ್ನು ನಾಶ ಮಾಡುತ್ತದೆ.3

ಭಕ್ತಿಯಿಂದ ಪ್ರಸನ್ನನಾದ ಭಗವಂತನು ಜ್ಞಾನವನ್ನೂ ತನ್ನ ಸಾಕ್ಷಾತ್ಕಾರವನ್ನೂ ಕೊನೆಗೆ ಮುಕ್ತಿಯನ್ನೂ ಕರುಣಿಸುತ್ತಾನೆ—ಎಂದು ಅನೇಕ ವಚನಗಳು ಹೇಳಿವೆ.4

---

1) ಸಚ್ಚಿದಾನಂದಆತ್ಮೇತಿ ಮಾನುಷ್ಯೈಸ್ತು ಸುರೇಶ್ವರೈಃ ।
ಯಥಾಕ್ರಮಂ ಬಹುಗುಣೈರ್ಬ್ರಹ್ಮಣಾತ್ವಖಿಲೈರ್ಗುಣೈಃ ॥"

2) "ಭಕ್ತ್ಯಾತ್ವನನ್ಯಯಾ ಶಕ್ಯ ಅಹಮೇವಂ ವಿಧೋಽರ್ಜುನ ।
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥"

3) "ಅನಿಮಿತ್ತಾ ಭಗವತಿ ಭಕ್ತಿಸ್ಸಿದ್ಧೇರ್ಗರೀಯಸೀ ।
ಜರಯತ್ಯಾಶು ಯಾ ಕೋಶಂ ನಗೀರ್ಣಮನಿಲೋ ಯಥಾ ॥"

4) "ಭಕ್ತ್ಯಾ ಪ್ರಸನ್ನೋ ಭಗವಾನ್ ದದ್ಯಾದ್‌ಜ್ಞಾನಮನಾಕುಲಂ ।
ತಯೈವ ದರ್ಶನಂ ಯಾತಃ ಪ್ರದದ್ಯಾನ್ಮುಕ್ತಿಮೇತಯಾ ॥"

5) ಅಭ್ಯಾಸಪಾಟವಾತ್‌ಸ್ನೇಹಾದಶ್ರಮತ್ವಾದುಪಾಸನಾ ।
ಭಕ್ತಿಶ್ಚ ಸುಖರೂಪೈವ ಮುಕ್ತಾನಾಂ ನ ತು ಸಾಧನಂ ॥
ಸಾಧನಾನಿ ತು ಸರ್ವಾಣಿ ಭಕ್ತಿಜ್ಞಾನಪ್ರವೃದ್ಧಯೇ ।
ನೈವಾನ್ಯಸಾಧನಾ ಭಕ್ತಿಃ ಫಲರೂಪಾಹಿ ಸಾ ಯತಃ ॥
ಸರ್ವಸ್ಮಾದುತ್ತಮ ಇತಿ ಸಮ್ಯಕ್‌ಸ್ನೇಹತಯಾ ಮತಃ ।
ಸುಸ್ಥಿರಾ ಭಕ್ತಿರುದ್ದಿಷ್ಟಾ ತಯಾ ಮುಕ್ತಿರ್ನಚಾನ್ಯಥಾ ॥

ಈ ವಚನಗಳು "ಭಕ್ತ್ಯೈಕಲಭ್ಯಃ ಪುರುಷೋತ್ತಮೋऽಸಿ"—ಎಂಬ ಬ್ರಹ್ಮ ದೇವರ ಪಂಚರಾತ್ರೋಕ್ತಿಯನ್ನೇ ಪುಷ್ಟೀಕರಿಸುತ್ತವೆ. ಈ ಭಕ್ತಿಯು ಭಾಗವತ ದಲ್ಲಿ ಹೇಳಿದಂತೆ—

ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಪೂಜೆ, ನಮಸ್ಕಾರ, ಕೈಂಕರ್ಯ, ಸ್ನೇಹಾತಿಶಯ ಮತ್ತು ಆತ್ಮಾರ್ಪಣೆ ಎಂದು ಒಂಭತ್ತು ವಿಧವಾಗಿದೆ. ಇಂಥ ಭಕ್ತಿ ಒಂದಿದ್ದರೆ ಸಾಕು. ಭಗವಂತ ಕುಲ, ಜಾತಿ, ಧನ, ರೂಪ ಒಂದೂ ನೋಡುವುದಿಲ್ಲ.1

ಐಶ್ವರ್ಯ, ಕುಲೀನತೆ, ಸೌಂದರ್ಯ, ತಪಸ್ಸು, ಅಧ್ಯಯನ, ತೇಜಸ್ಸು, ಪ್ರಭಾವ, ಪರಾಕ್ರಮ, ಬುದ್ಧಿಶಕ್ತಿ ಮುಂತಾದ ಸಾಧನಗಳಿಂದ ಪರಮಾತ್ಮನು ಒಲಿಯುವುದಿಲ್ಲ. ಅವನನ್ನು ಮೆಚ್ಚಿಸಲಿಕ್ಕೆ ಒಂದೇ ಒಂದು ಸಾಧನವೆಂದರೆ ಶುದ್ಧವಾದ ಭಕ್ತಿ. ಗಜೇಂದ್ರನಲ್ಲಿ ಅಂಥ ಭಕ್ತಿಯ ಹೊರತು ಬೇರೆ ಏನಿತ್ತು ? ಅದಕ್ಕೇ ಹರಿ ಅವನಿಗೆ ಒಲಿದು ಉದ್ಧರಿಸಿದ.2

ಭಗವತ್ಪ್ರೇಮರೂಪವಾದ ಭಕ್ತಿಯು ಒಂಬತ್ತು ವಿಧವಾಗಿದ್ದಂತೆ ಭಗವಂತನ ದ್ವೇಷವೂ ನವವಿಧವಾಗಿದೆ.

ಜೀವಬ್ರಹ್ಮೈಕ್ಯಜ್ಞಾನ, ಬ್ರಹ್ಮನ ಸರ್ವಜ್ಞತ್ವಾದಿ ಗುಣಗಳು ಮಿಥ್ಯೆ ಎಂಬ ನಿರ್ಗುಣತ್ವ ಜ್ಞಾನ, ಪರಬ್ರಹ್ಮನಲ್ಲಿ ಅಪೂರ್ಣತ್ವ ಬುದ್ಧಿ, ಬ್ರಹ್ಮ ವಿಷ್ಣು ಶಿವರು ಸಮಾನರೆಂಬ ಭ್ರಾಂತಿ, ಇತರ ದೇವತೆಗಳು ಹರಿಗಿಂತ ಹಿರಿಯರೆಂಬ ಮೌಢ್ಯ, ವಿಷ್ಣುವಿನ ವಾಸುದೇವಾದಿ ರೂಪಗಳು ಅವನಿಂದ ಭಿನ್ನ ಎಂಬ ತಿಳಿವಳಿಕೆ, ಮಾನವರನ್ನು ವಿಷ್ಣುವೆಂದು ಬಗೆಯುವುದು, ಹರಿಯ ಭಕ್ತಿಯನ್ನು

---

1) ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥

2) ಮನ್ಯೇ ಧನಾಭಿಜನರೂಪತಪಃಶ್ರುತಸ್ತೇಜಃಪ್ರಭಾವಬಲ
ಪೌರುಷಬುದ್ಧಿಯೋಗಾಃ ।
ನಾರಾಧನಾಯ ಹಿ ಭವಂತಿ ಪರಸ್ಯ ಪುಂಸಃ ಭಕ್ತ್ಯಾ ತುತೋಷ
ಭಗವಾನ್ ಗಜಯೂಥಪಾಯ ॥
—ಭಾಗವತ, 7-9-9

ದ್ವೇಷ ಮಾಡುವುದು, ಭಗವಂತನ ಹಿರಿಮೆಯನ್ನು ತಿಳಿಸಿಕೊಡುವ ವೇದಶಾಸ್ತ್ರಗಳು ಅಪ್ರಮಾಣ ಎಂದು ನಿಂದಿಸುವುದು—ಇವು ಒಂಬತ್ತು ಭಗವಂತನ ದ್ವೇಷಗಳಾಗಿವೆ.1

ಇಂಥ ನವವಿಧವಾದ ಭಗವದ್ವೇಷವನ್ನು ಮಾಡದೆ ಮೊದಲು ಹೇಳಿದ ನವವಿಧ ಭಗವದ್ಭಕ್ತಿಯನ್ನು ಮಾಡಿದರೆ ಮುಕ್ತಿಯು ಕರತಲಾಮಲಕವಾಗುತ್ತದೆ. 'ಯಥಾ ದೇವೇ ತಥಾ ಗುರೌ' ಹರಿ ಗುರುಗಳಲ್ಲಿಯೂ ಯಥಾ ಯೋಗ್ಯವಾದ ಭಕ್ತಿಯನ್ನು ಮಾಡಲೇಬೇಕೆಂದು ಶಾಸ್ತ್ರಗಳು ತಿಳಿಸುತ್ತವೆ. ಆದುದರಿಂದ ಗುರುಗಳಲ್ಲಿ ಭಕ್ತಿ ಮಾಡಲೇಬೇಕು.

ಮಾನವನ ನಿಜವಾದ ಸ್ವರೂಪೋದ್ಧಾರಕಜಗದ್ಗುರುಗಳೆಂದರೆ ಶ್ರೀ ವಾಯುದೇವರೇ ಅವರು ಜೀವೋತ್ತಮರು. ಅವರ ಮಹಿಮೆಯು ಛಾಂದೋಗ್ಯ, ಐತರೇಯ, ಷಟ್ಪ್ರಶ್ನಾದಿ ಉಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿದೆ. ಅಂಥ ವಾಯುದೇವರೇ ಮಧ್ವಾಚಾರ್ಯರಾಗಿ ಅವತಾರ ಮಾಡಿದ್ದಾರೆಂದು ಬಳಿತ್ಥಾಸೂಕ್ತ, ಪವಮಾನಸೂಕ್ತ, ಮುಂತಾದ ವೇದಮಂತ್ರಗಳಲ್ಲಿ ಸ್ಪಷ್ಟವಾಗಿ ಸಾರಿದೆ. ಅಂಥ ಮಂತ್ರಪ್ರತಿಪಾದ್ಯರಾದ ಮಧ್ವಗುರುಗಳಲ್ಲಿಯೂ ಅವರ ಶಾಸ್ತ್ರದಲ್ಲಿಯೂ ಭಕ್ತಿಮಾಡಿ ಶ್ರದ್ಧೆಯಿಂದ ಅಭ್ಯಾಸ ಮಾಡಿ ಉದ್ಧೃತರಾಗಬೇಕು.

## ೮. ಅಕ್ಷಾದಿತ್ರಿತಯಂ ಪ್ರಮಾಣಂ (ಪ್ರತ್ಯಕ್ಷ ಅನುಮಾನ ಆಗಮ ಮೂರೂ ಪ್ರಮಾಣಗಳು)

ಪ್ರತ್ಯಕ್ಷ, ಅನುಮಾನ ಮತ್ತು ಆಗಮ ಇವು ಮೂರೂ ಮಧ್ವಾಚಾರ್ಯರು ಪ್ರಮಾಣಗಳೆಂದು ಹೇಳಿದ್ದಾರೆ. ಇದೇ ಮಾತನ್ನು ಆದಿಸ್ಮೃತಿಕಾರರಾದ ಮನು ಮಹರ್ಷಿಗಳೂ ಹೇಳಿದ್ದಾರೆ 2

---

1) ಜೀವಾಭೇದೋ ನಿರ್ಗುಣತ್ವಂ ಅಪೂರ್ಣಗುಣತಾ ತಥಾ ।
ಸಮಾಧಿಕ್ಯೇ ತದನ್ಯೇಷಾಂ ಭೇದಸ್ತದ್ಗತ ಏವ ಚ ॥
ಪ್ರಾದುರ್ಭಾವವಿಪರ್ಯಾಸಸ್ತದ್ಭಕ್ತದ್ವೇಷ ಏವ ಚ ॥
ತತ್ಪ್ರಮಾಣಸ್ಯ ನಿಂದಾ ಚ ದ್ವೇಷಾ ಏತೇ ಬಲಾ ಮತಾಃ ॥

2) ಪ್ರತ್ಯಕ್ಷಮನುಮಾನಂ ಚ ಶಾಸ್ತ್ರಂ ಚ ವಿವಿಧಾಗಮಂ ।
ತ್ರಯಂ ಸುವಿದಿತಂ ಕಾರ್ಯಂ ಸರ್ವಸಿದ್ಧಿಮಭೀಪ್ಸತಿ ॥

ಧರ್ಮದ ಸಿದ್ಧಿಯು ಆಗಬೇಕೆಂದು ಬಯಸುವವರು ಈ ಮೂರೂ ಪ್ರಮಾಣಗಳನ್ನು ಚೆನ್ನಾಗಿ ತಿಳಿದುಕೊಳ್ಳಬೇಕು ಎಂದು ಅಪ್ಪಣೆ ಕೊಡಿಸಿದ್ದಾರೆ.

ಮಾಯಾವಾದಿಗಳು ಪ್ರತ್ಯಕ್ಷವನ್ನು ಅಲ್ಲಗಳೆಯುತ್ತಾರೆ. ನಾಸ್ತಿಕರು ಯುಕ್ತಿಗಳನ್ನು ಅಪ್ರಮಾಣ ಎಂದು ಹೇಳುತ್ತಾರೆ. ಆಚಾರ್ಯರು ಮಾತ್ರ ಇವು ಮೂರೂ ಪ್ರಮಾಣ ಎಂದು ಸಿದ್ಧಾಂತ ಮಾಡಿದ್ದಾರೆ. ಇದೇ ಶ್ರೀ ಕೃಷ್ಣನಿಗೆ ಸಮ್ಮತವಾದ ಸಿದ್ಧಾಂತ. ಗೀತೆಯಲ್ಲಿ 'ದಿವ್ಯಂ ದದಾಮಿ ತೇ ಚಕ್ಷುಃ' ಎಂದು ಹೇಳಿದೆ. ಅರ್ಜುನನಿಗೆ ತನ್ನ ವಿಶ್ವರೂಪವನ್ನು ನೋಡಲಿಕ್ಕಾಗಿ ದಿವ್ಯ ಚಕ್ಷುಸ್ಸನ್ನು ಕೊಡುತ್ತೇನೆ ಎಂದು ಶ್ರೀ ಕೃಷ್ಣನು ಹೇಳುವಾಗ ಪ್ರತ್ಯಕ್ಷವು ದಿವ್ಯ ಎಂಬ ಶಬ್ದದಿಂದ ಪ್ರಮಾಣ ಭೂತವಾದದ್ದು ಎಂದು ಸಾಧಿಸಿದ್ದಾನೆ. ಅಲ್ಲದೆ,

"ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತಂ"

ಎಂಬ ವಚನದಲ್ಲಿ ಹೇತು ಅರ್ಥಾತ್ ಯುಕ್ತಿ ಪ್ರಮಾಣವೆಂದು ಸಾರಿದ್ದಾನೆ. ಮತ್ತು 'ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ' ಎಂಬ ವಾಕ್ಯದಿಂದ ಶಾಸ್ತ್ರಕ್ಕೆ ಪ್ರಮಾಣ್ಯವನ್ನು ಸುಸ್ಪಷ್ಟವಾಗಿ ತಿಳಿಯಪಡಿಸಿದ್ದಾನೆ.

ಈ ಮೂರು ಪ್ರಮಾಣಗಳಲ್ಲಿ ಅನುಮಾನವು ಸ್ವತಂತ್ರ ಪ್ರಮಾಣವಲ್ಲ. 'ಅನುಸೃತ್ಯ ಮಾನಂ ಅನುಮಾನಂ' ಅಂದರೆ ಅದಕ್ಕೆ ಪ್ರತ್ಯಕ್ಷ ಮತ್ತು ಆಗಮಗಳ ಬೆಂಬಲವಿದ್ದರೆ ಮಾತ್ರ ಅದು ಪ್ರಮಾಣವಾಗಬಲ್ಲದು. ಸ್ವತಂತ್ರಅನುಮಾನಕ್ಕೆ ಪ್ರಾಮಾಣ್ಯವಿಲ್ಲ. 'ನಾನುಮಾ ಕಾಮುಚಾರಿಣೀ' ಎಂದು ಆಚಾರ್ಯರು, ಅನುಮೆಯು, ಕಾಮುಚಾರಿಣಿಯಾದುದರಿಂದ ತನಿಗೆ ತಾನೇ ಪ್ರಮಾಣವಾಗಲಾರದೆಂದು ಸ್ಪಷ್ಟಪಡಿಸಿದ್ದಾರೆ.1

ಇಂಥ ಅನೇಕ ವಾಕ್ಯಗಳಿಂದ ಕೇವಲ ಅನುಮಾನಕ್ಕೆ ಪ್ರಮಾಣವನ್ನು ನಿರಾಕರಣಮಾಡಿ ಪ್ರತ್ಯಕ್ಷಆಗಮಾದ್ಯನುಗ್ರಹೀತವಾದ ಯುಕ್ತಿಗೆ ಪ್ರಾಬಲ್ಯವನ್ನು ಹೇಳಿದ್ದಾರೆ.

ಪ್ರತ್ಯಕ್ಷದ ಲಕ್ಷಣವನ್ನು ಶ್ರೀ ಮಧ್ವಾಚಾರ್ಯರು ಪ್ರಮಾಣಲಕ್ಷಣ ಗ್ರಂಥದಲ್ಲಿ

---

1) "ಆಗಮಾನುಗ್ರಹಾಭಾವೇ ನ ತರ್ಕಃ ಸ್ಯಾತ್‌ಪ್ರತಿಷ್ಠಿತಃ ।
ಅಕ್ಷಜಾಗಮಮೂಲಸ್ಯ ಸ್ಯಾದೇವಾಸ್ಯ ಪ್ರತಿಷ್ಠಿತಿಃ ॥
ಪ್ರತ್ಯಕ್ಷಮಾಗಮೋ ವಾಪಿ ಭವೇದ್ಯತ್ರ ನಿಯಾಮಕಃ ।
—ಅನುವ್ಯಾಖ್ಯಾನ

'ನಿರ್ದೋಷಾರ್ಥೇಂದ್ರಿಯಸನ್ನಿಕರ್ಷಃ ಪ್ರತ್ಯಕ್ಷಂ' ಎಂದು ಹೇಳಿದ್ದಾರೆ. ನಿರ್ದುಷ್ಟವಾದ ಇಂದ್ರಿಯ ನಿರ್ದುಷ್ಟವಾದ ವಿಷಯ ಇವೆರಡರ ಸಂಬಂಧವೇ ಪ್ರತ್ಯಕ್ಷ ಎಂದು ಹೇಳಿದ್ದಾರೆ.

ಅದರಂತೆ ಅನುಮಾನವನ್ನು ಕೂಡ 'ನಿರ್ದೋಷೋಪಪತ್ತಿರನುಮಾನಂ' ಅಂದರೆ ನಿರ್ದೋಷವಾದ ಉಪಪತ್ತಿಯುಕ್ತಿಯೇ ಅನುಮಾನ ಎಂದು ಅಪ್ಪಣೆ ಕೊಡಿಸಿದ್ದಾರೆ.

ಆಗಮ ಎಂದರೆ ಶಾಸ್ತ್ರ. 'ಆ ಸಮ್ಯಕ್ ಗಮ್ಯತೇ ಜ್ಞಾಯತೇ'. ಇವುಗಳಿಂದ ಪರಮಾತ್ಮನ ಸ್ವರೂಪವು ಯಥಾವತ್ತಾಗಿ ತಿಳಿದುಕೊಳ್ಳಲ್ಪಡುವುದರಿಂದ ಅವುಗಳಿಗೆ ಆಗಮ ಎಂದು ಹೆಸರು. 'ನಿರ್ದೋಷಶಬ್ದಃ ಆಗಮಃ' ಭಗವಂತನನ್ನು ತಿಳಿಸಿಕೊಡುವ ನಿರ್ದುಷ್ಟಶಬ್ದಗಳೇ ಆಗಮ.1

ಅದು ಪೌರುಷೇಯ ಅಪೌರುಷೇಯ ಎಂದು ಎರಡು ವಿಧವಾಗಿದೆ. ವೇದಗಳು ಅಪೌರುಷೇಯ ಮತ್ತು ನಿತ್ಯ. ಸ್ಮೃತಿ, ಇತಿಹಾಸ ಪುರಾಣಾದಿಗಳು ಪೌರುಷೇಯ ಮತ್ತು ಅನಿತ್ಯ. ಇವೇ ಪ್ರಮಾಣಗಳು.

ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ, ಮಹಾಭಾರತ, ಪಂಚರಾತ್ರ, ಮೂಲರಾಮಾಯಣ, ಇವನ್ನು ಅನುಸರಿಸಿರುವ ಇತರ ಗ್ರಂಥಗಳು ಶಾಸ್ತ್ರವೆನಿಸುತ್ತವೆ. ಮತ್ತು ಇವಕ್ಕೆ ಅನುಕೂಲವಾದುದ್ದೆಲ್ಲವೂ ಶಾಸ್ತ್ರ ಪ್ರಮಾಣ. ಇದಕ್ಕೆ ಹೊರತಾದುದ್ದೆಲ್ಲ ಅಪ್ರಮಾಣ.2 ಅದು ಅಡ್ಡದಾರಿ —ಎಂದು ನಿಸ್ಸಂಶಯವಾಗಿ ತೋರಿಸಿಕೊಟ್ಟಿದ್ದಾರೆ.3

---

1) ೧) ಆಗಮ್ಯತೇಽವಗಮ್ಯತೇಽನೇನೇತ್ಯಾಗಮಃ.
೨) ಆಸಮಂತಾತ್ಸರ್ವಂ ಗಮ್ಯತೇಽನೇನೇತ್ಯಾಗಮಃ,
—(ನ್ಯಾಯಸುಧಾ-ಕುಂಭಕೋಣ ಮುದ್ರಣ ಪುಟ 80, 248, 549)

2) ಋಗ್‌ಯಜುಸ್ಸಾಮಾಥರ್ವಾಶ್ಚ ಭಾರತಂ ಪಂಚರಾತ್ರಕಂ ।
ಮೂಲರಾಮಾಯಣಂ ಚೈವ ಶಾಸ್ತ್ರಮಿತ್ಯಭಿಧೀಯತೇ ॥
ಯಚ್ಚಾನುಕೂಲಮೇತಸ್ಯ ತಚ್ಚ ಶಾಸ್ತ್ರಂ ಪ್ರಕೀರ್ತಿತಂ ।
ಅತೋಽನ್ಯೋ ಗ್ರಂಥವಿಸ್ತಾರೋ ನೈವ ಶಾಸ್ತ್ರಂ ಕುವರ್ತ್ಮ ತತ್ ॥
—ಅನುವ್ಯಾಖ್ಯಾನ

3) ಸಾತ್ವಿಕ, ರಾಜಸ, ತಾಮಸ ಪುರಾಣಗಳು—

(ಮುಂದಿನ ಪುಟಕ್ಕೆ)

ಪ್ರಮಾಣಮೂರ್ಧನ್ಯವಾದ ವೇದವು ಅಪೌರುಷೇಯವೂ ನಿತ್ಯವೂ ಆಗಿದೆ. ನೈಯ್ಯಾಯಿಕರು ವೇದವು ಈಶ್ವರಕೃತವೆಂದು ಹೇಳುವರು. ಆದರೆ ಸ್ವತಃ ಈ ಈಶ್ವರ ಗೀತೆಯಲ್ಲಿ 'ವೇದಾಂತಕೃದ್ವೇದವಿದೇವ ಚಾಹಂ' ಎಂಬ ವಚನದಿಂದ ಈಶ್ವರನಾದ ನಾನು ವೇದಾಂತವನ್ನು ರಚಿಸಿದ್ದೇನೆ. ವೇದಗಳನ್ನು ತಿಳಿದಿದ್ದೇನೆ ಎಂದು ಸ್ಪಷ್ಟವಾಗಿ ಹೇಳಿದ್ದಾನೆ. 'ವೇದಾಂತಕೃತ್' ಎಂದು ಹೇಳಿದಂತೆ 'ವೇದಕೃತ್' ಎಂದು ಮಾತ್ರ ಎಲ್ಲಿಯೂ ಹೇಳಲಿಲ್ಲ. ಮತ್ತು ಆ ವೇದಗಳು ನಿತ್ಯವಾಗಿವೆ ಎಂಬುದು ಶ್ರುತಿಪ್ರಮಾಣಬದ್ಧವೂ ಮತ್ತು ಸ್ವತಃ ಪ್ರಮಾಣಸಿದ್ಧವೂ ಆಗಿದೆ.

'ವಾಗ್ವಾವನಿತ್ಯಾನ್ಯೇನನೋತ್ಪದ್ಯತೇ ಅಸಾಂ ಹಿ ಶ್ರುತಿರವತಿಷ್ಠತಿ' ಅಂದರೆ ವೇದವಾಣಿಯು ನಿತ್ಯವಾಗಿದ್ದು ಅದು ಎಂದೂ ಹುಟ್ಟಲಾರದು. 'ನಿತ್ಯಾ ವೇದಾಸ್ಸಮಸ್ತಾಶ್ಚ ಶಾಶ್ವತಾ ವಿಷ್ಣುಬುದ್ಧಿಗಾಃ' ವೇದಗಳು ನಿತ್ಯವಾಗಿವೆ. ಅವುಗಳ ಅನುಪೂರ್ವಿಯೂ ಇನಿತೂ ಬದಲಾಗದು. ಅವು ಯಾವಾಗಲೂ ವಿಷ್ಣುವಿನ ಬುದ್ಧಿಗೆ ಗೋಚರವಾಗುತ್ತವೆ. "ಶ್ರುತಿರ್ವಾವನಿತ್ಯಾ

---

ಮಾತ್ಸ್ಯಂ ಕೌರ್ಮಂ ತಥಾ ಲೈಂಗಂ ಶೈವಂ ಸ್ಕಾಂದಂ ತಥೈವ ಚ ।
ಆಗ್ನೇಯಂ ಚ ಷಡೇತಾನಿ ತಾಮಸಾನಿ ನಿಬೋಧ ಮೇ ॥
ವೈಷ್ಣವಂ ನಾರದೀಯಂ ಚ ತಥಾ ಭಾಗವತಂ ಶುಭಂ ।
ಗಾರುಡಂ ಚ ತಥಾ ಪಾದ್ಮಂ ವಾರಾಹಂ ಶುಭದರ್ಶನೇ ॥
ಸಾತ್ವಿಕಾನಿ ಪುರಾಣಾನಿ ವಿಜ್ಞೇಯಾನಿ ಶುಭಾನಿ ವೈ ।
ಬ್ರಹ್ಮಾಂಡಂ ಬ್ರಹ್ಮವೈವರ್ತಂ ಮಾರ್ಕಂಡೇಯಂ ತಥೈವ ಚ ॥
ಭವಿಷ್ಯಂ ವಾಮನಂ ಬ್ರಾಹ್ಮಂ ರಾಜಸಾನಿ ನಿಬೋಧ ಮೇ ॥
ಪದ್ಮಪುರಾಣ ಉತ್ತರಖಂಡ 263—(81-84)

ಸಾತ್ವಿಕೇಷು ಪುರಾಣೇಷು ಮಾಹಾತ್ಮ್ಯಮಧಿಕಂ ಹರೇಃ ।
ರಾಜಸೇಷು ಚ ಮಾಹಾತ್ಮ್ಯಮಧಿಕಂ ಬ್ರಹ್ಮಣೋ ವಿದುಃ ॥
ತದ್ವದಗ್ನೇಶ್ಚ ಮಾಹಾತ್ಮ್ಯಂ ತಾಮಸೇಷು ಶಿವಸ್ಯ ಚ ।
ಸಂಕೀರ್ಣೇಷು ಸರಸ್ವತ್ಯಾಃ ಪಿತೄಣಾಂ ಚ ನಿಗದ್ಯತೇ ॥
—ಮತ್ಸ್ಯಪುರಾಣ 53—(68-69)

ಅನಿತ್ಯಾವ ಸ್ಮೃತಯಃ ಯಾಶ್ಚಾನ್ಯಾವಾಚಃ" ಶ್ರುತಿಯು ನಿತ್ಯ. ಸ್ಮೃತಿಗಳೂ ಇತರ ವಾಕ್ಯಗಳೂ ಅನಿತ್ಯ.

ಸೂರ್ಯಾದಿ ಪ್ರಕಾಶಕನೂ ಇಷ್ಟಪ್ರದನೂ ಆದ ಆ ಪರಮೇಶ್ವರನನ್ನು ನಿತ್ಯವಾದ ವೇದ ವಚನದಿಂದ ಸ್ತೋತ್ರ ಮಾಡು.1

ನಾಶರಹಿತನೂ ಗುಣಪರಿಪೂರ್ಣನೂ ಮುಕ್ತಪ್ರಾಪ್ಯನೂ ಮತ್ತು ಸರ್ವ ಶ್ರೇಷ್ಠನೂ ಆದ ಆ ಪರಮಾತ್ಮನನ್ನು ನಿತ್ಯವಾದ ವೇದಗಳಿಂದ ಸ್ತುತಿಸುತ್ತೇನೆ.2 ಇಂಥ ಅನೇಕ ಶ್ರುತಿ ಸ್ಮೃತಿ ವಚನಗಳೂ ವೇದಗಳಿಗೆ ನಿತ್ಯತ್ವವನ್ನೂ ಅಪೌರುಷೇಯತ್ವವನ್ನೂ. ನಿಸ್ಸಂದಿಗ್ಧವಾದ ಶಬ್ದಗಳಲ್ಲಿ ಪ್ರತಿಪಾದಿಸಿರುತ್ತವೆ.

ಪೌರುಷೇಯವಾದ ಮಹಾಭಾರತವು ಸಾಕ್ಷಾತ್ ಪರಬ್ರಹ್ಮಾವತಾರಿಗಳಾದ ಭಗವಾನ್ ಶ್ರೀವೇದವ್ಯಾಸರಿಂದ ರಚಿತವಾಗಿರುವುದರಿಂದ ಪರಮ ಪ್ರಮಾಣವಾಗಿದೆ.3

ಸಾಕ್ಷಾತ್ ಶ್ರೀ ವಿಷ್ಣುವೇ ವೇದವ್ಯಾಸ ರೂಪದಿಂದ ಜ್ಞಾನಕಾರ್ಯಾರ್ಥವಾಗಿ ಅವತಾರ ಮಾಡಿ ಬ್ರಹ್ಮಸೂತ್ರಗಳನ್ನು ರಚಿಸಿದನು. ವೇದಗಳನ್ನೂ ವಿಭಜಿಸಿದನು, ಮಹಾಭಾರತವನ್ನೂ ನಿರ್ಮಿಸಿದನು. ಸಾಕ್ಷಾತ್ ಶ್ರೀ ಹರಿಯಿಂದಲೇ ರಚಿಸಲ್ಪಟ್ಟದ್ದರಿಂದ ಮಹಾಭಾರತವನ್ನು ಐದನೆಯ ವೇದವೆಂದು ಮನು ಮಹರ್ಷಿಯು ಹೇಳಿದ್ದಾನೆ.

'ಭಾರತಃ ಪಂಚಮೋ ವೇದಃ' ಅಲ್ಲದೆ ವೇದಗಳಿಗಿಂತ ಮಹಾಭಾರತವು ಒಂದು ತೂಕ ಹೆಚ್ಚು ಎಂದು ಸರ್ವಜ್ಞರ ಅಭಿಪ್ರಾಯ.

ಇದೇ ಅಭಿಪ್ರಾಯವನ್ನು ಭಾರತದ ವಿಷಯದಲ್ಲಿ ಆಚಾರ್ಯರು ತಮ್ಮ

---

1) "ತಸ್ಮೈ ನೂನಮಭಿದ್ಯವೇ ವಾಚಾ ವಿರೂಪನಿತ್ಯಯಾ
ವೃಷ್ಣೇ ಚೋದಸ್ವ ಸುಷ್ಟುತಿಮ್"

2) "ನಿತ್ಯಂ ಯಂ ನಿತ್ಯಯಾ ಸ್ತೌಮಿ ಬ್ರಹ್ಮ ತತ್ಪರಮಂ ಪದಂ ।
ನಿತ್ಯಯಾ ನಿತ್ಯಯಾ ಸ್ತೌಮಿ ಪರಮಾತ್ಮಾನಮುತ್ತಮಮ್" ॥

3) "ಕೃಷ್ಣದ್ವೈಪಾಯನಂ ವಿದ್ಧಿ ಸಾಕ್ಷಾನ್ನಾರಾಯಣಂ ಪ್ರಭುಂ"
"ಕೋಹ್ಯನ್ಯಃ ಪುಂಡರೀಕಾಕ್ಷಾನ್ಮಹಾಭಾರತಕೃದ್ಭವೇತ್"
"ಅವತೀರ್ಣೋ ಮಹಾಯೋಗೀ ಸತ್ಯವತ್ಯಾಂ ಪರಾಶರಾತ್ ।
ಉತ್ಸನ್ನಾನ್ ಭಗವಾನ್ ವೇದಾನ್ ಉಜ್ಜಹಾರ ಹರಿಃ ಸ್ವಯಂ ॥"

ಗೀತಾತಾತ್ಪರ್ಯ ಗ್ರಂಥದಲ್ಲಿ ಬ್ರಹ್ಮರುದ್ರಾದಿದೇವತೆಗಳಿಂದ ಪ್ರಾರ್ಥಿತನಾಗಿ ಶ್ರೀಮನ್ನಾರಾಯಣನು ವ್ಯಾಸ ರೂಪದಿಂದ ಅವತರಿಸಿ ತತ್ತ್ವನಿರ್ಣಾಯಕ ವಾದ ಮಹಾಭಾರತ ಎಂಬ ಹೆಸರಿನ ಐದನೇ ವೇದವನ್ನು ರಚಿಸಿದನು—ಎಂದು ನಿರೂಪಿಸಿದ್ದಾರೆ.1

"ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಂ"— ಎಂದು ಪುರಾಣವಚನ ಪ್ರಮಾಣವಿರೋಣದರಿಂದ ಪಂಚರಾತ್ರಾಗಮವೆಲ್ಲವೂ ಪ್ರಮಾಣ ವೆಂದು ಒಪ್ಪಿಕೊಳ್ಳಲೇಬೇಕು. ಇದರಂತೆ ಮೂಲರಾಮಾಯಣವೂ ಮಹಾ ಪ್ರಮಾಣವಾಗಿದೆ. ಹಾಗೂ ಅದೇ ವೇದವ್ಯಾಸದೇವರು ರಚಿಸಿದ ಬ್ರಹ್ಮ ಸೂತ್ರಗಳೂ ಪರಮೋತ್ಕೃಷ್ಟ ಪ್ರಮಾಣವಾಗಿವೆ.

ಬ್ರಹ್ಮಸೂತ್ರಗಳು, ವೇದ, ಸ್ಮೃತಿ, ಪುರಾಣ, ಇತಿಹಾಸ ಮುಂತಾದ ಸರ್ವಪ್ರಮಾಣ ಗ್ರಂಥಗಳ ನಿರ್ಣಾಯಕ ಶಾಸ್ತ್ರವಾದುದರಿಂದ, ಅವು ಅತ್ಯುತ್ತಮ ಪ್ರಮಾಣವಾಗಿರುತ್ತವೆ.

"ಪ್ರಾದುರ್ಭೂತೋ ಹರಿರ್ವ್ಯಾಸೋ ವಿರಿಂಚಿಭವಪೂರ್ವಕೈಃ ।

ಅರ್ಥಿತಃ ಪರವಿದ್ಯಾಖ್ಯಂ ಚಕ್ರೇ ಶಾಸ್ತ್ರಮನುತ್ತಮಮ್ ॥" ಎಂದಿದ್ದಾರೆ. ಅಲ್ಲದೆ 'ಅತಸ್ತದುದಿತಂ ಮಾನಮಜಾದಿಭ್ಯಸ್ತದರ್ಥತಃ '। ಎಂದೂ 'ಅತೋ ನೈತಾದೃಶಂ ಕಿಂಚಿತ್ ಪ್ರಮಾಣತಮಮಿಷ್ಯತೇ' ಎಂದೂ ಹೇಳಿದ್ದಾರೆ. ಈ ವಚನಗಳಿಂದ ಭಗವಾನ್ ಶ್ರೀ ಹರಿಯು ರಚಿಸಿದ ಈ ಬ್ರಹ್ಮಮೀಮಾಂಸಾ ಶಾಸ್ತ್ರದಂತಹ ಆತ್ಯಂತಿಕ ಪ್ರಮಾಣವೇ ಬೇರೊಂದಿಲ್ಲವೆಂದು ಹೇಳಿದ್ದಾರೆ. ಬ್ರಹ್ಮಮೀಮಾಂಸಾಶಾಸ್ತ್ರವೇ ಪರವಿದ್ಯೆಯು, ವೇದ ಅಪರ ವಿದ್ಯೆಯು.

ವೇದಗಳಿಗೆಲ್ಲ ಕರ್ಮ, ದೇವತಾ, ವಿಷ್ಣು ಹೀಗೆ ಮೂರು ಬಗೆಯಾಗಿ ಅರ್ಥವಿದೆ. ಮಹಾಭಾರತಕ್ಕೆ ಹತ್ತು ಅರ್ಥ. ವಿಷ್ಣು ಸಹಸ್ರನಾಮಕ್ಕೆ ನೂರು ಅರ್ಥ ಎಂದು ಆಚಾರ್ಯರು ಮಧ್ವವಿಜಯದಲ್ಲಿ ಪ್ರತಿಜ್ಞಾಪೂರ್ವಕವಾಗಿ ಹೇಳಿದ್ದನ್ನು ನಾರಾಯಣಪಂಡಿತಾಚಾರ್ಯರು ತಿಳಿಸಿದ್ದಾರೆ 2

---

1) "ಸ್ವಯಂ ನಾರಾಯಣೋ ದೇವೋ ಬ್ರಹ್ಮರುದ್ರೇಂದ್ರಪೂರ್ವಕೈಃ ।
ಅರ್ಥಿತೋ ವ್ಯಾಸತಾಂ ಪ್ರಾಪ್ಯ ಕೇವಲಂ ತತ್ತ್ವನಿರ್ಣಯಂ ॥
ಚಕಾರ ಪಂಚಮಂ ವೇದಂ ಮಹಾಭಾರತಸಂಜ್ಞಿತಮ್ "

2) ಸ್ಯಾತ್ತ್ರಧೇತ್ಥಮಪಿ ಸಂಭವಿತಾರ್ಥಸ್ತ್ರ್ಯರ್ಥತಾಂ ಶ್ರುತಿಷು ವಿತ್ತ-
ದಶಾರ್ಥಮ್ ।

ಮಧ್ವಮತದಲ್ಲಿ ಪ್ರಮಾಣ ಮೂರಾದರೆ ಅದ್ವೈತಮತದಲ್ಲಿ ಆರು ಪ್ರಮಾಣಗಳು 'ತಾನಿ ಪ್ರಮಾಣಾನಿ ಷಟ್' ಎಂದು ಹೇಳಿದೆ.

ಅವು 'ಪ್ರತ್ಯಕ್ಷ, ಅನುಮಾನ, ಉಪಮಾನ, ಆಗಮ, ಅರ್ಥಾಪತ್ತಿ, ಅನುಪಲಬ್ಧಿ ಭೇದಾತ್' ಎಂದು. ಈ ಉಪಮಾನ, ಅರ್ಥಾಪತ್ತಿ, ಅನುಲಬ್ಧಿಗಳು ಮತ್ತು ಇತರ ವಾದಿಗಳು ಹೇಳುವ ಬೇರೆ ಪ್ರಮಾಣಗಳು ಪ್ರತ್ಯಕ್ಷಾನುಮಾನಗಳಲ್ಲಿಯೇ ಅಂತರ್ಗತವಾಗುವದರಿಂದ ಅವು ಪ್ರತ್ಯೇಕ ಪ್ರಮಾಣ ಎಂದು ಒಪ್ಪುವ ಅವಶ್ಯಕತೆ ಇಲ್ಲವೆಂದು ಶ್ರೀ ಮಧ್ವಾಚಾರ್ಯರು ತಿಳಿಸಿದ್ದಾರೆ.

"ಅರ್ಥಾಪತ್ತ್ಯುಪಮಾಭಾವಾ ಅನುಮಾಂತರ್ಗತಾಃ ಕ್ವಚಿತ್" ಎಂದು ಅವರು ಅನುವ್ಯಾಖ್ಯಾನ ಭಕ್ತಿಪಾದದಲ್ಲಿ ಹೇಳಿದ್ದಾರೆ.

ಶಂಕರಾಚಾರ್ಯರೊಬ್ಬರನ್ನು ಬಿಟ್ಟು ಉಳಿದ ದಾರ್ಶನಿಕ ಆಚಾರ್ಯರೆಲ್ಲರೂ ಪ್ರಮಾಣಗಳು ಮೂರೇ ಎಂದು ಹೇಳಿ ಅರ್ಥಾಪತ್ತ್ಯಾದಿಗಳಿಗೆ ಇತರ ಪ್ರಮಾಣಗಳಲ್ಲಿಯೇ ಅಂತರ್ಭಾವವನ್ನು ಹೇಳಿದ್ದಾರೆ.

"ಉಪಮಾದೀನಾಂ ಚ ಅತ್ರೈವ ಅಂತರ್ಭಾವಾತ್ ನ ಪಾರ್ಥಕ್ಯಂ" ಎಂದು ನಿಂಬಾರ್ಕಾಚಾರ್ಯರು ವೇದರತ್ನಮಂಜೂಷಾ ಗ್ರಂಥದಲ್ಲಿ ಹೇಳಿದ್ದಾರೆ.

ರಾಮಾನುಜಾಚಾರ್ಯರೂ ಪ್ರಮಾಣ ತ್ರೈವಿಧ್ಯವಾದಿಗಳೇ. ವಿಚಾರವಂತರಾದ ಎಲ್ಲ ಮತಾಚಾರ್ಯರೂ "ಅಕ್ಷಾದಿ ತ್ರಿತಯಂ ಪ್ರಮಾಣಂ" ಎಂಬ ಮಾಧ್ವ ಸೂಕ್ತಿ ಸಮ್ಮತಿಯನ್ನು ಶ್ರುತಿಸ್ಮೃತ್ಯನುಗುಣವಾದುದರಿಂದ ಒಪ್ಪಲೇಬೇಕಾಗುತ್ತದೆ.

## ೯. ಅಖಿಲಾಮ್ನಾಯೈಕವೇದ್ಯೋ ಹರಿಃ (ಸರ್ವವೇದಗಳಿಂದಲೂ ಶ್ರೀ ಹರಿಯೇ ಪ್ರತಿಪಾದ್ಯನು)

ವೇದವೂ ವೇದಾನುಸಾರಿಗಳಾದ ಉಳಿದ ಪೌರುಷೇಯ ಆಗಮಗಳೂ ಪ್ರಮಾಣವಾದ ಬಳಿಕ ಈ ಎಲ್ಲ ನಿಗಮಾಗಮಗಳಿಂದ ಪ್ರತಿಪಾದ್ಯವಾದ ದೇವತೆಯಾರು ಎಂದು ಶಂಕೆ ಬಂದರೆ ಆದಕ್ಕೆ ಮಧ್ವಾಚಾರ್ಯರ ಉತ್ತರ ಹೀಗಿದೆ. 'ಅಖಿಲಾಮ್ನಾಯೈಕವೇದ್ಯೋ ಹರಿಃ' ಸಕಲ ವೇದ ಶಾಸ್ತ್ರಗಳು ಆ ಹರಿಯ

---

ಭಾರತಂ ನನು ಶತಾರ್ಥಮಪಿ ಸ್ಯಾದ್ವೈಷ್ಣವಂ ಪದಸಹಸ್ರತಯಂ ಹಿ ॥
—ಮ॥ ವಿ॥ ಸ್ವರ್ಗ-6-ಶ್ಲೋಕ-4

ಮಹಿಮೆಯನ್ನು ತಿಳಿಸಲಿಕ್ಕಾಗಿಯೇ ಹೊರಟಿರುತ್ತವೆ. ವೇದವಚನಗಳು ಮುಖ್ಯ ವೃತ್ತಿಯಿಂದ ಕರ್ಮವನ್ನೂ ಉಳಿದ ಇಂದ್ರಾದಿ ದೇವತೆಗಳನ್ನೂ ಪ್ರತಿಪಾದಿಸಿದರೂ ಪರಮಮುಖ್ಯವೃತ್ತಿಯಿಂದ ಶ್ರೀಹರಿಯನ್ನು ಮಾತ್ರ ಪ್ರತಿಪಾದಿಸುತ್ತವೆ. ಮುಖ್ಯವೃತ್ತಿಯಿಂದ ಉಳಿದುದನ್ನು ಹೇಳುತ್ತವೆ. ಪರಮ ಮುಖ್ಯವೃತ್ತಿ, ವಿದ್ವದ್ರೂಢಿ, ಮಹಾಯೋಗಗಳಿಂದ ಸಕಲ ವೈದಿಕ ಶಬ್ದಗಳೂ ಸಾಕ್ಷಾತ್ ಶ್ರೀಮನ್ನಾರಾಯಣನನ್ನೇ ಪ್ರತಿಪಾದಿಸುತ್ತವೆ. ಭಗವದ್ಗೀತೆಯಲ್ಲಿ "ವೇದೈಶ್ಚ ಸರ್ವೈರಹಮೇವ ವೇದ್ಯೋ"—ಸಕಲ ವೇದಗಳಿಂದಲೂ ನಾನೇ ಪ್ರತಿಪಾದ್ಯ ಎಂದು ಶ್ರೀಕೃಷ್ಣನು ಸ್ಪಷ್ಟವಾಗಿ ತಿಳಿಸುತ್ತವೆ.

"ಸರ್ವೇ ವೇದಾ ಯತ್ಪದಮಾಮನಂತಿ"

"ನಾರಾಯಣಪರಾ ವೇದಾಃ" ಎಂದು ಶ್ರುತಿಯು ಸಾರುತ್ತದೆ. ಎಲ್ಲ ವೇದಗಳೂ ಆ ಭಗವಂತನ ಸ್ವರೂಪವನ್ನೇ ತಿಳಿಸುತ್ತವೆ.1

ಎಲ್ಲ ವೇದಗಳೂ, ವೇದಾನುಗ್ರಹೀತವಾದ ಯುಕ್ತಿಗಳೂ, ಶ್ರೀವಿಷ್ಣುವೇ ಸರ್ವೋತ್ತಮ ಎಂಬ ಏಕ ವಿಧವಾದ ಬ್ರಹ್ಮಜ್ಞಾನವನ್ನೇ ಪ್ರಕಾಶಗೊಳಿಸುತ್ತವೆ. ಆದುದರಿಂದ ಎಲ್ಲಿಯೂ ವೇದವಚನಗಳಿಗೂ ಪುರಾಣವಚನಗಳಿಗೂ ಪರಸ್ಪರ ವಿರೋಧವಿಲ್ಲ.

ಶುಷ್ಕತರ್ಕದಿಂದಲಾಗಲಿ ಪ್ರತ್ಯಕ್ಷದಿಂದಾಗಲಿ ಅಥವಾ ಬೇರಾವುದರಿಂದಾಗಲಿ ಅವನನ್ನು ತಿಳಿಯಲಿಕ್ಕೆ ಶಕ್ಯವಿಲ್ಲ. ಕೇವಲ ವೇದಗಳಿಂದ ಭಕ್ತರಾದವರು ಮಾತ್ರ ಅವನನ್ನು ತಿಳಿಯಬಲ್ಲರು.2

ವೇದ ಪಂಚರಾತ್ರಾಗಮಗಳಲ್ಲಿ ಹೇಳಿದಂತೆ ತಿಳಿದುಕೊಂಡು ಭಕ್ತಿಯಿಂದ

---

1) ಸರ್ವೇ ವೇದಾ ಯುಕ್ತಯಃ ಸುಪ್ರಮಾಣಾ ಬ್ರಹ್ಮ
ಜ್ಞಾನಂ ಪರಮಂ ತ್ವೇಕಮೇವ ಪ್ರಕಾಶಯಂತೇ ನ ವಿರೋಧಃ
ಕುತಶ್ಚಿದ್ವೇದೇಷು ಕಥೇತಿಹಾಸೇ ||

—ಪೈಂಗಿಶ್ರುತಿ

2) ನ ಚ ಕೇವಲ ತರ್ಕೇಣ ನಾಕ್ಷಜೇನ ಚ ಕೇನ ಚಿತ್ ।
ಕೇವಲಾಗಮವಿಜ್ಞೇಯೋ ಭಕ್ತೈರೇವ ನ ಚಾನ್ಯಥಾ ॥

ಅವನನ್ನು ಪೂಜಿಸಿದರೆ ಮಾತ್ರ ತಾನು ದರ್ಶನವನೀಯುತ್ತೇನೆಂದು1 ಶ್ರೀ ಕೃಷ್ಣ ಗೀತೆಯಲ್ಲಿ ಹೇಳಿದ್ದಾನೆ.

ಸರ್ವ ದೇವತೆಗಳಿಂದಲೂ ಹೊಗಳಲ್ಪಡುವ ವಿಷ್ಣುವಿನ ಗುಣಪೂರ್ಣತೆಯನ್ನು ತಿಳಿದ ಜ್ಞಾನಿಯು ಮೇಲೆ ಇರುವಷ್ಟು ಪ್ರೀತಿಯು ಆ ಪರಮಾತ್ಮನಿಗೆ ಬೇರಾರಮೇಲೂ ಇರುವುದಿಲ್ಲ. ಆ ಭಗವಂತನು ಪ್ರೀತನಾದರೆ ಮೋಕ್ಷವಾಗುವುದು. ಆದುದರಿಂದಲೇ ಎಲ್ಲ ವೇದಗಳೂ ಆ ಜಗದೀಶ್ವರನ ಗುಣಗಾನವನ್ನೇ ಮಾಡುತ್ತವೆ.2

ಇವಲ್ಲದೆ, ಇನ್ನು ಅನೇಕಾನೇಕ ಪ್ರಮಾಣವಚನಗಳು ಆ ಭಗವಂತನಿಗೆ ವೇದೈಕವೇದ್ಯತ್ವವನ್ನು ನಿರೂಪಿಸುತ್ತವೆ.3

ವೇದೈಕವೇದ್ಯ ಅಥವಾ ಆಮ್ನಾಯೈಕವೇದ್ಯ ಎನ್ನುವ ಮಾತಿಗೆ ಎರಡು ಅರ್ಥ. ಎಲ್ಲ ವೇದಗಳಿಂದಲೂ ಅವನೇ ವೇದ್ಯ, ಮತ್ತು ಅವನು ವೇದಗಳಿಂದ ಮಾತ್ರ ವೇದ್ಯ ಎಂದು. ಎಲ್ಲ ವೇದಗಳೂ ಅವನನ್ನೇ ಬೋಧಿಸ ಹೊರಟಿವೆ ಎನ್ನುವುದಕ್ಕೆ ಈ ವರೆಗೆ ಅನೇಕ ಪ್ರಮಾಣಗಳನ್ನು ಹೇಳಿದ್ದಾಯಿತು.

---

1) ವೇದೈಶ್ಚ ಪಂಚರಾತ್ರೈಶ್ಚ ಭಕ್ತ್ಯಾ ಯಜ್ಞೈಸ್ತಥೈವ ಚ ।
ದೃಶ್ಯೋಽಹಂ ನಾನ್ಯಥಾ ದೃಶ್ಯೋ ವರ್ಷಕೋಟಿಶತೈರಪಿ ॥
—ವರಾಹ ಪುರಾಣ.

2) "ನ ತಾದೃಶೀ ಪ್ರೀತಿರೀಡ್ಯಸ್ಯವಿಷ್ಣೋರ್ಗುಣೋತ್ಕರ್ಷಜ್ಞಾತರಿ ಯಾದೃಶೀ ಸ್ಯಾತ್ ।
ತತ್ಪ್ರೀಣನಾತ್ ಮೋಕ್ಷಮಾಪ್ನೋತಿ ಸರ್ವಸ್ತತೋ ವೇದಾಸ್ತತ್ಪರಾಃ ಸರ್ವ ಏವ ॥"
—ಸೌಪರ್ಣಶ್ರುತಿ.

3) "ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ"
"ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ ।
ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸ್ಸರ್ವತ್ರ ಗೀಯತೇ ॥"
"ವಾಸುದೇವಪರಾ ವೇದಾಃ"
"ನಾನಾವೇದೇತಿಹಾಸೈಃ ಪುರಾಣೈಃ ಸುಜ್ಞೇಯ ಏಕೋ ಭಗವಾನ್ ಯುಕ್ತಿಭಿಶ್ಚ"

ವೇದಗಳಿಂದಲೇ ಅವನು ವೇದ್ಯ ಎನ್ನುವುದನ್ನು ಶ್ರೀ ಮಧ್ವಾಚಾರ ರು ತಮ್ಮ ಗ್ರಂಥಗಳಲ್ಲಿ ಸಾಧಿಸಿದ್ದಾರೆ.

ಪ್ರತ್ಯಕ್ಷವು ಅವನನ್ನು ತೋರಿಸಿಕೊಡಲಿಕ್ಕೆ ಸಮರ್ಥವಾಗಲಾರದು. ಆದುದರಿಂದಲೇ ಪರಮಾತ್ಮನು ಅರ್ಜುನನಿಗೆ 'ದಿವ್ಯಂ ದದಾಮಿ ತೇ ಚಕ್ಷುಃ'— ಎಂದು ತನ್ನ ಯೋಗಬಲದಿಂದ ದಿವ್ಯದೃಷ್ಟಿಯನ್ನು ಕೊಟ್ಟು ತನ್ನ ವಿಶ್ವರೂಪ ವನ್ನು ನೋಡುವಂತೆ ಮಾಡಬೇಕಾಯಿತು. ಇಂದ್ರಾವತಾರಿಯಾದ ಅರ್ಜುನ ನಿಗೇ ಕಾಣಿಸದಿದ್ದ ಬಳಿಕ ನಮ್ಮಂಥ ಪಾಮರರ ಪ್ರತ್ಯಕ್ಷಕ್ಕೆ ಭಗವಂತನು ಗೋಚರವಾಗುವುದೇ ಇಲ್ಲ. "ನೈಷಾ ತರ್ಕೇಣ ಮತಿರಾಪನೇಯಾ" ಎಂಬ ಶ್ರುತಿಯು ಪರಮಾತ್ಮನು ಅನುಮಾನದಿಂದಲೂ ಗಮ್ಯನಲ್ಲ ಎಂದು ಸಾರುತ್ತದೆ.

"ನ ಚಕ್ಷುಷಾ ಗೃಹ್ಯತೇ ನಾಪಿ ವಾಚಾ"—ಎಂದು ಮತ್ತೊಂದು ಪ್ರಮಾಣವಚನವು ಪರಮಾತ್ಮನಿಗೆ ಚಕ್ಷುರಾದ್ಯಗೋಚರತ್ವವನ್ನು ಸ್ಪಷ್ಟಪಡಿ ಸುತ್ತದೆ.

ಇನ್ನೊಂದು ಶ್ರುತಿಯು ಇದೇ ಮಾತನ್ನೇ ಇನ್ನೂ ಸ್ಪಷ್ಟವಾಗಿ ಹೇಳು ತ್ತದೆ. "ನೇಂದ್ರಿಯಾಣಿ ನಾನುಮಾನಂ ವೇದಾಹ್ಯೇವೈನಂ ವೇದಯಂತಿ". ಇಂದ್ರಿಯಗಳಾಗಲೀ ಅನುಮಾನವಾಗಲೀ, ಆ ಪರಮಾತ್ಮನನ್ನು ತಿಳಿಸಿ ಕೊಡ ಲಾರವು. ವೇದಗಳೇ ಅವನನ್ನು ತಿಳಿಸಿಕೊಡುತ್ತವೆ. ಆ ಪರಮಾತ್ಮನನ್ನು "ವೇದ-ಯಂತಿ ಇತಿ ವೇದಾಃ" ತಿಳಿಸಿಕೊಡುತ್ತವೆ ಎಂದೇ ಇವುಗಳಿಗೆ ವೇದ ಎಂಬ ಅನ್ವರ್ಥಕ ಹೆಸರಿದೆ. ಬಾದರಾಯಣರ ಬ್ರಹ್ಮಮೀಮಾಂಸಾಶಾಸ್ತ್ರದ 'ಓಂ ಶಾಸ್ತ್ರಯೋನಿತ್ವಾತ್ ಓಂ' ಎಂಬ ಮೂರನೇ ಸೂತ್ರದಲ್ಲಿ ವೇದಶಾಸ್ತ್ರಗಳೇ ಆ ಪರಮಾತ್ಮನ ಜ್ಞಪ್ತಿಗೆ ಮುಖ್ಯಕಾರಣವೆಂದು ಪ್ರತಿಪಾದಿಸಿದ್ದಾರೆ.

ಇಂಥ ಪ್ರಮಾಣತಮವಾದ ದಿವ್ಯವಾದ ವೇದಜ್ಞಾನವಿಲ್ಲದೆ ಪರ ಮಾತ್ಮನ ಜ್ಞಾನವಾಗಲೀ, ಪ್ರಸಾದವಾಗಲೀ, ಮೋಕ್ಷವಾಗಲೀ ಆಗಲಾರದು.

"ನಾವೇದವಿನ್ಮನುತೇ ಇದಂ ಬೃಹಂತಂ ಆತ್ಮಾನಂ ಸಾಂಪರಾಯೇ" ವೇದವನ್ನು ಅರಿಯದವನು ಗುಣಪರಿಪೂರ್ಣನೂ ಸರ್ವತ್ರ ವ್ಯಾಪ್ತನೂ ಆದ ಪರಮಾತ್ಮನನ್ನು ತಿಳಿಯಲಾರನು —ಎಂದು ಮುಂತಾಗಿ ಅನೇಕ ಪ್ರಮಾಣ ವಚನಗಳಿಂದ ಹೇಳಿರುವುದರಿಂದ ವೇದಶಾಸ್ತ್ರವನ್ನು ಓದಿ ಆ ಪರ ಮಾತ್ಮನ ಜ್ಞಾನವನ್ನು ಮಾಡಿಕೊಂಡು ಅದರಂತೆ ಉಪಾಸನೆಮಾಡಿ, ಅವನ

ಅನುಗ್ರಹದಿಂದಲೇ (ಪ್ರಸಾದದಿಂದಲೇ) ಮೋಕ್ಷವನ್ನು ಹೊಂದಬೇಕು.

ದೇವಾನುದೇವತೆಗಳೂ ಕೂಡ ಮುಖ್ಯಪ್ರಾಣದೇವರ ಈ ದ್ವೈತ (ಜೀವ ಬ್ರಹ್ಮ ಭೇದ) ತತ್ತ್ವೋಪದೇಶದಿಂದಲೇ ಮೋಕ್ಷವನ್ನು ಹೊಂದುವರು. ಎಲ್ಲ ದೇವತೆಗಳಿಗೂ ಸ್ವೋತ್ತಮ ದೇವತೆಗಳಲ್ಲಿ ಲಯವಾಗುತ್ತಾ ವಾಯುಬ್ರಹ್ಮ ದ್ವಾರಾ ಮುಕ್ತಿಯಾಗವುದು. ನಿತ್ಯಮುಕ್ತಳಾದ ಶ್ರೀದೇವಿಗೆ ಮಾತ್ರ ಲಯವಿಲ್ಲ. ಅವಳಿಗೆ ಲಯವೆಂದರೆ ಭಗವಂತನ ಅತಿ ಸಮೀಪದಲ್ಲಿ ಇರುವುದು ಎಂದು ಅರ್ಥ—ಎಂದು ಶ್ರೀಮದಾನಂದತೀರ್ಥಭಗವತ್ಪಾದರು, ದಿವ್ಯ ಸಂದೇಶವನ್ನು ಸಕಲ ಮಾನವರಿಗೂ ಅವರ ಆತ್ಮೋದ್ಧಾರಕ್ಕಾಗಿ ನೀಡಿದ್ದಾರೆ.

# ಶ್ರೀ ಮಧ್ವಾಚಾರ್ಯರ ಸಾಕ್ಷಾಚ್ಛಿಷ್ಯರು

## ಶ್ರೀ ಪದ್ಮನಾಭತೀರ್ಥರು (ಕ್ರಿ. ಶ. 1317—1324)

ಶ್ರೀ ಮಧ್ವಾಚಾರ್ಯರು ಅನಾದಿಯಾದ ದ್ವೈತಮತವನ್ನು ಪುನರುತ್ಥಾನಗೊಳಿಸಲು ನಾಲ್ಕು ಮುಖಗಳಲ್ಲಿ ಕಾರ್ಯ ಕೈಗೊಂಡರು. ಮೊದಲನೆಯದಾಗಿ ಸರ್ವಮೂಲ ಗ್ರಂಥ ರಚನೆ. ಉಪನಿಷತ್ತುಗಳು, ಭಗವದ್ಗೀತೆ ಮತ್ತು ಬ್ರಹ್ಮಸೂತ್ರಗಳೆಂಬ ಪ್ರಸ್ಥಾನತ್ರಯಗಳಿಗೆ ಹಿಂದಿನ ಇಪ್ಪತ್ತೊಂದು ಕುವ್ಯಾಖ್ಯಾನಗಳನ್ನು ನಿರಾಕರಿಸಿ ಶ್ರೀ ವೇದವ್ಯಾಸದೇವರಿಗೆ ಸಮ್ಮತವಾದ ವ್ಯಾಖ್ಯಾನವನ್ನು ಮಾಡಿದರು. ಎರಡನೆಯದಾಗಿ ಅವರು ತಮ್ಮ ಗ್ರಂಥಗಳಲ್ಲಿ ಪ್ರತಿಪಾದಿತವಾದ ಸಿದ್ಧಾಂತವನ್ನೂ, ಪ್ರಮೇಯಭಾಗವನ್ನೂ ಮಂಡಿಸುವ ಸಲುವಾಗಿ ಅನೇಕ ನಿರ್ಣಯ ಗ್ರಂಥಗಳನ್ನೂ, ಭಾಷ್ಯಗಳನ್ನೂ ರಚಿಸಿದರು ; ತಮ್ಮ ಶಿಷ್ಯರಿಂದಲೂ ರಚಿಸಿಸಿದರು. ಸ್ವಸಿದ್ಧಾಂತ ಮಂಡನದಂತೆಯೇ ಪರಸಿದ್ಧಾಂತ ನಿರಾಕರಣ ಗ್ರಂಥಗಳನ್ನೂ ರಚಿಸಿದರು. ಮೂರನೆಯದಾಗಿ ಪ್ರತಿಭಾಶಾಲಿಗಳಾದ ಶಿಷ್ಯರಿಗೆ ಸನ್ಯಾಸಾಶ್ರಮದೀಕ್ಷೆ ಇತ್ತು ದ್ವೈತಮತ ಪ್ರಚಾರಕ್ಕೆ ನಿಯೋಜಿಸಿದರು. ಈ ಕಾರ್ಯಕ್ಕೆ ತಮ್ಮ ಗೃಹಸ್ಥ ಶಿಷ್ಯರನ್ನೂ ಪ್ರೋತ್ಸಾಹಿಸಿ ಕಳುಹಿಸಿದರು. ಕಡೆಯದಾಗಿ ತಾವು ಎರಡುಬಾರಿ ಭಾರತದೇಶವನ್ನೆಲ್ಲ ಸಂಚರಿಸಿ ಸಜ್ಜನರಿಗೆ ವೈಷ್ಣವದೀಕ್ಷೆಯಿತ್ತರು ; ಉಡುಪಿಯಲ್ಲಿ ಶ್ರೀಕೃಷ್ಣನ ವಿಗ್ರಹವನ್ನು ಪ್ರತಿಷ್ಠಿಸಿ ಅದನ್ನು ವೈಷ್ಣವ ಧರ್ಮದ ಕೇಂದ್ರಬಿಂದುವನ್ನಾಗಿ ಮಾಡಿದರು.

—ಹೀಗೆ ಶ್ರೀ ಮಧ್ವಾಚಾರ್ಯರು ಸಚ್ಛಾಸ್ತ್ರವಾದ ತತ್ತ್ವವಾದಕ್ಕೆ (ಜೀವಬ್ರಹ್ಮ ಭೇದವಾದಕ್ಕೆ) ಭದ್ರವಾದ ಬುನಾದಿಯನ್ನು ಹಾಕಿದರು.

ಶ್ರೀ ಮಧ್ವಾಚಾರ್ಯರ ಉದ್ಗ್ರಂಥಗಳಲ್ಲಿ ಕೆಲವಕ್ಕೆ ಆಚಾರ್ಯರ ಕಾಲದಲ್ಲೇ ವ್ಯಾಖ್ಯಾನ ಬರೆದ ಮಹಾನುಭಾವರು ಶ್ರೀ ಪದ್ಮನಾಭತೀರ್ಥರು. ಇವರು ಆಚಾರ್ಯರ ಸಾಕ್ಷಾತ್ ಯತ್ಯಾಶ್ರಮ ಶಿಷ್ಯರಲ್ಲಿ ಮೊದಲನೆಯವರು. ಆಚಾರ್ಯರ ನಂತರ ಸರ್ವಜ್ಞಸಿಂಹಾಸನವನ್ನೇರಿದ ಮಹನೀಯರು. ಇವರು ಮಧ್ವಮತದ ಗುರುಪೀಠಗಳಾದ ಪೂರ್ವಾದಿಮಠವೆನಿಸಿದ ವ್ಯಾಸರಾಯಮಠ, ಶ್ರೀ ರಾಘವೇಂದ್ರಸ್ವಾಮಿಗಳ ಮಠ, ಉತ್ತರಾದಿಮಠ, ಶ್ರೀಪಾದರಾಜಮಠ ಮತ್ತು ಇತರ ವೈಷ್ಣವ ಮಠಗಳಿಗೂ ಮೂಲಪುರುಷರು.

ಇವರು ಶ್ರೀ ಮಧ್ವಾಚಾರ್ಯರ ವೇದಾಂತ ಸಾಮ್ರಾಜ್ಯಕ್ಕೆ ಉತ್ತರಾಧಿಕಾರಿಗಳಾಗಿ ಅದನ್ನು ವಿಶ್ವವಂದ್ಯವನ್ನಾಗಿ ಮಾಡಿದರು. ಇವರು ಶ್ರೀ ಮಧ್ವಾಚಾರ್ಯರ ಕೆಲವು ಕೃತಿಗಳಿಗೆ ವ್ಯಾಖ್ಯಾನ ರೂಪವಾದ ಗ್ರಂಥಗಳನ್ನು ರಚಿಸಿ ಪ್ರಥಮವ್ಯಾಖ್ಯಾನಕಾರರಾಗಿ ಇತರರಿಗೆ ಮಾರ್ಗದರ್ಶನ ಮಾಡಿದರು. ಇವರ ದಿವ್ಯಟೀಕಾವೈಖರಿಯ ಮಾರ್ಗದರ್ಶನವಿಲ್ಲದೆ ವೇದಾಂತ ಕಾಂತಾರದಲ್ಲಿ ದಾರಿಯು ಕಾಣದೆ ತತ್ತ್ವಜ್ಞಾನವೇ ಆಗಲಾರದೆಂದು ಜಯತೀರ್ಥರು ಹೇಳಿರುವುದನ್ನು ನೋಡಿದರೆ ಈ ಮಾತು ಅರ್ಥವಾಗುತ್ತದೆ. "ನ ತತ್ವಮಾರ್ಗೇ ಗಮನಂ ವಿನಾ ಯದುಪಜೀವನಂ". ಇವರಿಗೆ ಪ್ರಾಚೀನ ಟೀಕಾಕಾರರೆಂದು ಹೆಸರು.

ಇವರನ್ನು ಸುಮಧ್ವವಿಜಯ ಕರ್ತೃಗಳಾದ ನಾರಾಯಣಪಂಡಿತಾಚಾರ್ಯರು ಅಷ್ಟೇ ಗೌರವದಿಂದ ಸ್ಮರಿಸಿದ್ದಾರೆ. ಪದ್ಮನಾಭತೀರ್ಥರ ವಾಗ್ವೈಖರಿ ಮತ್ತು ವ್ಯಾಖ್ಯಾನ ರೀತಿಗಳನ್ನು ದೂರದಿಂದ ಕೇಳಿದ ಮಾತ್ರಕ್ಕೆ ಮಾಯಾವಾದಿಗಳು ಶ್ವಾನಗಳಂತೆ ಓಡುತ್ತಿದ್ದರಂತೆ1 ಎಂದು ಅವರು ಪದ್ಮನಾಭತೀರ್ಥರನ್ನು ಬಣ್ಣಿಸಿದ್ದಾರೆ. ಅವರು ಜಯತೀರ್ಥರಿಗೆ ಶ್ರೀಮನ್ನ್ಯಾಯಸುಧಾ ಗ್ರಂಥ ಬರೆಯಲು ಮಾರ್ಗದರ್ಶಕರಾದರೆಂದು ಒಪ್ಪಿಕೊಂಡ ಜಯತೀರ್ಥರು ಅವರ ಅನುಗ್ರಹವು ತಮ್ಮ ಮೇಲೆ ಲೇಶವಾದರೂ ಆಗಲೆಂದು ಬ್ರಹ್ಮಸೂತ್ರಭಾಷ್ಯಹರಿ ತತ್ತ್ವ

---

1) "ವ್ಯಾಖ್ಯಾಪ್ರಣಾದಮಾತ್ರೇಣ ವೀರಂ ಮನ್ಯಾನ್ ಸ್ವಮಂಡಲೇ ।
ಮಾಯಾವೀಗ್ರಾಮಸಿಂಹಾನ್ಯೋ ವಾದಿಸಿಂಹೋ ನಿರಾಕರೋತ್ ॥"

ಪ್ರಕಾಶಿಕಾ ಮತ್ತು ಶ್ರೀಮನ್ನ್ಯಾಯಸುಧಾ ಗ್ರಂಥಗಳ ಆರಂಭದಲ್ಲಿ ಪ್ರಾರ್ಥಿಸಿದ್ದಾರೆ.

ಶ್ರೀ ಮಧ್ವಾಚಾರ್ಯರು ಹಾಕಿಕೊಟ್ಟ ರಾಜಮಾರ್ಗದಲ್ಲಿ ಮುನ್ನಡೆದು ವಿದ್ಯಾಸಂಪಾದನೆ, ಪರವಾದಿಖಂಡನ, ಸ್ವಸಿದ್ಧಾಂತಮಂಡನ, ಗ್ರಂಥ ರಚನೆ, ವೈರಾಗ್ಯ, ತತ್ತ್ವಪ್ರಚಾರ, ವೇದವ್ಯಾಖ್ಯಾನ—ಹೀಗೆ ದ್ವೈತಮತದ ಯಶೋದುಂದುಭಿಯನ್ನು ಹೋದೆಡೆಯಲ್ಲೆಲ್ಲಾ ಅವರು ಮೆರೆಸಿದರು. ಅಂತಲೇ ಅವರನ್ನು ನಾರಾಯಣಪಂಡಿತಾಚಾರ್ಯರು "ಶಿಷ್ಯೋಸಾವಿತಿ ಪೂಜಿತಃ" ಎಂದು ಹೇಳಿದ್ದಾರೆ. ವೇದಾಂತಾಬ್ಧಿವಿಹರಣ ನಿಪುಣ ವಿದ್ವತ್ತಿಮಿಂಗಿಲ"—ಎಂದೂ "ಮತ್ತದುರ್ವಾದಿ ಮಾತಂಗ, ತರ್ಕಮಸ್ತಕಧಾರಣ ಪಂಚಾಸ್ಯ" ಎಂದೂ ಕೊಂಡಾಡಿದ್ದಾರೆ.

ಪದ್ಮನಾಭತೀರ್ಥರು, ಪಾಂಡಿತ್ಯ, ಪಟುತ್ವ, ಶಾಸ್ತ್ರಪ್ರಭುತ್ವ, ಪ್ರತಿಭಾ ಪ್ರಾಗಲ್ಭ್ಯ, ಪ್ರವಚನ ಪ್ರೌಢಿಮೆ, ಟೀಕಾ ಪ್ರಣಾಲಿಕಾದಿಗಳ ಸಾಕಾರಮೂರ್ತಿಗಳಾಗಿದ್ದರು. ಇವರ ಪಾಂಡಿತ್ಯಪ್ರಾಗಲ್ಭ್ಯಾದಿಗಳು ಇವರಿಂದ ರಚಿತವಾದ ಅನುವ್ಯಾಖ್ಯಾನದ ಟೀಕೆಯಾದ ಸನ್ನ್ಯಾಯರತ್ನಾವಲಿ ಗ್ರಂಥದಿಂದಲೂ ಮತ್ತು ಭಾಷ್ಯದ ಟೀಕೆಯಾದ ಸತ್ತರ್ಕದೀಪಾವಳಿಯಿಂದಲೂ ವ್ಯಕ್ತವಾಗುತ್ತವೆ.

ಪದ್ಮನಾಭತೀರ್ಥರ ಪೂರ್ವಾಶ್ರಮದ ಹೆಸರು ಶೋಭನಭಟ್ಟರೆಂದು. ಗೋದಾವರೀತೀರದ ರಾಜಮಹೇಂದ್ರಿ ಮಂಡಲದಲ್ಲಿ ರಾಜ್ಯವಾಳುತ್ತಿದ್ದ ಕಾಕತೀಯ ಪ್ರತಾಪರುದ್ರ ಗಣಪತಿದೇವನ (ಕ್ರಿ.ಶ. 1257–1295) ಆಸ್ಥಾನದಲ್ಲಿ ಅವರು ಆಪ್ತ ಮಂತ್ರಿಗಳೂ, ಆಸ್ಥಾನ ವಿದ್ವಾಂಸರೂ ರಾಜಗುರುಗಳೂ ಆಗಿದ್ದರೆಂದು ತಿಳಿದುಬರುತ್ತದೆ. (ಅವರು ಪೈಠಣದವರೆಂದು ಇನ್ನೊಂದು ವಾದವಿದೆ.) ಅವರು ರಾಜಾಮಾತ್ಯರಾಗಿದ್ದಾಗ (ಕ್ರಿ. ಶ. 1281 ರ ಸುಮಾರಿಗೆ) ಶ್ರೀ ಮಧ್ವಾಚಾರ್ಯರು ಅಲ್ಲಿಗೆ ಬಂದಿದ್ದರು. ರಾಜಧಾನಿಯಲ್ಲಿ ಮಹಾಮಹಾ ಪಂಡಿತರು ನೆರೆದು ಶ್ರೀ ಮಧ್ವಾಚಾರ್ಯರ ಸಂಗಡ ವಿದ್ವತ್ಸಭೆಯಲ್ಲಿ ವಾದ ಮಾಡಿ ಜಿತರಾದರು. ಆಚಾರ್ಯರ ವ್ಯಕ್ತಿತ್ವದ ಪ್ರಭಾವದ ಆಯಸ್ಕಾಂತಕ್ಕೆ ಸಿಕ್ಕಿ ಶೋಭನ ಭಟ್ಟರು ಶ್ರೀ ಮಧ್ವಾಚಾರ್ಯರ ಶಿಷ್ಯರಾಗಿ, ದ್ವೈತಮತವನ್ನು ಸ್ವೀಕರಿಸಿದರು. ತಮ್ಮ ಸಹವಿದ್ವಾಂಸರು ಮಾಡಿದ ಟೀಕೆಯನ್ನು ಗಮನಿಸಲಿಲ್ಲ. ಅವರಿಗೆ ಸುಣ್ಣ ಮಾರುವವನಿಗೆ ದೊರೆತ ಬಲಮುರಿ ಶಂಖದ ದೃಷ್ಟಾಂತವನ್ನು ಕೊಟ್ಟು ಸಮಾ

ಧಾನ ಪಡಿಸಿದರು. (ಈ ಬಗ್ಗೆ ರಾಜಮಹೇಂದ್ರಿಯಲ್ಲಿ ಶಿಲಾಶಾಸನವಿದೆ ಎಂದು ಹೇಳುತ್ತಾರೆ).

ಶ್ರೀ ಮಧ್ವಾಚಾರ್ಯರೂ ಶೋಭನಭಟ್ಟರ ಭಕ್ತಿ, ವೈರಾಗ್ಯ, ಗುರುಭಕ್ತಿ, ಶಾಸ್ತ್ರಪಾಂಡಿತ್ಯ, ಪರವಾದಿನಿಗ್ರಹ ಗುಣಗಳಿಗೆ ಸುಪ್ರೀತರಾಗಿ ಅವರಿಗೆ ವೇದಾಂತ ವಿದ್ಯೆಯನ್ನು ಅನುಗ್ರಹಿಸಿ ಉದ್ಧಾರ ಮಾಡಿದರು — ಎಂದು ಈ ಬಗ್ಗೆ ನಾರಾಯಣಪಂಡಿತಾಚಾರ್ಯರು ಹೇಳಿದ್ದಾರೆ.1

ಅವರು ಆಚಾರ್ಯರಿಂದ ಆಶ್ರಮ ಸ್ವೀಕರಿಸಿ ಪದ್ಮನಾಭತೀರ್ಥರೆಂಬ ಆಶ್ರಮನಾಮ ಪಡೆದರು. ಅವರು ಶ್ರೀ ಮಧ್ವಾಚಾರ್ಯರ ವೇದಾಂತ ಸಾಮ್ರಾಜ್ಯಕ್ಕೆ ಉತ್ತರಾಧಿಕಾರಿಗಳಾಗುವ ಮೊದಲು2 ಆಚಾರ್ಯರಿಂದ ಪಡೆದಿದ್ದ ಗೋಪಿನಾಥದೇವರ ಪ್ರತಿಮೆಯನ್ನು ಲಕ್ಷ್ಮೀಧರತೀರ್ಥರೆಂಬ ಶಿಷ್ಯರಿಗೆ ಇತ್ತು ಇಂದಿನ ಶ್ರೀಪಾದರಾಜರ ಸಂಸ್ಥಾನಕ್ಕೆ ಮೂಲಪುರುಷರಾದರು.

ಶ್ರೀ ಮಧ್ವಾಚಾರ್ಯರ ಸರ್ವಜ್ಞ ಪೀಠಕ್ಕೆ ಬಂದ ಮೇಲೆ ಶ್ರೀಮೂಲ ಗೋಪಾಲಕೃಷ್ಣ, ಮೂಲಸೀತಾರಾಮರ ವಿಗ್ರಹಗಳನ್ನು ಪೂಜಿಸಿ, ತಮ್ಮ ನಂತರ ಶ್ರೀ ನರಹರಿತೀರ್ಥರಿಗೆ ಇತ್ತರು. ಶ್ರೀ ಪದ್ಮನಾಭತೀರ್ಥರ ಬೃಂದಾವನೇ ಮಾಧ್ವಯತಿಗಳ ಬೃಂದಾವನಗಳಲ್ಲಿ ಮೊದಲನೆಯದು. ನವಬೃಂದಾವನಗಡ್ಡೆಯಲ್ಲಿದೆ. ಅಂದಿನಿಂದಲೂ ಸಮಸ್ತ ಮಾಧ್ವರೂ ಮತ್ತು ಮಾಧ್ವಪೀಠಾಧಿಪತಿಗಳೂ ಈ ಬೃಂದಾವನದ ಪೂಜಾದಿಗಳನ್ನು ಅವಿಚ್ಛಿನ್ನವಾಗಿ ಮಾಡುತ್ತಿದ್ದಾರೆ.

## ಶ್ರೀ ನರಹರಿತೀರ್ಥರು (ಕ್ರಿ. ಶ. 1324—1333)

ಶ್ರೀ ಮಧ್ವಾಚಾರ್ಯರಿಂದ ಸನ್ಯಾಸಾಶ್ರವನ್ನು ಸ್ವೀಕರಿಸಿ ಅವರ ನಂತರ ಸರ್ವಜ್ಞಸಿಂಹಾಸನವನ್ನು ಏರಿದವರಲ್ಲಿ ನರಹರಿತೀರ್ಥರು ಎರಡನೆಯವರು.

---

1) ಶ್ರುತ್ಯಾ ಮತ್ಯಾ ಸದಾ ಭಕ್ತ್ಯಾ ವಿರಕ್ತ್ಯಾ ನಿತ್ಯಸೇವಯಾ ।
ತಸ್ಮೈ ಪ್ರಸನ್ನಃ ಪ್ರಾಜ್ಞೇಕ್ಷಃ ಸದ್ಯೋ ವಿದ್ಯಾಂ ದದೌ ಶುಭಾಂ ॥

2) ಸ ಪದ್ಮನಾಭೋ ಯತಿರಾಣ್ಣಯೋಗಾ
ದಪಾಲಯದ್ವೇದಕೃತಾಂತರಾಜ್ಯಮ್ ।
ಆನಂದತೀರ್ಥಸ್ಯ ಗುರೋಸ್ಸಮಸ್ತ
ಮಾನಂದಯರ್ನ್ಸ್ವಾನಥ ಶಿಷ್ಯಸಂಘಾನ್ ॥

ವ್ಯಾ॥ಜ॥ವಿ॥ ಸರ್ಗ—2—ಶ್ಲೋಕ—1

ಇವರು ರಾಜಕಾರ್ಯಧುರಂಧರರೂ, ಮಹಾ ಶೂರರೂ, ವಿದ್ವಾಂಸರೂ, ಲೌಕಿಕವನ್ನೂ ಬಲ್ಲ ಅಧಿಕಾರಿಗಳೂ ಆಗಿದ್ದರು. "ಅಗ್ರತಶ್ಚತುರೋ ವೇದಾಃ ಪೃಷ್ಠತಃ ಸಶರಂ ಧನುಃ । ಇದಂ ಬ್ರಾಹ್ಮಮಿದಂ ಕ್ಷಾತ್ರಂ ಶಾಪಾದಪಿ ಶರಾದಪಿ" ಎಂಬ ಆಯೋಕ್ತಿಗೆ ಹೇಳಿ ಮಾಡಿಸಿದಂತೆ ಇದ್ದರು. ಇವರು ಶಾಸ್ತ್ರ ಮತ್ತು ಶಸ್ತ್ರಗಳ ಉಪಾಸಕರಾಗಿ ಶ್ರೀ ಪರಶುರಾಮದೇವರು, ದ್ರೋಣಾಚಾರ್ಯರು, ಕೃಪಾಚಾರ್ಯರಂತೆ, ಬ್ರಾಹ್ಮಣ ಕ್ಷತ್ರಿಯರಾಗಿದ್ದರು. ಮುಂದೆ ಇವರಿಂದ ಸ್ಫೂರ್ತಿ ಪಡೆದ ವಿದ್ಯಾರಣ್ಯರೂ, ವ್ಯಾಸರಾಯರೂ ರಾಮದಾಸರೂ ರಾಜಕಾರಣದಲ್ಲೂ, ಶಾಸ್ತ್ರವಿಷಯಗಳಲ್ಲೂ ಆಚಾರ್ಯರಾದರು.

ಇವರೂ ಪದ್ಮನಾಭತೀರ್ಥರಂತೆ ವೇದಾಂತ ವಿದ್ಯೆಯಲ್ಲಿ ಮಹಾ ಪಂಡಿತರಾಗಿದ್ದರು. ಭೋಗವಿಲಾಸಗಳು ಕೈಬೀಸಿ ಕರೆಯುತ್ತಿದ್ದರೂ, ಅವುಗಳನ್ನು ತೃಣೀಕರಿಸಿ, ವೈರಾಗ್ಯದತ್ತ ನಡೆದ ಮಹಾನುಭಾವರು. ಇವರು ಎರಡು ದಶಕಗಳವರೆಗೆ ಉತ್ಕಲದ ರಾಜ್ಯಾಡಳಿತದಲ್ಲಿ ಮಹತ್ವದ ಪಾತ್ರವಹಿಸಿದರು. ಇಂಥವರನ್ನು ನೋಡಿಯೇ ಕಾಳಿದಾಸನು 'ಯತ್ಕಾಂಕ್ಷಂತಿ ತಪೋಭಾರಸ್ಯ ಮುನಯಃ ತಸ್ಮಿನ್ ತಪಸ್ಯಂತ್ಯಮೀ'—ಎಂದು ಹೇಳಿರಬೇಕು.

ನರಹರಿತೀರ್ಥರ ಮೂಲಸ್ಥಳ ಇಂದಿನ ಆಂಧ್ರದ ಪ್ರದೇಶ ಗಂಜಾಂ ಜಿಲ್ಲೆಯ ಚಿಕಾಕೋಲು ಎಂಬ ಊರು. ಇವರ ತಂದೆಯ ಹೆಸರು ನರಸಿಂಹ ಭಟ್ಟರು. ಇವರು ಉತ್ಕಲದ ಅನಂಗಭೀಮರಾಜನ ಮಂತ್ರಿಗಳಾಗಿದ್ದರು. ಇವರೂ ಮಗನಂತೆ ರಣರಂಗಧೀರರು. ರಾಜಕಾರಣ ಧುರಂಧರರು-ಮಹಾ ದಾನಿಗಳು. ಸದ್ಬ್ರಾಹ್ಮಣರು. ಇವರ ಆದೇಶದಂತೆ ವಡ್ಡಿವಾಡಿಯ ಮತ್ಸ್ಯ ರಾಜನಾದ ಶ್ರೀಜಯಂತನೆಂಬ ದೊರೆಯು ಕ್ರಿ.ಶ. 1292 ರಲ್ಲಿ ಸಿಂಹಾಚಲದಲ್ಲಿ ದಾನಶಾಸನ ಬರೆಸಿದನು. ಈ ದೊರೆಯು ಕಳಿಂಗದೇಶದ ಗಂಗರಾಜರಿಗೆ ಸಾಮಂತನಾಗಿದ್ದನು. ಈ ರಾಜವಂಶದ ಅರ್ಜುನಮಂತಾದಿತ್ಯನು ಶ್ರೀ ಮಧ್ವಾಚಾರ್ಯರ ದ್ವೈತಮತದ ದೀಕ್ಷೆ ಪಡೆದಿದ್ದನು.

ಪೂರ್ವಾಶ್ರಮದಲ್ಲಿ ಶ್ಯಾಮಾಶಾಸ್ತ್ರಿಗಳಾಗಿದ್ದ ಇವರು ಕಳಿಂಗದ ರಾಜಧಾನಿಯಾದ ಜಗನ್ನಾಥಪುರಿಯಲ್ಲಿ ಒಂದನೇ ನರಸಿಂಹ, ಒಂದನೇ ಭಾನುದೇವ ಮತ್ತು ಎರಡನೇ ನರಸಿಂಹದೇವರಿಗೆ ಪಂತ-ಪ್ರಧಾನಿ, ರಾಜಗುರುವಾಗಿದ್ದು ಕೊಂಡು ರಾಜ್ಯ ರಕ್ಷಣೆಯಲ್ಲಿ ಮಹತ್ವದ ಪಾತ್ರ ವಹಿಸಿದರು.

ಇವರು ಚಾಣಕ್ಯನಂತೆ ರಾಜಕಾರಣದಲ್ಲಿ ಚತುರರಾಗಿದ್ದರು. ಒಮ್ಮೆ

ಶಬರರಾಜನೊಬ್ಬನು ಕಳಿಂಗ ದೇಶದ ಮೇಲೆ ಪ್ರಸಿದ್ಧ ಪುಣ್ಯಕ್ಷೇತ್ರವಾದ ಶ್ರೀ ಕೂರ್ಮದ ಮೇಲೆ ಧನದಾಸೆಯಿಂದ ದಂಡೆತ್ತಿ ಬಂದನು. ಆ ಸಮಯದಲ್ಲಿ ಶ್ಯಾಮಶಾಸ್ತ್ರಿಗಳು ತೋರಿಸಿದ ಶೌರ್ಯ ಸಾಹಸಗಳು ಶಾಸನಸ್ಥವಾದವು.

ಶಾಸನದಲ್ಲಿ ಹೀಗೆ ಹೇಳಿದೆ :

ಕೂರ್ಮ ದೇವಾಲಯವನ್ನು ರಕ್ಷಿಸುವುದು ಅವರ ಮುಖ್ಯವ್ರತವಾಗಿತ್ತು. ಆ ದೇವಸ್ಥಾನವನ್ನು ಸುಲಿಯಲು ಬಂದ ಲೂಟಿಗಾರರ ತಂಡದಮೇಲೆ (ನರಹರಿ ತೀರ್ಥರು) ಶ್ಯಾಮಶಾಸ್ತ್ರಿಗಳು ಹಸಿದ ಹುಲಿಯಂತೆ ಎರಗಿ ತಮ್ಮ ಕರಾಳಖಡ್ಗದಿಂದ ಆ ಪುಂಡರ ತಂಡವನ್ನೆಲ್ಲಾ ಸಂಪೂರ್ಣ ನಾಶಗೊಳಿಸಿದರು. ಅನಂತರ ದೇವಸ್ಥಾನಗಳಮೇಲಾಗಲೀ, ತಮ್ಮ ರಾಜ್ಯದಮೇಲಾಗಲೀ ಯಾರೂ ದಂಡೆತ್ತಿ ಬಾರದಂತೆ ಮಾಡಿದ ಬಳಿಕವೇ ಅವರು ತಮ್ಮ ಖಡ್ಗಕ್ಕೆ ವಿಶ್ರಾಂತಿ ಇತ್ತುದು.

ಶ್ರೀ ನರಹರಿತೀರ್ಥರು ಕಳಿಂಗ ರಾಜ್ಯವನ್ನು ಆಳುತ್ತಿದ್ದಾಗ ಶ್ರೀ ಕೂರ್ಮ ಕ್ಷೇತ್ರದಲ್ಲಿ ಶ್ರೀಯೋಗಾನರಸಿಂಹನ ವಿಗ್ರಹವನ್ನು ಪ್ರತಿಷ್ಠಿಸಿದರು. ಆ ಸಮಯದಲ್ಲಿ ಅವರು ದೇವರಿಗೆ ಹಾಕಿಕೊಟ್ಟದತ್ತಿಯ ಶಾಸನದಲ್ಲಿ ನರಹರಿತೀರ್ಥರಿಗೆ ಸಂಬಂಧಿಸಿದಂತೆ ಅನೇಕ ವಿಷಯಗಳು ಬೆಳಕಿಗೆ ಬಂದಿವೆ.[1]

---

೧. ದೇವಃ ಶ್ರೀಕಮಳಾವಿಳಾಸಲಹರೀಪಾತ್ರಂ ಕಲಿಪ್ರೋಲ್ಲಸತ್
ಕ್ಲೇಶಕ್ಲಿಷ್ಟಜನೇsಖಿಳಕ್ಷಿತಿತಲೇ ಸಂಲೀನಬೋಧೋದಯೇ ।
ಸ್ವೀಯಶ್ರೀಪದಪಂಕಜೈಕಶರಣಾನ್ ಸಂರಕ್ಷಿತುಂ ಸನ್ಮುನಿಃ
ಜಾತಃ ಶ್ರೀ ಪುರುಷೋತ್ತಮಾಭಿಧಮಹಾತೀರ್ಥಃ
ಸುಮಾತ್ಯಗ್ರಣೀಃ ॥

೨. ಯನ್ಮುನಿಭಾಷಿತಭಾಷ್ಯಂಭೂಷ್ಯಂ ಕಿಲ ತೀರ್ಥಿಕಪ್ರವರ ಸಂಘೈಃ ।
ಉನ್ಮದವಾದಿದ್ವಿರದಪ್ರತಿಕುಂಭಮಂಕುಶಂ ಭವತಿ ॥

೩. ಸತ್ಯಜ್ಞಾನಕಲಾಕಲೋದಯಕಲೋ ವೈಯಾಸಿಕಂ ಗೋಗಣಂ
ಮಂದೈರ್ಭಿನ್ನಪಥಪ್ರದಾರಿತಮಲಂ ಸುವ್ಯಕ್ತಭೇದೇ ಪಥಿ ।
ನೇತುಂ ಸಂಧೃತದಂಡಮಂಡಿತಕರೋ ಯಃ ಪ್ರಾದುರಾಸೀನ್ಮುನಿ—
ವ್ರಾತೈಃ ಸೇವ್ಯಪದಾರವಿಂದಯುಗಳಾದಾನಂದತೀರ್ಥೋ ಮುನಿಃ ॥

೪. ಯನ್ಮುಖನಿಃಸೃತಭಾಷಾಲಲಿತಾ ಲಲಿತಪ್ರಕಾರಪದವಿನ್ಯಾಸಾ ।
ಕಮಲಾಪತಿಪದಕಮಲಂ ಭಜತೇ ಭಜಮಾನಭವಭಯಾರಾತಿಂ ॥

ಅವರು ರಾಜಮಹೇಂದ್ರಿಯಲ್ಲಿ ನಡೆದ ಚತುಃಶ್ಶಾಸ್ತ್ರಪಂಡಿತರ ಸಭೆಗೆ ಬಂದಿದ್ದಾಗ ಶ್ರೀ ಮಧ್ವಾಚಾರ್ಯರ ವಾಗ್ವೈಖರಿಯನ್ನು ನೋಡಿ ಬೆರಗಾದರು. ವೇದವೇದಾಂತಾದಿಸರ್ವದರ್ಶನ, ಧರ್ಮಶಾಸ್ತ್ರಗಳಲ್ಲಿ ಅವರಿಗಿದ್ದ ಪಾಂಡಿತ್ಯವನ್ನು ಕಂಡು ಅವರನ್ನು ಸರ್ವಜ್ಞಾಚಾರ್ಯರೆಂದು ಹೊಗಳಿ ಅವರ ಶಿಷ್ಯರಾದರು.

ಶ್ರೀ ಮಧ್ವಾಚಾರ್ಯರು ಶ್ಯಾಮಶಾಸ್ತ್ರಿಗಳ ಘನತರವಾದ ಪಾಂಡಿತ್ಯ, ಜನ್ಮಜಾತವಾದ ವೈರಾಗ್ಯ, ಸ್ವಭಾವಸಿದ್ಧವಾದ ದೈವಭಕ್ತಿ, ಗುರುನಿಷ್ಠೆ, ತ್ಯಾಗ ವೃತ್ತಿ, ಕರ್ತವ್ಯಪ್ರಜ್ಞೆ, ಪರೋಪಕಾರಪ್ರವೃತ್ತಿಗಳನ್ನು ಕಂಡು ಸಂತುಷ್ಟರಾದ

---

೫. ಆನಂದತೀರ್ಥಭಗವತ್ಪಾದಾಚಾರ್ಯಸರಸ್ವತೀ ।
ಲೋಕೇsತ್ರ ಹರಿಪಾದಾಬ್ಜಯುಗಳಪ್ರಾಪ್ತ್ಯೇನು ಸಾ ॥

೬. ತಸ್ಮಾಲ್ಲೋಕಸುರಕ್ಷಣಾತಿನಿಪುಣಾನ್ ಸಂಪ್ರಾಪ್ತಕರ್ತವ್ಯಧೀಃ
ದ್ವೇಧ್ಯಾsಮುತ್ರ ತಥಾತ್ರ ಯೋsವತಿ ಜನಾನ್ ಕಾಳಿಂಗ
ಭೂಸಂಭವಾನ್ ।
ಪಿತ್ರಾಚಾರಮುಪೈತಿ ಸೂನುರಿತಿ ಸನ್ನೀತಿಸ್ಥಿತೋ ಧರ್ಮತಃ
ಶತ್ರುಕ್ಷ್ಮಾಪತಿವರ್ಗದುರ್ಗನಿವಹಾನ್ ಭೀತಾನ್ ಅಭೀತಃ
ಸ್ವಯಂ ॥

೭. ಯಶ್ಚ ಶ್ರೀಕಮಠಾಧಿನಾಯಕಮಹಾಕಾರ್ಯೈಕಬದ್ಧವ್ರತಃ
ತಸ್ಯ ಪ್ರಚ್ಯುತಿವಾರಣಾಯ ಶಬರಾನೀಕಕ್ಷಿತಿಧ್ವಾಂಸನಂ ।
ಧತ್ತೇ ಸತ್ಕರವಾಲಮಸ್ಕತಟಿತಾಸಂತ್ಯಕ್ತಜೀವೇ ರಿಪೌ
ಹಂತವ್ಯಾನ್ ಅವಶೇಷಣಾನ್ ನಿಜವಿಧಿನೋರ್ವ ಯಸ್ಯ
ಬೋಧ್ಯಸ್ತರಾಂ ॥

೮. ತೇನಾನೇನ ಶ್ರೀಮನ್ನರಿಹರಿತೀರ್ಥಾಖ್ಯಮುನಿವರೇಣ್ಯೇನ ।
ಕಲಿಸಮಯಪ್ರಹ್ಲಾದಪರಿತೋಷ್ಯನ್ನಹರಿರೂಪೇಣ ॥

೯. ಸ್ವಸ್ತಿ ಶ್ರೀಶಕವತ್ಸರೇ ಹುತವಹವ್ಯೋಮದ್ವಯಕ್ಷ್ಮಾಯುತೇ
ಮೇಷೇ ಶುಕ್ಲಶಶಾಂಕಶೇಖರದಿನೇ ವಾರೇ ಚ ಸೌಮ್ಯೇ ವರೇ ।
ಪ್ರಾಸಾದಂ ಕಮಠಾಧಿಪಸ್ಯ ಪುರತೋ ನಿರ್ಮಾಯ ಶರ್ಮಪ್ರದೋ
ಯೋಗಾನಂದನೃಸಿಂಹ ಏಷ ಭಗವಾನ್ ಪ್ರೀತ್ಯಾ ಪ್ರತಿಷ್ಠಾಪಿತಃ ॥

ಪೂರ್ಣಬೋಧರು ಶ್ಯಾಮಶಾಸ್ತ್ರಿಗಳಿಗೆ ಸನ್ಯಾಸಾಶ್ರಮವನ್ನು ಇತ್ತು ನರಹರಿ ತೀರ್ಥರು ಎಂದು ನಾಮಕರಣ ಮಾಡಿದರು.1

---

1) ಶ್ರೀ ನರಹರಿತೀರ್ಥರಿಗೆ ಸಾಕ್ಷಾತ್ ಶ್ರೀ ಮಧ್ವಾಚಾರ್ಯರಿಂದ ಸನ್ಯಾಸಾಶ್ರಮವಾಗದೆ ಪದ್ಮನಾಭತೀರ್ಥರಿಂದ ಆಯಿತೆಂಬ ಒಂದು ಆಧಾರರಹಿತವಾದ ವಾದವಿದೆ. ಇದರಲ್ಲಿ ಹುರುಳಿಲ್ಲ. ಸತ್ಯನಿಧಿವಿಲಾಸ, ಅರ್ಚಾಗತಿಕ್ರಮ, ಜಯತೀರ್ಥ ವಿಜಯ, ವಾಶಿಷ್ಠ ರಾಮಾಯಣ, ಮುಂತಾದ ಗ್ರಂಥಗಳಿಂದ ಅವರು ಮಧ್ವಾಚಾರ್ಯರಿಂದಲೇ ನೇರ ಸನ್ಯಾಸ ಸ್ವೀಕರಿಸಿದರೆಂದು ತಿಳಿಯುತ್ತದೆ.

ವಿರಕ್ತಂ ಕಂಚನಾಸನ್ನಮಂತೇವಾಸಿನಮಾತ್ಮನಃ ।
ಆನಂದತೀರ್ಥೋ ವಿದಧೇ ನಾಮ್ನಾ ನರಹರಿಂ ಯತಿಂ ॥
—ಸತ್ಯನಿಧಿ ವಿಲಾಸ.

ಭಗವತ್ಪಾದಸಂಪ್ರಾಪ್ತಸನ್ಯಾಸೇ— ಅರ್ಚಾಗತಿಕ್ರಮ
ಪುರಾ ಬದರ್ಯಾಶ್ರಮಯಾನತಃ ಪ್ರಾಗಾನಂದತೀರ್ಥೋ
ರಜತಾಸನಸ್ಥೇ ।
ತಸ್ಮಾದನುಜ್ಞಾಂ ನೃಹರೀಂದ್ರತೀರ್ಥಃ ಪ್ರಾಪ್ಯಾನ್ವಗಾದ್ದಿಗ್ವಿಜಯೇ
ಸಶಿಷ್ಯಃ ॥
—ಜಯತೀರ್ಥವಿಜಯ.

ತಸ್ಯಾಂ ನಗರ್ಯಾಂ ಯತಿರಾಟ್ ನಾಮ್ನಾ ನರಹರಿಃ ಶ್ರುತಃ ।
ಸ್ವಗುರೋರಾಜ್ಞಯಾ ತತ್ರ ಪ್ರಾಪ್ತಂ ಸ್ವರಘುಪಸ್ಯ ಸಃ ॥
ರಾಮಚಂದ್ರಂ ಸ ಸಂಗೃಹ್ಯ ಗುರವೇ ಚಾರ್ಪಯದ್ಯತಿಃ ॥
ಗುರುಣಾ ಪೂಜಿತಂ ರಾಮಂ ತತಃ ಸ್ವಯಮಪೂಜಯತ್ ॥
—ವಾಶಿಷ್ಠ ರಾಮಾಯಣ.

ದದೌ ತುರ್ಯಾಶ್ರಯಂ ತುಷ್ಟಃ ಚತುರ್ಭ್ಯಃ ಸಂಸ್ಕೃತಿಚ್ಛಿದೇ ।
ತತ್ರಾದ್ಯಃ ಪದ್ಮನಾಭಾಖ್ಯಃ ದ್ವಿತಿಯೋ ನೃಹರಿಃ ಸ್ಮೃತಃ ॥
—ಆನಂದತೀರ್ಥ ಕಥಾ ಕಲ್ಪತರು

ಸುಖತೀರ್ಥಮುನಿಸ್ತಸ್ಮೈ ದತ್ವಾ ತುರ್ಯಾಶ್ರಮಂ ತತಃ ।
ದದೌ ನೃಹರಿತೀರ್ಥೋಯಮಿತಿ ನಾಮ ಮುದಾನ್ವಿತಃ ॥
—ಗುರುವಂಶಕಥಾ

ಶ್ರೀ ಮಧ್ವಾಚಾರ್ಯರು ತಮ್ಮ ಸಂಗಡ ಉಡುಪಿಗೆ ಬಂದ (ಶ್ಯಾಮಶಾಸ್ತ್ರಿ) ನರಹರಿತೀರ್ಥರಿಗೆ ಮಹತ್ವದ ಕಾರ್ಯವೊಂದನ್ನು ಒಪ್ಪಿಸಿ ಮತ್ತೆ ಅವರನ್ನು ಕಳಿಂಗದೇಶಕ್ಕೆ ಕಳುಹಿಸಿಕೊಟ್ಟರು. ಅವರ ರಾಜಕಾರಣಧುರಂಧರತೆ, ದೇವಸ್ಥಾನ ಹಾಗೂ ಧರ್ಮಕ್ಷೇತ್ರಗಳ ಸಂರಕ್ಷಣದೀಕ್ಷೆ, ಲೋಕಕ್ಷೇಮಾಂಕ್ಷೆಗಳನ್ನು ತಿಳಿದಿದ್ದ ಆಚಾರ್ಯರು ಲೋಕಾನುಗ್ರಹಾರ್ಥ ಈ ಕಾರ್ಯ ವಹಿಸಿದರು.

ಈ ಸಮಯದಲ್ಲಿ ಕಳಿಂಗ ದೇಶದಲ್ಲಿ ದೊರೆಯು ಆಕಸ್ಮಿಕವಾಗಿ ಮಡಿದಿದ್ದನು. ಬಾಲ್ಯಾವಸ್ಥೆಯ ರಾಜಕುಮಾರ, ಅಧಿಕಾರಕ್ಕಾಗಿ ಕಚ್ಚಾಡುವ ಮಂತ್ರಿಗಳು, ಸೇನಾಪತಿಗಳು, ಹೊರಗಿನ ಶತ್ರುಪೀಡೆ, ಅಂತಃಕಲಹಗಳಲ್ಲಿ, ರಾಜ್ಯವನ್ನು ಉಳಿಸುವುದು ಹೇಗೆಂದು ಯೋಚಿಸುತ್ತಿದ್ದ ಮಹಾರಾಣಿಗೆ ನರಹರಿತೀರ್ಥರು ದೊರೆತುದು ನಿಧಿ ದೊರೆತಂತಾಯಿತು. ಆಗ ಆನೆಯ ಕೈಲಿತ್ತ ಮಾಲಿಕೆ, ನಗರಕ್ಕೆ ಬಂದು ದೇವರದರ್ಶನ ಮಾಡಿ ಹೊರ ಬರುತ್ತಿದ್ದ ನರಹರಿತೀರ್ಥರ ಕೊರಳಿಗೆ ಬಿದ್ದಿತು. ಬೇರೆ ದಾರಿಯಿಲ್ಲದೆ ಅವರು ರಾಜ್ಯಸೂತ್ರಗಳನ್ನು ಕೈಕೊಳ್ಳಬೇಕಾಯಿತು. ಅವರು ಸ್ವಾರ್ಥರಹಿತರಾಗಿ, ನ್ಯಾಯನಿಷ್ಠುರವಾದ ಶಾಸನ ಕೌಶಲ್ಯದಿಂದ ರಾಜ್ಯದಲ್ಲಿ ಸುಖ, ಶಾಂತಿ, ತುಷ್ಟಿ, ಪುಷ್ಟಿಗಳು ನೆಲೆಸುವಂತೆ ಮಾಡಿದರು.

ಈ ಸಮಯದಲ್ಲಿ ಅವರು ಅನೇಕ ದೇವಾಲಯಗಳ ಜೀರ್ಣೋದ್ಧಾರ ಕಾರ್ಯ ಕೈಗೊಂಡರು. ಕ್ರಿ. ಶ. 1221ರಲ್ಲಿ ಸಿಂಹಾಚಲನರಸಿಂಹಸ್ವಾಮಿಗೆ ಅನೇಕ ದಾನಗಳನ್ನು ಮಾಡಿದರು. ವಡ್ಡಿವಾಡಿಯ ಮತ್ಸ್ಯವಂಶದ ಜಯಂತ ರಾಜನನ್ನು ಇಂಥ ಕಾರ್ಯಕ್ಕೆ ಪ್ರೇರೇಪಿಸಿದರು. ಸಿಂಹಾಚಲದಲ್ಲಿ ನರಹರಿ ಮಠವನ್ನು ಸ್ಥಾಪಿಸಿದರು. ಅದರ ಉಸ್ತುವಾರಿಗಾಗಿ ತಮ್ಮ ಶಿಷ್ಯರಾದ ಆಡಳಿತ ದಕ್ಷರಾದ ಜಗನ್ನಾಥತೀರ್ಥರನ್ನು ನೇಮಿಸಿದರು.

ಶ್ರೀಕೂರ್ಮಕ್ಷೇತ್ರದಲ್ಲಿ ದೇವರ ದೀಪಾರಾಧನೆಗಾಗಿ ದೀಪಸ್ತಂಭಗಳನ್ನೂ ಯೋಗಾನಂದನರಸಿಂಹ ದೇವರಿಗಾಗಿ ಗದ್ದೆ ತೋಟಗಳನ್ನೂ ದಾನ ಮಾಡಿದರು. ಅಲ್ಲಿ ಪ್ರತಿಷ್ಠಿಸಿದ ಸೀತಾರಾಮಲಕ್ಷ್ಮಣಮೂರ್ತಿಗಳ ಪೂಜೆಗಾಗಿ ಮಾಶಾಸನ, ವರ್ಷಾಸನಗಳನ್ನು ಹಾಕಿಕೊಟ್ಟರು.

ನರಹರಿತೀರ್ಥರು ಹನ್ನೆರಡು ವರ್ಷಗಳಕಾಲ ಕಳಿಂಗರಾಜ್ಯಭಾರ ಮಾಡಿ ಬಳಿಕ ಅದನ್ನು ಅಲ್ಲಿನ ಪ್ರಗಲ್ಭನಾದ ರಾಜಕುಮಾರನಿಗೆ ಹಿಂದಕ್ಕೆ ಕೊಟ್ಟರು. ಈ ಸಮಯದಲ್ಲಿ ರಾಜಾಮಾತ್ಯರ ಅಪೇಕ್ಷೆಯಂತೆ ರಾಜಭಂಡಾರದಲ್ಲಿದ್ದ ಶ್ರೀಬ್ರಹ್ಮ

ಕರಾರ್ಚಿತಮೂಲಸೀತಾರಾಮರ ವಿಗ್ರಹಗಳನ್ನು ಪಡೆದು ಉಡುಪಿಗೆ ಹಿಂದಿರುಗಿದರು. ಈ ವಿಗ್ರಹಗಳ ವಿರಹದಿಂದ ರಾಜಬಂಧುಗಳು ಅವನ್ನು ಮತ್ತೆ ಪಡೆಯಲು ಪ್ರಯತ್ನಿಸಿದರಂತೆ. (ಕೆಲವರು ಅಗ್ನಿಕಾಂಡವಾಯಿತೆಂದು ಹೇಳುತ್ತಾರೆ. ಈ ಮೂಲಸೀತಾರಾಮರ ವಿಗ್ರಹಗಳನ್ನು ಶ್ರೀ ಮಧ್ವಾಚಾರ್ಯರಿಗೆ ಕಾರ್ತೀಕ ಶುದ್ಧ ದ್ವಾದಶಿಯಂದು ಒಪ್ಪಿಸಿದರು. ಅವನ್ನು ಮಾಘ ಶುದ್ಧ ನವಮಿಯವರೆಗೆ ಕೈಯಾರ ತಂತ್ರಸಾರೋಕ್ತವಾಗಿ ಪೂಜಿಸಿ, ಅನಂತರ ಪ್ರಥಮಶಿಷ್ಯರಾದ ಪದ್ಮನಾಭತೀರ್ಥರಿಗೆ ಅನುಗ್ರಹಿಸಿದರು. ಇದಾದ ಅತ್ಯಲ್ಪಕಾಲದಲ್ಲಿ ಶ್ರೀ ಮಧ್ವಾಚಾರ್ಯರು ಅದೃಶ್ಯರಾಗಿ ಕಡೆಯಬಾರಿಗೆ ವಿಶಾಲಬದರಿಗೆ ತೆರಳಿದರು.

## ಶ್ರೀ ಮಾಧವತೀರ್ಥರು (ಕ್ರಿ. ಶ. 1333—1350)

ಶ್ರೀ ಮಧ್ವಾಚಾರ್ಯರ ಸಾಕ್ಷಾತ್‌ಶಿಷ್ಯರಲ್ಲಿ ಶ್ರೀ ಮಾಧವತೀರ್ಥರು ಮೂರನೆಯವರು. ಇವರ ಪೂರ್ವಾಶ್ರಮದ ಹೆಸರು ವಿಷ್ಣುಶಾಸ್ತ್ರಿಗಳು ಎಂದು. ಇವರಿಗೆ ಕೃಷ್ಣಶಾಸ್ತ್ರಿಗಳೆಂದೂ ಹೆಸರಿತ್ತು.1

ಶ್ರೀ ಮಾಧವತೀರ್ಥರು ಉತ್ತರ ಕರ್ನಾಟಕದವರು. ಅವರು ಕ್ರಿ. ಶ. 1333ರಲ್ಲಿ ನರಹರಿತೀರ್ಥರಿಂದ ಆಶ್ರಮವನ್ನು ಸ್ವೀಕರಿಸಿ 17 ವರ್ಷಗಳವರೆಗೆ ಅಧಿಕಾರದಲ್ಲಿದ್ದು ಮಣ್ಣೂರಿನಲ್ಲಿ ಬೃಂದಾವನಸ್ಥರಾದರು.

ವಿದ್ಯಾರಣ್ಯರು ಆ ಸಮಯದಲ್ಲಿ ವಿಜಯನಗರದ ಮಂತ್ರಿಗಳೂ ರಾಜಗುರುಗಳೂ ಆಗಿದ್ದರು. ಅವರು ಸಾಯಣಾಚಾರ್ಯರ ನೆರವಿನಿಂದ ವೇದಭಾಷ್ಯರಚನೆಯ

---

"ತತಃ ಕರ್ಣಾಟಕಮಿತಿ ಶಬ್ದಿತಂ ಕೃಷ್ಣಶಾಸ್ತ್ರಿಣಂ ।
ಸನ್ನ್ಯಸ್ಯ ಸೌಖ್ಯತೀರ್ಥಸ್ತು ಬ್ರಹ್ಮಚರ್ಯಸ್ಥಿತಂ ತದಾ ।
ಶ್ರೀಮಾನ್ ಮಾಧವತೀರ್ಥೇತಿ ..... ....."

ಎಂದು ಗುರುಚರ್ಯಾ ಗ್ರಂಥದಲ್ಲೂ, ಗುರುವಂಶಕಲ್ಪತರು ಗ್ರಂಥದಲ್ಲೂ ಹೇಳಿದೆ.

ತತ್ರಾಸ್ತೇ ರಾಮದೇವಃ ಸಕಲಸುರಪತಿಬ್ರಹ್ಮಪೂಜ್ಯಾಂಘ್ರಿಕಂಜಃ ।
ಸೀತಾಯುಕ್ತಸ್ತಮೇನಂ ಚತುರತರಧಿಯೋ ಹ್ಯಾನಯೇತ್ಯುಕ್ತ ಆಸೀತ್॥
ಪುರಾ ಬದರ್ಯಾಶ್ರಮಯಾನತಃ ಪ್ರಾಗಾನಂದತೀರ್ಥೇ ರಜತಾಸನಸ್ಥೇ

ಕಾರ್ಯ ಕೈಗೊಂಡಿದ್ದರು. ಅವರು ಕೈಗೊಂಡಿದ್ದ ಕಾರ್ಯವನ್ನೇ ಮಾಧವ ತೀರ್ಥರು ತಾವೊಬ್ಬರೇ ಕೈಗೊಂಡು ಅವರ ಗ್ರಂಥಕ್ಕಿಂತಲೂ ಉತ್ತಮವಾದ ವೇದಭಾಷ್ಯವನ್ನು ರಚಿಸಿದರಂತೆ. ಇದು ಈಗ ಉಪಲಬ್ಧವಿಲ್ಲ.

ಇವರ ಶ್ರೇಷ್ಠತಮ ಗ್ರಂಥವನ್ನು ನೋಡಿ ಸಹಿಸದ ಅದ್ವೈತಿಗಳು ಅಸೂಯೆಪಟ್ಟು ಅವರನ್ನು ಹಿಂಸಿಸಿ ವಿಜಯನಗರದಿಂದ ಹೊರಗೆ ಹೋಗುವಂತೆ ಮಾಡಿದರು.

ಶ್ರೀವೈಷ್ಣವಪಂಡಿತರಾದ ಶ್ರೀವೇದಾಂತದೇಶಿಕರೂ ಅವರಿಂದ ಕಿರುಕುಳ ಅನುಭವಿಸಿ, ಪ್ರತಿಭಟನೆಯಾಗಿ ಒಂದು ಶ್ಲೋಕ ರಚಿಸಿದರಂತೆ.1

ಭೂಮಂಡಲದ ಯಾವುದೋ ಒಂದು ಮೂಲೆಯಲ್ಲಿ ನೂರರಲ್ಲಿ ಒಂದು ಅಂಶದಷ್ಟು ಮಾತ್ರ ಮೂಲೆಸ್ಥಳವನ್ನು ಆಳುವುದರಿಂದಲೇ ಗರ್ವದಿಂದ ಉಬ್ಬಿ ಹೋದ ಕ್ಷುದ್ರರಾಜರನ್ನು ಮೆಚ್ಚಿಸಲಿಕ್ಕಾಗಿ ಚಾಟು ರಚನೆಗಳನ್ನು ಮಾಡಿ, ಅವರನ್ನು ಹೊಗಳಿ, ಹಾಡಿ, ಅನುಸರಣೆ ಮಾಡುವ ಅಲ್ಪಜನರನ್ನು ನಾವು ಧನ್ಯರೆಂದು ತಿಳಿಯುವುದಿಲ್ಲ. ಮುಷ್ಟಿ ಅವಲಕ್ಕಿಯನ್ನು ಕೊಟ್ಟ ಕುಚೇಲನಿಗೆ ಕುಬೇರಸದೃಶ ಐಶ್ವರ್ಯವನ್ನು ದಯಪಾಲಿಸಿದ ಆ ಶ್ರೀಹರಿಯನ್ನೇ ಸೇವೆ ಮಾಡುತ್ತೇವೆ— ಎಂದು ತಿಳಿಸಿದರಂತೆ.

ಇಂಥ ಕ್ಷಾತ್ರಸ್ವಭಾವದಿಂದಲೇ ಮಾಧವತೀರ್ಥರು ಯಾವುದೇ ರಾಜರ ಆಶ್ರಯಕ್ಕೆ ಹೋಗಲು ಇಚ್ಛಿಸದೆ, ಅವರು ಕರ್ನಾಟಕವನ್ನು ಬಿಟ್ಟು ಮಹಾರಾಷ್ಟ್ರಕ್ಕೆ ಹೋದರು. ಅಲ್ಲಿ ಪಾಂಡುರಂಗಕ್ಷೇತ್ರವಾದ ಭೀಮಾತೀರದಲ್ಲಿ ಸಂಚರಿಸಿದರು. ದುರ್ವಾದಿಗಳನ್ನು ಗೆದ್ದು ವೈಷ್ಣವ ಮತವನ್ನು ಸ್ಥಾಪಿಸಿದರು. ಭೀಮಾತೀರದ ಮಣ್ಣೂರು ಎಂಬಲ್ಲಿ ಧ್ರುವರಾಜನಿಂದ ಪ್ರತಿಷ್ಠಿತವೆಂದು ಹೇಳಲಾದ ಕೇಶವದೇವರನ್ನು ಸಂದರ್ಶಿಸಲು ಅಲ್ಲಿಗೆ ಬಂದರು.

ಆ ಸಮಯದಲ್ಲಿ ಅಲ್ಲಿನ ವಿಶ್ವವಿದ್ಯಾನಿಲಯದ ಕುಲಪತಿ ಜೈನ ಮತದ ಪದ್ಮರಾಜಪಂಡಿತನು ವಿಜಯನಗರಕ್ಕೆ ಹೋಗಬೇಕಾಗಿ ಬಂದುದರಿಂದ, ಈ

---

1) ಕ್ಷೋಣೀಕೋಣಶತಾಂಶಪಾಲನಕಲಾದುರ್ವಾರಗರ್ವಾನಲ
ಕ್ಷುಭ್ಯತ್‌ಕ್ಷುದ್ರನರೇಂದ್ರಚಾಟುರಚನಾಧನ್ಯಾನ್ನ ಮನ್ಯಾಮಹೇ ।
ದೇವಂ ಸೇವಿತುಮೇವ ನಿಶ್ಚಿನುಮಹೇ ಯೋಸೌದಯಾಲುಂ ಪರಂ
ಧಾನಾಮುಷ್ಟಿಮುಚೇ ಕುಚೇಲಮುನಯೇ ದತ್ತೇಽಸ್ಯ ವಿತ್ತೇಶತಾಮ್ ॥

ವಿಶ್ವವಿದ್ಯಾನಿಲಯದ ಕಾರ್ಯಭಾರವನ್ನು ನೋಡಿಕೊಳ್ಳಲು ಮಾಧವತೀರ್ಥರನ್ನು ಪ್ರಾರ್ಥಿಸಿದನು.

ಅದರಂತೆ ಮಾಧವತೀರ್ಥರು ಮಣ್ಣೂರು ಸಮೀಪದ ಭೀಮಾತೀರದ ಗ್ರಾಮದಲ್ಲಿ ನಿಂತು ಅನೇಕರಿಗೆ ವಿದ್ಯಾದಾನ ಮಾಡಿದರು. ಅವರು ಶ್ರೀ ಮಧ್ವಾಚಾರ್ಯರಿಂದ ಲಬ್ಧವಾದ ವೀರರಾಮ ವಿಗ್ರಹವನ್ನು ತಮ್ಮ ಶಿಷ್ಯರಾದ ಮಧುಹರಿತೀರ್ಥರಿಗೆ ಕೊಟ್ಟು ಇಂದಿನ ಮಜ್ಜಿಗೆಹಳ್ಳಿ (ತಂಬಿಹಳ್ಳಿ) ಮಾಧವತೀರ್ಥರ ಮಠಕ್ಕೆ ಮೂಲಪುರುಷರಾದರು. ಸರ್ವಜ್ಞಸಿಂಹಾಸನದಲ್ಲಿ ಶ್ರೀ ಅಕ್ಷೋಭ್ಯತೀರ್ಥರನ್ನು ಅಭಿಷಿಂಚಿಸಿ, ಅಲ್ಲೇ ಬೃಂದಾವನಸ್ಥರಾದರು.

ಅವರು ತಮ್ಮ ಸಂಸ್ಥಾನದ ವಿಗ್ರಹವಾದ ವಂಶರಾಮನು ಪೆಟ್ಟಿಗೆಯಿಂದ ಹಾರಲೆಣಿಸಿದಾಗ ಅವನನ್ನು ಬಂಧನ ಮಾಡಿದ ಮಹಾತ್ಮರು. ಅವರು 17 ವರ್ಷಗಳು ಪೀಠಾಧಿಪತಿಗಳಾಗಿದ್ದು ವಿಕೃತಿಸಂವತ್ಸರದ ಭಾದ್ರಪದ ಬಹುಳ ಅಮಾವಾಸ್ಯೆಯಂದು ಆ ಗ್ರಾಮದಲ್ಲಿಯೇ ಬೃಂದಾವನಸ್ಥರಾದರು. ಭೀಮರಥಿಯ ದಡದಲ್ಲಿದ್ದ ಆ ಗ್ರಾಮದಿಂದ ಶ್ರೀ ಸತ್ಯನಾರಾಯಣತೀರ್ಥರು ಮಣ್ಣೂರಿಗೆ ತಂದು ಶ್ರೀ ವೇದೇಶತೀರ್ಥರ ಬೃಂದಾವನದ ಬಳಿ ಪುನಃ ಪ್ರತಿಷ್ಠಿಸಿದರು.

ಶ್ರೀ ಮಾಧವತೀರ್ಥರು ಶ್ರೀ ಮಧುಹರಿತೀರ್ಥರೆಂಬ ಶಿಷ್ಯರಿಗೆ ವೀರರಾಮದೇವರ ವಿಗ್ರಹವನ್ನು ಕೊಟ್ಟಿರಷ್ಟೇ. ಇವರ ಪರಂಪರೆಯ ಮಠವೇ ಇಂದಿನ ಕೋಲಾರದ ಸಮೀಪದಲ್ಲಿರುವ ಪಾಲಾರುನದಿ ತೀರದ ತಂಬಿಹಳ್ಳಿ (ಮಜ್ಜಿಗೆಹಳ್ಳಿ) ಮಠವೆಂದು ಪ್ರಸಿದ್ಧವಾಗಿದೆ.

ಮಾಧವತೀರ್ಥರು ಸರ್ವಜ್ಞ ಸಂಸ್ಥಾನಕ್ಕೆ ಶ್ರೀ ಮಧ್ವಾಚಾರ್ಯಕರಾರ್ಚಿತ ಪ್ರತಿಮೆಗಳನ್ನೂ ಶಾಲಗ್ರಾಮಗಳನ್ನೂ ಶ್ರೀ ಅಕ್ಷೋಭ್ಯತೀರ್ಥರಿಗೆ ಕೊಟ್ಟು ನಿಶ್ಚಿಂತರಾದರು.1

---

1) ಅವುಗಳ ವಿವರ ಹೀಗಿದೆ :

ಲಕ್ಷ್ಮೀನಾರಾಯಣಶ್ರೀಹಯಮುಖದಧಿಕೃದ್ವಾಮನಶ್ರೀಧರಾಖ್ಯಾನ್ ।
ವ್ಯಾಸಶ್ರೀಜೇತೃರಾಮಾನಿವನಜಸಹಿತಶ್ರೀಜಗನ್ಮೂಲರಾಮಾನ್ ।
ವಂದೇ ಶ್ರೀರಾಮನಿವ್ಯಾನಮಿತವಿನುತಸತ್ವಂ ಚ ಸೌದರ್ಶನಾಖ್ಯಾನ್
ಪಂಚಾಯರ್ಾಂಕಾಂಘ್ರಿಬಾಂಕೌ ಭುಜಯುಗಸಹಿತಾವಕ್ಷಯಾಖ್ಯಂ ಚ ಪಾತ್ರಂ ॥

# ಪ್ರಾಸ್ತಿಕಮನೆತನದ ಇತಿಹಾಸ

ಜಯತೀರ್ಥರ ಪೂರ್ವಾಶ್ರಮದ ಹೆಸರು ಧೋಂಡೋನರಸಿಂಹಪಂತ ರೆಂದು. ಧೊಂಡು ಎಂದರೆ ಮರಾಠಿ ಭಾಷೆಯಲ್ಲಿ ಕಲ್ಲು ಎಂದರ್ಥ.1 ಬಹು ಕಾಲ ಮಕ್ಕಳಿಲ್ಲದಿದ್ದ ಹಿರಿಯರೊಬ್ಬರಿಗೆ ಈ ಹೆಸರು ಬಂದಿತ್ತು. ಈ ಹೆಸರು ಅವರ ವಂಶದಲ್ಲಿ ಸಾಮಾನ್ಯವಾಗಿತ್ತು. ಧೋಂಡೋಪಂತನ ತಂದೆ ಧುಂಡಿರಾಜ. ಕದಂಬ ವಂಶದ ದೊರೆಗಳು ಬನವಾಸಿಯಲ್ಲಿ ಆಳುತ್ತಿದ್ದಾಗ ಈ ವಂಶದ ಧುಂಡಿ ರಾಜನೆಂಬ ಒಬ್ಬ ಸುಪ್ರಸಿದ್ಧ ವ್ಯಕ್ತಿಯು ಬಳ್ಳಿಗಾವೆಯಲ್ಲಿ ಒಂದು ಬೃಹದ್ಗಣ ಪತಿಯನ್ನು ಪ್ರತಿಷ್ಠಿಸಿದನು. ಇಂದಿಗೂ ಆ ಗಣಪತಿಯನ್ನು ಧುಂಡಿರಾಜಗಣ ಪತಿಯೆಂದು ಕರೆಯುತ್ತಾರೆ. ಅವನ ಹೆಸರನ್ನೇ ತಂದೆ ಕೇಶವಭಟ್ಟನು ತನ್ನ ಮಗ ರಘುನಾಥನಿಗೆ ಇಟ್ಟಿದ್ದನು. ಹೀಗಾಗಿ ರಘುನಾಥನನ್ನು ಧೊಂಡೋರಘು ನಾಥನೆಂದೂ, ಧುಂಡಿರಾಯನೆಂದೂ ಜನರು ಗೌರವದಿಂದ ಕರೆಯುತ್ತಿದ್ದರು.

---

1) ಜಯತೀರ್ಥರ ಪೂರ್ವಾಶ್ರಮದ ಹೆಸರು ಧೋಂಡೋನರಸಿಂಹಪಂತ ಎಂದು ಇರಬೇಕೆಂದು ಶ್ರೀ ಪಂಢರೀನಾಥಾಚಾರ್ಯ ಗಲಗಲಿ ಅವರು ಮಾಧ್ವ ವಾಙ್ಮಯ ತಪಸ್ವಿಗಳು ಎಂಬ ಗ್ರಂಥದಲ್ಲಿ ಊಹಿಸಿದ್ದಾರೆ. (ಪುಟ. 246) ಊಹಿಸಲು ಕರ್ಕಿಹಳ್ಳಿ ಶ್ರೀನಿವಾಸಾಚಾರ್ಯರ "ಜಯೀಂದ್ರೋದಯಃ" ಎಂಬ ಗ್ರಂಥದ ಉಲ್ಲೇಖವೆಂದು ಅವರು ತಿಳಿಸುತ್ತಾರೆ.

ಕನ್ನಡ ನಾಡಿನಲ್ಲಿ ಕಲ್ಲಪ್ಪ, ಗುಂಡಪ್ಪ, ತಿಪ್ಪಣ್ಣ ಮುಂತಾದ ವಿಚಿತ್ರ ಹೆಸರುಗಳು ಬಳಕೆಯಲ್ಲಿವೆ. ಹುಟ್ಟಿದ ಮಗುವು ಕಲ್ಲು ಗುಂಡಿನಂತೆ ಚಿರಾಯು ವಾಗಿರಲಿ ಎಂದು ಹಿರಿಯರು ಇಂಥ ವಿಚಿತ್ರವಾದ ಹೆಸರುಗಳನ್ನು ಇಡುವ ಪದ್ಧತಿ ಕನ್ನಡನಾಡಿನಲ್ಲಿ ಇಂದೂ ಇದೆ.

ಪಂತ ಎಂಬುದು ಪಂಡಿತಶಬ್ದದ ಅಪಭ್ರಂಶ. ಇದು ಗೌರವದ ಸಂಬೋಧನೆಯಾಗಿದೆ.

ದುಂಡಿಕಲ್ಲಾಗು ಬಂಡೆಕಲ್ಲಾಗು
ಅಗಸೆಯ ಮುಂದಿನ ಬೋರ್ಗಲ್ಲಾಗು
ಉದ್ದಂಡ ಆಯುಷ್ಯವಂತನಾಗು

—ಎಂದು ಮುತ್ತೈದೆಯರು ಮಕ್ಕಳಿಗೆ ಎಣ್ಣೆ ಹಚ್ಚುವಾಗ ಹರಸುವುದು ಪರಿಪಾಠ ಎಂದು ರಾಜಪುರೋಹಿತರು ಹೇಳಿದ್ದಾರೆ.

ಇವನಿಗೆ ತಕ್ಕ ಪತ್ನಿ ಸಖೂಬಾಯಿ. ಭಗವದ್ಭಕ್ತರಾದ ಈ ದಂಪತಿಗಳಿಗೆ ಬಹು ಕಾಲದ ಮೇಲೆ ಅಹೋಬಲನರಸಿಂಹನ ದಯೆಯಿಂದ ಹುಟ್ಟಿದ ಪುತ್ರನೇ ನರಸಿಂಹ. ಇವನನ್ನು ಧೊಂಡೋನರಸಿಂಹಪಂತನೆಂದೂ, ಕುಮಾರ ರಘುನಾಥನೆಂದೂ ಕರೆಯುತ್ತಿದ್ದರು.

ಇವರು ಮಂಗಳವೇಡೆಯ ದೇಶಪಾಂಡೆ ವಂಶಕ್ಕೆ ಸೇರಿದ್ದರು.1 ದೇಶಪಾಂಡೆ ಎಂದರೆ ಊರಿನ ಅಧಿಪತಿ, ಒಡೆಯ. ಈ ವಂಶದವರು ಒಂದು ಕಾಲದಲ್ಲಿ ವಿಸ್ತಾರವಾದ ಜಮಖಂಡಿ ರಾಜ್ಯಕ್ಕೆ ಒಡೆಯರಾಗಿದ್ದರು. ಈಗ ಅವರು ಮಂಗಳವೇಡೆ ಪ್ರಾಂತ್ಯಕ್ಕೆ ಅಧಿಪತಿಗಳಾಗಿದ್ದರು. ಅದನ್ನು ಸಾದಿನಾಡೆಂದೂ, ದೇಶಪಾಂಡೆಗಳನ್ನು ಸಾದೀಶ್ವರರೆಂದೂ ಕರೆಯುತ್ತಿದ್ದರು 2

ಮಂಗಳವೇಡೆಯು ಕನ್ನಡನಾಡಿನ ಇತಿಹಾಸದಲ್ಲಿ ಪ್ರಸಿದ್ಧ ಸ್ಥಳವಾಗಿತ್ತು. ಅದು ಹಿಂದಿನ ಸಾಂಗ್ಲಿ ಸಂಸ್ಥಾನದಲ್ಲಿದ್ದ ಪ್ರಮುಖ ಪಟ್ಟಣ. ಪಂಢರಪುರಕ್ಕೆ ಹದಿಮೂರು ಮೈಲಿ ದೂರದಲ್ಲಿದ್ದ ಈ ಊರು ಕಲಚೂರ್ಯ ಬಿಜ್ಜಳನ ಕಾಲಕ್ಕೆ ದೊಡ್ಡ ನಗರವಾಗಿತ್ತು. ಅವನು ಕುಂತಳ ದೇಶಕ್ಕೆ ಆಭರಣದಂತಿದ್ದ ಸಂಪದ್ಭರಿತಪಟ್ಟಣ ಮಂಗಳವೇಡೆಯನ್ನು ಆಳುತ್ತಿದ್ದನೆಂದು ಶಾಸನಗಳು ವರ್ಣಿಸಿವೆ ಆ ಕಾಲದಲ್ಲಿ ಈ ಪ್ರದೇಶವನ್ನು ತರಿಕಾಡು ವಿಷಯವೆಂದು ಕರೆಯುತ್ತಿದ್ದರು. ಚಾಲುಕ್ಯರಾಜರು ಕೆಲವು ವರ್ಷ ಇಲ್ಲಿ ಆಳುತ್ತಿದ್ದು ಅನಂತರ

---

1) ಇಂದಿನ ಗುಲ್ಬರ್ಗಾ ಜಿಲ್ಲೆಯಲ್ಲಿ ಯರಗೊಳವೆಂಬ ಗ್ರಾಮವಿದೆ. ಅದಕ್ಕೆ ಪಶ್ಚಿಮಕ್ಕೆ 12 ಮೈಲಿ ದೂರದಲ್ಲಿ ಸುಪ್ರಸಿದ್ಧ ಶಕ್ತಿ ಕ್ಷೇತ್ರವಾದ ಸನ್ನತಿ ಕ್ಷೇತ್ರವಿದೆ. ಇಲ್ಲಿನ ಅಧಿದೇವಿ ಶ್ರೀ ಚಂದಲಾಪರಮೇಶ್ವರಿ. ಇಲ್ಲಿಂದ ಎರಡು ಮೈಲಿ ದೂರದಲ್ಲಿ ಭೀಮಾನದಿಯ ತೀರದಲ್ಲಿ ಹುರಸಗುಂಡಿ ಎಂಬ ಹಳ್ಳಿ ಇದೆ. ಇಲ್ಲಿನ ಕಾಣ್ವಶಾಖೆಯ ಮಾಧ್ವವಂಶದಲ್ಲಿ ಜಯತೀರ್ಥರು ಹುಟ್ಟಿದರೆಂದು ಶ್ರೀ ನಾ ಶ್ರೀ. ರಾಜಪುರೋಹಿತರು **ಶ್ರೀಮನ್ಮಧ್ವಾಚಾರ್ಯರ ಚರಿತ್ರೆ** ಮತ್ತು **ಶ್ರೀಮಜ್ಜಯತೀರ್ಥರ ಚರಿತ್ರೆ** ಎಂಬ ಗ್ರಂಥದಲ್ಲಿ ಹೇಳಿದ್ದಾರೆ. (ಪು 17೮) ಶ್ರೀ ರಾಜಪುರೋಹಿತರ ಈ ಹೇಳಿಕೆಯು ಅವರ ಅಭಿಪ್ರಾಯವೇ ಹೊರತು ಸರ್ವಜನ ಸಮ್ಮತವಲ್ಲ.

2) ಭೀಮಾತೀರವು ಕುದುರೆಗಳಿಗೆ ಪ್ರಸಿದ್ಧಿ ಎಂದು ಹೇಳುತ್ತಾರೆ. ಆದುದರಿಂದ ಅದಕ್ಕೆ ಸಾದಿನಾಡೆಂದು ಕರೆಯುವುದುಂಟು.

ಕಲ್ಯಾಣಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡರು.

ಬಸವಣ್ಣನವರೂ ಇಲ್ಲಿ ಕೆಲವುಕಾಲ ವಾಸವಾಗಿದ್ದರೆಂದು ತಿಳಿದುಬರುತ್ತದೆ. ಹೀಗೆ ಸಾದಿನಾಡು ಹೊಯ್ಸಳ, ಚಾಲುಕ್ಯರ ಆಪದೆಸೆಯ ನಂತರ ದೇವಗಿರಿಯ ಯಾದವರ ಆಶ್ರಿತ ರಾಜ್ಯವಾಗಿತ್ತು. ಈಗ ಅವರು ದೇವಗಿರಿಯವರಿಗೆ ಕಪ್ಪ ಕೊಡುತ್ತಿದ್ದರು.

ದೊಂಢೋರಘುನಾಥಪಂತನ ತಂದೆ ಕೇಶವಭಟ್ಟನು. ಅವನ ಹಿರಿಯರು ಇಲ್ಲಿಗೆ ಬಂದು ನೆಲಸುವ ಮೊದಲು ಜಮುಖಂಡಿಯಲ್ಲಿ ವಾಸಿಸುತ್ತಿದ್ದರು. ಅದು ದೇವಗಿರಿಯಾದವರಿಗೆ ಸೇರಿತ್ತು. ಅದನ್ನು ತೊರಗಲೆ ಆರುಸಾವಿರವೆಂದು ಕರೆಯುತ್ತಿದ್ದರು. ಈ ನಾಡಿಗೆ ಇಂದಿನ ಬೆಳಗಾಂ ಜಿಲ್ಲೆಯ ಪರಸಘಡ ತಾಲ್ಲೂಕಿನ ಕೆಲವು ಭಾಗಗಳು ಸೇರಿದ್ದವು. ಇದರ ದಕ್ಷಿಣದ ಮೇರೆ ಸವದತ್ತಿಯ ರಟ್ಟರ ರಾಜ್ಯವಾಗಿತ್ತು. ಇದು ಕದಂಬರ ಕಾಲದ ಸುಪ್ರಸಿದ್ಧ ವಿದ್ಯಾಪೀಠಗಳಾದ ದೇಗಾವೆ, ವೇಣುಗ್ರಾಮ, ಹಲಸಿಗೆ ಅಗ್ರಹಾರಗಳಿಗೆ ಸಮೀಪವಾಗಿತ್ತು. ಅದಕ್ಕೂ ಪೂರ್ವದಲ್ಲಿ ಈ ಪ್ರದೇಶವು ಗೋವೆಯ ಕದಂಬವಂಶದ ಶಿವಚಿತ್ತ ಪೆರ್ಮಾಡಿ (ಕ್ರಿ. ಶ. 1148-1181) ಗೆ ಅಧೀನವಾಗಿತ್ತು. ಅವನು ಹೊಯ್ಸಳ ಯಾದವಚಕ್ರವರ್ತಿ ವೀರಬಲ್ಲಾಳದೇವನ ಮಹಾಮಂಡಲೇಶ್ವರನಾಗಿ ಈ ಭಾಗವನ್ನು ಆಳುತ್ತಿದ್ದನು.

ಈ ಕದಂಬ ಅರಸನಿಗೆ ಮುಕ್ಕಣ್ಣ (ತ್ರಿಣೇತ್ರ) ಕದಂಬನೆಂಬ ಇನ್ನೊಂದು ಹೆಸರೂ ಇತ್ತು. ದ್ವಾರಾವತೀಪುರವರಾಧೀಶ್ವರ ವಿಷ್ಣುವರ್ಧನನು (ಕ್ರಿ. ಶ. 1111-1141) ಕ್ರಿ.ಶ. 1137ರಲ್ಲಿ ಈ ಕದಂಬ ದೊರೆಯನ್ನು ಗೆದ್ದು, ಕದಂಬ ರೊಡನೆ ಸ್ನೇಹಒಪ್ಪಂದ ಮಾಡಿಕೊಂಡು ಅವನನ್ನೇ ಕದಂಬ ರಾಜ್ಯದ ಮಹಾ ಮಂಡಲೇಶ್ವರನನ್ನಾಗಿ ಮಾಡಿಕೊಂಡನು. ಇದರಿಂದ ಕದಂಬ ಹಾಗೂ ಹೊಯ್ಸ ಳರ ನಡುವೆ ಸ್ನೇಹ ಸೌಹಾರ್ದಗಳು ಏರ್ಪಟ್ಟು, ಶಿವಚಿತ್ತಪೆರ್ಮಾಡಿಯು ಬನವಾಸಿ ನಾಡನ್ನು ಆಳುತ್ತಿದ್ದನು. ಅವನ ಅಧಿಕಾರ ವ್ಯಾಪ್ತಿಗೆ ಈ ತೊರಗಲೆ ಪ್ರದೇಶವೂ ಸೇರಿತ್ತು.

ಗೋವೆಯನ್ನಾಳಿದ ಕದಂಬ ದೊರೆಗಳಲ್ಲೆಲ್ಲಾ ಇಮ್ಮಡಿ ಜಯಕೇಶಿಯು ಅತ್ಯಂತ ಸಮರ್ಥನಾದ ದೊರೆಯಾಗಿದ್ದನು. (ಕ್ರಿ. ಶ. 1104-1147). ಅವನಿಗೆ ಕೊಂಕಣ 900, ವೇಣುಗ್ರಾಮ 70, ಕದರವಳ್ಳಿ 30, ಪಲಿಗುಂಡಿ 30, ಕುಂತಕುಳಿ 30, ಉನಕಲ 30, ಹಲಸಿಗೆ 1200, ಹಾನಗಲ್ಲು 500

ಮತ್ತು ಹೈವೆ 500— ಈ ಪ್ರದೇಶಗಳು ಸೇರಿದ್ದವು. ಅವನ ಜ್ಯೇಷ್ಠಪುತ್ರನು ಇಮ್ಮಡಿಶಿವಚಿತ್ತನೆಂಬ ಹೆಸರಿನಿಂದ ಬನವಾಸಿನಾಡನ್ನು ಯುವರಾಜನಾಗಿ ಆಳುತ್ತಿದ್ದನು. ಈಗ ಅವನು ವಿಷ್ಣುವರ್ಧನನಿಗೆ ಸೋತು ಹೊಯ್ಸಳ ಚಕ್ರಾಧಿಪತ್ಯದಲ್ಲಿ ಮಂಡಲೇಶ್ವರನಾಗಿದ್ದನು.

ಈ ಪೆರ್ಮಾಡಿ ಶಿವಚಿತ್ತನಿಗೆ ಮುಕ್ಕಣ್ಣ, ತ್ರಿಣೇತ್ರ, ತ್ರಿಲೋಚನ, ಎಂಬ ಹೆಸರುಗಳೂ ಇದ್ದವು.

ಇವನು ಒಮ್ಮೆ "ಸರ್ವತೋಮುಖ"ವೆಂಬ ಹೆಸರಿನ ಯಜ್ಞ ಮಾಡಲು ನಿಶ್ಚಯಿಸಿದನು. ಈ ಯಜ್ಞಕ್ಕಿಂತಲೂ ಅಶ್ವಮೇಧ ಯಜ್ಞವು ದೊಡ್ಡದು. ಅದಕ್ಕಿಂತಲೂ ರಾಜಸೂಯ ಯಾಗವು ದೊಡ್ಡದು. ಆ ಯಜ್ಞಕ್ಕೆ 64 ಜನ ಋತ್ವಿಜರು ಬೇಕಾಗಿತ್ತು.1

ಇಂಥ ಶ್ರೇಷ್ಠಯಾಗವನ್ನು ಮಾಡಿಸಲು ಆ ಸ್ಥಳದಲ್ಲಿ ಯೋಗ್ಯರಾದ ಬ್ರಾಹ್ಮಣರು ಇಲ್ಲದೇ ಇದ್ದುದರಿಂದ ಅವನು ಯೋಗ್ಯರಾದ ಚತುಶ್ಶಾಸ್ತ್ರಪಂಡಿತರೂ, ಪಂಚನದಿಗಳ ನಾಡಿನ ಆಹಿಚ್ಚತ್ರಪುರದ ವಿದ್ವಾಂಸರೂ, ಸಮಯಾಚಾರ ನಿಷ್ಠರೂ ಆದ 64 ಜನ ಬ್ರಾಹ್ಮಣ ಕುಟುಂಬದವರನ್ನು ದೂರದಿಂದ ಕರೆಸಿ, ಯಾಗವನ್ನು ಮಾಡಿ, ಯಾಗವೆಲ್ಲ ಮುಗಿದಮೇಲೆ ಈ ಬ್ರಾಹ್ಮಣ ಕುಟುಂಬದವರನ್ನು ಇಂದಿನ ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲ್ಲೂಕಿನ ತಾಳಗುಂದ ಎಂಬ ಅಗ್ರಹಾರದಲ್ಲೂ, ಮಧ್ಯಕೊಂಕಣದ ಚಿಪಳೂಣಅಗ್ರಹಾರದಲ್ಲಿಯೂ ಅವರಿಗೆ ವೃತ್ತಿಗಳನ್ನು ಕಲ್ಪಿಸಿಕೊಟ್ಟು, ಸುಖವಸತಿಗೆ ಬೇಕಾಗುವ ಅನುಕೂಲತೆಗಳನ್ನೂ ಕಲ್ಪಿಸಿಕೊಟ್ಟು ಅಲ್ಲಿಯೇ ವಾಸಮಾಡುವಂತೆ ಏರ್ಪಾಟು ಮಾಡಿದನು. ಈ 64 ಕುಟುಂಬದವರು, ಕಾಶ್ಯಪ, ಅತ್ರೇಯಸ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ವಶಿಷ್ಠ, ಅಗಸ್ತ್ಯ, ಹರಿತಸ, ಬಾದರಾಯಣ, ಕೌಂಡಿನ್ಯ, ಶಾಂಡಿಲ್ಯ, ಕೌಶಿಕ, ಶ್ರೀವತ್ಸ, ಮತ್ತು ಭಾರದ್ವಾಜ ಗೋತ್ರಗಳಿಗೆ ಸೇರಿದ್ದರು.

---

1) ಪೂರ್ವ ವಿಹಾರದಲ್ಲಿ 16 ಜನ ಋತ್ವಿಜರು ; ಪಶ್ಚಿಮ ವಿಹಾರದಲ್ಲಿ 16 ಜನ ಋತ್ವಿಜರು ; ಉತ್ತರ ವಿಹಾರದಲ್ಲಿ 16 ಜನ ಋತ್ವಿಜರು ; ದಕ್ಷಿಣ ವಿಹಾರದಲ್ಲಿ 16 ಜನ ಋತ್ವಿಜರು ; ಹೀಗೆ 64 ಋತ್ವಿಜರು ಬೇಕಾಗುತ್ತಿತ್ತು. ಪೂರ್ವ ವಿಹಾರದಲ್ಲಿ ಯಜ್ಞ ಕರ್ತೃವಾದ ಯಜಮಾನನು ಇರುತ್ತಾನೆ.

ಅಂದಿನಿಂದ ಈ 64 ಕುಟುಂಬದವರು ಷಾಷ್ಟಿಕಮನೆತನದವರೆಂದು ಇತಿಹಾಸದಲ್ಲಿ ಪ್ರಸಿದ್ಧವಾಯಿತು.1 ಇವರೇ ಕನ್ನಡ ನಾಡಿನ ಅರವತ್ತು ಒಕ್ಕಲಿ ಮನೆತನ. ಸುಲಭ ಉಚ್ಚಾರಣೆಗೋಸ್ಕರ ಅರವತ್ತೊಕ್ಕಲು ಎಂದೂ ಆಗಿದೆ.

---

1) ಕದಂಬವಂಶದ ರಾಜಸಿಂಹಾಸನದ ಮೂಲ ಸಂಸ್ಥಾಪಕನಾದ ಮಯೂರ ಶರ್ಮನು ಕ್ರಿಸ್ತ ಶಕದ 4 ನೆಯ ಶತಮಾನದ ಮಧ್ಯಕಾಲದಲ್ಲಿ ಅಂದರೆ ಸುಮಾರು ಕ್ರಿ. ಶ. 350 ರಲ್ಲಿ ಅಹಿಚ್ಛತ್ರ ಅಗ್ರಹಾರದಿಂದ ಬ್ರಾಹ್ಮಣರನ್ನು ಕರೆದುಕೊಂಡುಬಂದು, ಅವರನ್ನು ತಾಳಗುಂದ ಅಗ್ರಹಾರದಲ್ಲಿ ಮತ್ತು ಕುಪ್ಪಟೂರ ಅಗ್ರಹಾರದಲ್ಲಿ ಹೇಗೆ ನೆಲೆಗೊಳಿಸಿದನೋ ಹಾಗೆಯೇ ಗೋವೆಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಮಧ್ಯಕೊಂಕಣವನ್ನು ಮತ್ತು ಬನವಾಸಿ ನಾಡನ್ನೂ ಆಳುತ್ತಿದ್ದ ಮುಕ್ಕಣ್ಣ ಕದಂಬನು ೧೨ನೆಯ ಶತಮಾನದ ಉತ್ತರಾರ್ಧದಲ್ಲಿ ಎಂದರೆ ಸುಮಾರು ಕ್ರಿ. ಶ. 1174 ರಲ್ಲಿ ಅಹಿಚ್ಛತ್ರ ಅಗ್ರಹಾರದಿಂದ 64 ಬ್ರಾಹ್ಮಣ ಕುಟುಂಬಗಳನ್ನು (ಎಂದರೆ ಮನೆತನಗಳನ್ನು = ಒಕ್ಕಲುಗಳನ್ನು) ಮುಂದಿಟ್ಟು ತಂದು ತಾಳಗುಂದ ಅಗ್ರಹಾರದಲ್ಲಿ 64 ಬ್ರಾಹ್ಮಣ ಕುಟುಂಬಗಳನ್ನೂ ಚಿಪಳೂಣ (ಈಗಿನ ರತ್ನಗಿರಿ ಜಿಲ್ಲೆಯ ತಾಲ್ಲೂಕಿನ ಸ್ಥಳ) ಅಗ್ರಹಾರದಲ್ಲಿ 64 ಬ್ರಾಹ್ಮಣ ಕುಟುಂಬಗಳನ್ನೂ ಸ್ಥಾಪಿಸಿದನು.

ಈ ಎರಡೂ ಅಗ್ರಹಾರಗಳಲ್ಲಿಯ 64/64 ಜನ ಬ್ರಾಹ್ಮಣ ಮನೆತನಗಳ ಅಡ್ಡ ಹೆಸರುಗಳ ನಿಶಾಂತಸಾಮ್ಯವನ್ನು ತೋರಿಸಬಹುದು. ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ತಾಳಗುಂದ ಮಹಾಗ್ರಹಾರದ ಶಿಲಾಶಾಸನದಲ್ಲಿ ಆ ಅಗ್ರಹಾರದ ನಿವಾಸಿಗಳಲ್ಲಿ ಪ್ರಮುಖನಾದ ಮಾಕಿಮಯ್ಯ ಬ್ರಾಹ್ಮಣೋತ್ತಮನ ಐದು ಜನ ಪುತ್ರರಾದ ವಾಮನ, ಗೋಪ, ಗೋವಿಂದ, ಈಶ್ವರ, ನೃಸಿಂಹ ಈ ಐವರೂ ಸೇರಿ ಊರಿನ ಮಾಧವದೇವರ ನಂದಾದೀವಿಗೆಗೆ ತಮ್ಮ ತೋಟವನ್ನು ದತ್ತಿಯಾಗಿ ಬಿಟ್ಟರು. ಈ ಶಿಲಾ ಶಾಸನದಲ್ಲಿ ಸ್ತುತನಾಗಿದ್ದ ಸುಪ್ರಸಿದ್ಧ ಮಾಕಿಮಯ್ಯನು ವಿಶ್ವಾಮಿತ್ರಗೋತ್ರಜನು ; ಚಕ್ರದವರು ಎಂಬ ಅಡ್ಡ ಹೆಸರಿನ ಮನೆತನದವನು. ಕರ್ನಾಟಕದಲ್ಲಿರುವ 64 ಒಕ್ಕಲು ಬ್ರಾಹ್ಮಣರಲ್ಲಿ ವಿಶ್ವಾಮಿತ್ರಗೋತ್ರಜರಲ್ಲಿ ಚಕ್ರದವರು ಎಂಬ ಅಡ್ಡಹೆಸರಿನ ಮನೆತನದವರು ಈಗಲೂ ಇದ್ದಾರೆ. ಅತಏವ ಈ ಶಿಲಾ ಶಾಸನದಲ್ಲಿ ವರ್ಣಿತ

(ಮುಂದಿನ ಪುಟಕ್ಕೆ)

ರಾದ ಬ್ರಾಹ್ಮಣಕುಟುಂಬದವರೆಲ್ಲರೂ 64 ಒಕ್ಕಲು ಬ್ರಾಹ್ಮಣರೇ ಎಂಬುದು ಸ್ಪಷ್ಟ. (ಇದೂ ಅಲ್ಲದೆ ಮಹಾರಾಷ್ಟ್ರದಲ್ಲಿರುವ 64 ಒಕ್ಕಲು ಬ್ರಾಹ್ಮಣರಲ್ಲಿಯೂ ಎಂದರೆ ಚಿತ್ಪಾವನ ಬ್ರಾಹ್ಮಣರಲ್ಲಿಯೂ ಚಕ್ರದೇವ ಎಂಬ ಅಡ್ಡ ಹೆಸರಿನವರು ಈಗಲೂ ಇದ್ದಾರೆ) ಅರ್ಥಾತ್ ಶ್ರೌತಸೂತ್ರದಲ್ಲಿ ನಿಷ್ಣಾತರಾದ ಈ 64 ಒಕ್ಕಲು ಬ್ರಾಹ್ಮಣರು ಈ ಶಿಲಾ ಶಾಸನವನ್ನು ಬರೆಯುವಾಗ್ಗೆ ಶ್ರೌತಮಾರ್ಗದಲ್ಲಿ ಸುಪ್ರಸಿದ್ಧವಾದ ದ್ವಂದ್ವ ಸಂಪಾದನ ರೀತಿಯಿಂದ "ದ್ವಾತ್ರಿಂಶತ್ ವಿಪ್ರ ಕುಟುಂಬಮಂ" (ಎಂದರೆ ದ್ವಾತ್ರಿಂಶತ್ ದ್ವಂದಾನಿ ವಿಪ್ರಕುಟುಂಬಮಂ 64 ಬ್ರಾಹ್ಮಣ ಕುಟುಂಬಗಳನ್ನು) ಎಂದು ಬರೆದಿದ್ದಾರೆಂದು ಹೇಳುವುದು ಕ್ರಮ ಪ್ರಾಪ್ತವಾಯಿತು.

ಕರ್ನಾಟಕದಲ್ಲಿಯ 64 ಒಕ್ಕಲು ಬ್ರಾಹ್ಮಣರು ತಮ್ಮಲ್ಲಿ 64 ಬ್ರಾಹ್ಮಣ ಕುಟುಂಬಗಳೆಂದೂ, 14 ಗೋತ್ರಗಳೆಂದೂ ಸ್ಪಷ್ಟವಾಗಿ ಹೇಳಿಕೊಂಡಿದ್ದಾರೆ. ಮಹಾರಾಷ್ಟ್ರದಲ್ಲಿಯ 64 ಒಕ್ಕಲು ಬ್ರಾಹ್ಮಣರು ಎಂದರೆ ಚಿತ್ಪಾವನಬ್ರಾಹ್ಮಣರು "ಚೌದಷ್ಟ ಘರಾಣೇ ಚೌದಾ ಗೋತ್ರೇ" ಎಂಬ ಗಾದೆಯ ಮಾತಿನಂತೆ ಪ್ರತಿಯೊಬ್ಬರೂ ನುಡಿಯುತ್ತಾರೆ.

'ಅರವತ್ತು ನಾಲ್ಕು ಒಕ್ಕಲು' ಎಂದು ಇಷ್ಟು ದೀರ್ಘವಾಗಿ ಉಚ್ಚರಿಸುವುದು ತೊಂದರೆಯಾಗಲು ಆರಂಭಿಸಿದ್ದರಿಂದ ಉಚ್ಚಾರಸೌಕರ್ಯಾರ್ಥವಾಗಿ 'ಅರುವತ್ತೊಕ್ಕಲು' ಎಂದು ಅಪಭ್ರಂಶ ಮಾಡಿಕೊಂಡರು. ಕರ್ನಾಟಕದಲ್ಲಿಯ 64 ಒಕ್ಕಲು ಬ್ರಾಹ್ಮಣರು ತಮ್ಮನ್ನು ಅರವತ್ತೊಕ್ಕಲು ಬ್ರಾಹ್ಮಣರು ಎಂದೇ ಸಂಬೋಧಿಸಿಕೊಳ್ಳುತ್ತಾರೆ. ಇದರಂತೆ ಮಹಾರಾಷ್ಟ್ರದ ಅಗ್ನಿಹೋತ್ರಪವಿತ್ರ ಅಥವಾ ಅಗ್ನಿಹೋತ್ರಪಾವನ ಬ್ರಾಹ್ಮಣರು ಉಚ್ಚಾರಸೌಕರ್ಯಕ್ಕೋಸ್ಕರ ಕಾಲಾನಂತರದಲ್ಲಿ ಪೂರ್ವಪದವನ್ನು ಬಿಟ್ಟು ಉತ್ತರಪದದಿಂದ ಪಾವನ ಬ್ರಾಹ್ಮಣರೆನಿಸಿದರು. ಮುಂದೆ ಅವರೇ ಚಿತ್ಪಾವನ ಬ್ರಾಹ್ಮಣರಾದರು. (ಶ್ರೀ ನಾರಾಯಣಗೋವಿಂದಚಾಪೇಕರ ಇವರು ಬಹು ಪರಿಶ್ರಮವನ್ನು ವಹಿಸಿ ಕೊಂಕಣ ಮೊದಲಾದ ಎಲ್ಲ ಪ್ರದೇಶಗಳಲ್ಲಿ ಸಂಚರಿಸಿ "**ಚಿತ್ಪಾವನ**" ಎಂಬ 304 ಪುಟಗಳುಳ್ಳ ಗ್ರಂಥವನ್ನು ಮರಾಠಿ ಭಾಷೆಯಲ್ಲಿ ಬರೆದಿದ್ದಾರೆ).

ತಾಳಗುಂದ ಮತ್ತು ಚಿಪಳೂರ ಅಗ್ರಹಾರಗಳು. ಲೇ: ನಾ. ಶ್ರೀ. ರಾಜಪುರೋಹಿತರು. ಪ್ರಬುದ್ಧ ಕರ್ಣಾಟಕ (1946) ಕಾಮನ ಸಂಚಿಕೆ.

ಪಾಷ್ಟಿಕಮನೆತನದ ಮೂಲದ ಬಗೆಗೆ ಬೆಟ್ಟದ ಅನಂತಕೃಷ್ಣಾಚಾರ್ಯರು ಹೇಳುವ ಸಂಗತಿಯು ಇದಕ್ಕಿಂತ ಭಿನ್ನವಾಗಿದೆ.

ಇವರು ಗೋದಾವರಿ ಮೂಲದಲ್ಲಿರುವ ಪೈಠಣ (ನಾಸಿಕ)ದಲ್ಲಿ ಆಳುತ್ತಿದ್ದ ಕದಂಬರಾಜರ ಕಾಲದಲ್ಲಿ ಪಾಂಚಾಲದ ಅಹಿಚ್ಛತ್ರಪುರದಿಂದ ಬಂದರೆಂದು ಅವರು ಹೇಳುತ್ತಾರೆ. ಕದಂಬರ ತ್ರಿಣೇತ್ರವರ್ಮನು ತನ್ನ ರಾಜಧಾನಿಯನ್ನು ಪೈಠಣದಿಂದ ಶಿವಮೊಗ್ಗ ಜಿಲ್ಲೆಯಲ್ಲಿರುವ ಬನವಾಸಿಗೆ (ವೈಜಯಂತಿಪುರ) ಬದಲಾಯಿಸಿದನು. ಅವನೊಂದಿಗೆ ಬನವಾಸಿಗೆ ಬಂದವರಲ್ಲಿ ಭಗವದ್ಭಕ್ತರೂ, ಪಂಡಿತೋತ್ತಮರೂ, ಮಂತ್ರಿಗಳೂ, ದಂಡನಾಯಕರೂ ಆಗಿದ್ದ ಅರವತ್ತು ನಾಲ್ಕು ಜನ ದ್ವಿಜಶ್ರೇಷ್ಠರೂ ಇದ್ದರು. ಅವರು ಯಾವಾಗಲೂ ರಾಜನಿಗೆ ಹಿತ ವನ್ನು ಬಯಸುತ್ತಾ ಅವನನ್ನು ನೆರಳಿನಂತೆ ಅನುಸರಿಸುತ್ತಿದ್ದರು. ಮುಂದೆ ಇವ ರಲ್ಲಿ ಮೂರು ಮಂದಿ ಶೂರರು ಶತ್ರುಗಳೊಡನೆ ಕಾದಾಡಿ ಮಡಿದರು. ಉಳಿದ 61 ಜನರು ಈಗ ಉಳಿದರು. ಹೀಗಿರುವಲ್ಲಿ ತ್ರಿಣೇತ್ರ ಕದಂಬನು ಕಾಲವಾದನು. ಅವನ ನಂತರ ಅವನ ಮಗ ಮಯೂರವರ್ಮನಿಗೆ ಪಟ್ಟವಾಯಿತು. ಅವನು ವೀರಾಗ್ರಣಿ. ಅವನಿಗೆ ಅನೇಕ ಸಾಮಂತರು ಕಪ್ಪ ಒಪ್ಪಿಸುತ್ತಿದ್ದರು.

ಒಂದು ದಿನ ಮಯೂರವರ್ಮನಿಗೆ ಅಶ್ವಮೇಧಯಾಗ ಮಾಡಬೇಕೆಂಬ ಬಯಕೆಯಾಯಿತು. ಅದನ್ನು ಕಾರ್ಯರೂಪಕ್ಕೆ ತರಲು 60 ಒಕ್ಕಲಿನವರನ್ನು ಪ್ರಾರ್ಥಿಸಿದನು. ಅವರು ಕಲಿಯುಗದಲ್ಲಿ ಪ್ರಾಣಿವಧೆಯನ್ನು ಶಾಸ್ತ್ರಗಳು ನಿಷೇಧಿಸಿರುವುದರಿಂದ ಈ ಯಜ್ಞದಲ್ಲಿ ತಾವು ಭಾಗಿಗಳಾಗುವುದಿಲ್ಲವೆಂದು ಹೇಳಿಬಿಟ್ಟರು. ಅವನ ಕೋಪಕ್ಕೆ ತುತ್ತಾದ ಈ 61 ಕುಟುಂಬಗಳು ಚಾಲುಕ್ಯ ರಾಜಧಾನಿಯಾಗಿದ್ದ ದೇವಗಿರಿಗೆ ಹೊರಟು ಹೋದರು. ಅದರಿಂದ ವಿಷಾದಿಸಿದ ದೊರೆಯು ತನ್ನ ಕಾರ್ಯಕ್ಕಾಗಿ ಪಶ್ಚಾತ್ತಾಪಪಟ್ಟು ಅವರನ್ನು ತನ್ನ ರಾಜ್ಯಕ್ಕೆ ಹಿಂದಕ್ಕೆ ಬರಲು ಪ್ರಾರ್ಥಿಸಿದನು. ಅವರು ಹಿಂದಕ್ಕೆ ಬರಲು ಒಪ್ಪಲಿಲ್ಲ. ಆದರೂ ದೊರೆಯ ಹಿತವನ್ನು ಕೋರುತ್ತಾ ಅಲ್ಲಿಯೇ ಇರುವುದಾಗಿ ಆಶ್ವಾಸನ ವಿತ್ತರು. ಅಷ್ಟರಲ್ಲಿ ಭರತ ಎಂಬ ಒಂದು ಮನೆತನಕ್ಕೆ ಕಾಲಗತಿಯಲ್ಲಿ ಸಂತತಿ ನಷ್ಟವಾಗಿ ಈಗ 60 ಕುಟುಂಬಗಳು ಮಾತ್ರ ಉಳಿದವು. ಇವರಿಗೆ ಷಾಷ್ಟಿಕ ರೆಂದು ಹೆಸರಾಯಿತು, ಇದೇ ಕನ್ನಡದಲ್ಲಿ ಅರವತ್ತು ಒಕ್ಕಲೆನಿಸಿದರು.

—ಷಾಷ್ಟಿಕ ಮಹಾ ಪುರುಷರು—ಪು. 2-3.

ತಾಳಗುಂದಅಗ್ರಹಾರದ 64 ಬ್ರಾಹ್ಮಣರ ಮನೆತನಗಳ ಹೆಸರುಗಳನ್ನೂ ಅವರ 14 ಗೋತ್ರಗಳನ್ನೂ ಇಲ್ಲಿ ಕೊಟ್ಟಿದೆ.

### 1. ಕಾಶ್ಯಪಗೋತ್ರ

1. ನಂಜೆಯವರು
2. ಭಾರತದವರು
3. ಸವಿನುಡಿಯವರು
4. ಬಲ್ಲರಸರು

### 2. ಆತ್ರೇಯಗೋತ್ರ (= ಅತ್ರಿಗೋತ್ರ)

5. ಬೊಮ್ಮರಸರು
6. ಬಂದರಸರು
7. ಬುರುಡೆಯವರು
8. ಹರಿಬಂಟನವರು
9. ಈಚಲವರು

### 3. ವಿಶ್ವಾಮಿತ್ರಗೋತ್ರ

10. ಮಿಂಚಿನವರು
11. ಬೆಟ್ಟದವರು
12. ಚಕ್ರದವರು
13. ಮಂಖಣೆಯವರು
14. ಮಾಲ್ಯದವರು
15. ಶಿವಪುರದವರು
16. ಢಣಾಯಕರು

### 4. ಗೌತಮಗೋತ್ರ

17. ವೇದಾಂತಿಯವರು
18. ಪರಗಿಯವರು
19. ಯನಗಲವರು
20. ಬೀಗಮುದ್ರೆಯವರು
21. ಕಲ್ಲೂರಿ
22. ಯಲೆಕುಂಟೆ

### 5. ಜಾಮದಗ್ನಿಗೋತ್ರ

23. ಉದ್ದಿಯವರು
24. ಬೊಕ್ಕಸದವರು
25. ಜಾನಸಾಲೆ
26. ತಿರದಂಡಿ
27. ಕಂಕೂರು

### 6. ವಶಿಷ್ಠಗೋತ್ರ

28. ವೈದೇವ
29. ಬಲಿದೇವ
30. ಚೀಟಿನವರು
31. ಕೆರಟಿ
32. ಹುಲ್ಬಂಡಿ
33. ಖಂಡೇಕಾರ
34. ಮದ್ದಿನವರು
35. ಯರವಿನಕಲೆ

### 7. ಅಗಸ್ತ್ಯಗೋತ್ರ

36. ಬಡಕಣದವರು

### 8. ಹರಿತಸಗೋತ್ರ

37. ಆರಾಧ್ಯರು
38. ಗಂಗರಸರು
39. ಚಂಡೂರವರು
40. ಅನಂತಪುರದವರು

### 9. ಬಾದರಾಯಣಗೋತ್ರ

41. ಬುಕ್ಕರಾಯಸಮುದ್ರ
42. ಜ್ವಾಲಾಸಾಗರ
43. ಸಕ್ಕರೆಪಟ್ಟಣ

### 10. ಕೌಂಡಿಣ್ಯಗೋತ್ರ

44. ಕೂಡಿಲೂರು
45. ಬೆಲಕನಕಾಲುವೆ
46. ಬೊಮ್ಮಿನವರು
47. ತಂಗೆಹಳ್ಳಿ
48. ವಡ್ಡೆಧಾಳಿ

### 11. ಶಾಂಡಿಲ್ಯಗೋತ್ರ

49. ನಯುನಾರಿ
50. ಮುರಸಲು

### 12. ಕೌಶಿಕಗೋತ್ರ

51. ಅಂತರಸರು
52. ಮಾಕರಸರು
53. ಬೊಮ್ಮರಸರು

### 12. ಶ್ರೀವತ್ಸಗೋತ್ರ

54. ಮಲಖೇಡದವರು
55. ದೀಪದವರು
56. ದವಸದವರು
57. ಕಾಂದಲವಾಡಿ
58. ಮುತ್ತಿನ ಸತ್ತಿಗೆ
59. ವಾರಣಾಶಿ

### 14. ಭಾರದ್ವಾಜಗೋತ್ರ

60. ಕೂಚರಸರು
61. ವಿಶ್ವರೂಪದವರು
62. ಮಣಿವಾಲದವರು
63. ಟಂಕಸಾಲೆ
64. ನೊತ್ತೂರು

ಭಾರದ್ವಾಜ ಗೋತ್ರಕ್ಕೆ ಸೇರಿದ ಮನೆತನಗಳು :—

ಕೂಚರಸರು, ಮಣಿಮಾಲದವರು, ಚಿನ್ನಭಂಡಾರದವರು, ನೋತೂರವರು, ವಿಶ್ವರೂಪದವರು, ಹೊತ್ತೂರವರು, ಜಂಬುಖಂಡಿಯವರು, ಮತ್ತು ವಾರಣದವರು.1 ಇವರಲ್ಲಿ ಶಿವಚಿತ್ತಪೆರ್ಮಾಡಿಯು ಕೇಶವಭಟ್ಟನೆಂಬುವನನ್ನು ತನ್ನ ಭಂಡಾರದ ಅಧಿಕಾರಿಯನ್ನಾಗಿ ನೇಮಿಸಿಕೊಂಡಿದ್ದನು. ಅವನು ದೊರೆಗೆ ನಿಷ್ಠೆಯಿಂದಲೂ, ದಕ್ಷತೆಯಿಂದಲೂ ಸೇವಿಸಿದ್ದುದರಿಂದ ಅವನಿಗೆ ಜಮುಖಂಡಿ ಪ್ರದೇಶವನ್ನು ಜಹಗೀರಾಗಿ ಕೊಟ್ಟನು. ಅನಂತರ ಈ ವಂಶದವರು ಜಮುಖಂಡಿಯಲ್ಲೇ ನೆಲೆಸಿ, ಆ ಪಾಳೆಯಪಟ್ಟನ್ನು ದೊರೆಗೆ ವಿಧೇಯರಾಗಿದ್ದುಕೊಂಡು, ಒಳಾಡಳಿತದಲ್ಲಿ ಸ್ವತಂತ್ರರಾಗಿ ಆಳುತ್ತಿದ್ದರು. ಅವರನ್ನು ಚಿನ್ನಭಂಡಾರದವರೆಂದೂ, ಜಮುಖಂಡಿಯವರೆಂದೂ ಜನರು ಕರೆಯುತ್ತಿದ್ದುದರಿಂದ ಅವರಿಗೆ ಅದೇ ಹೆಸರು ರೂಢಿಗೆ ಬಂದಿತು.

ಈ ಮಧ್ಯೆ ಸಾಮ್ರಾಜ್ಯಗಳ ಉದಯಾಸ್ತಗಳಾಗಿದ್ದುವು. ಹೊಯ್ಸಳರನ್ನು ಕಲ್ಯಾಣಿಚಾಲುಕ್ಯರು ಗೆದ್ದು, ಅವರದಾಗಿದ್ದ ಬನವಾಸಿಯ ಪ್ರದೇಶವನ್ನು ತಮ್ಮದು ಮಾಡಿಕೊಂಡರು. ಚಾಲುಕ್ಯರಿಗೂ ಕಲಚೂರ್ಯರಿಗೂ ಹೋರಾಟ ನಡೆದಾಗ ಕ್ರಿ. ಶ. 1180 ರಲ್ಲಿ ಯಾದವ (ಸೇವುಣ) ದೊರೆ ಐದನೇ ಭಿಲ್ಲಮನು ಚಾಲುಕ್ಯ ಆಳ್ವಿಕೆಯ ನೊಗವನ್ನು ಕಳಚಿ ಸ್ವಾತಂತ್ರ್ಯವನ್ನು ಘೋಷಿಸಿಕೊಂಡು ಯಾದವರಾಜ್ಯ ಸ್ಥಾಪಕನಾದನು. ಇವನ ರಾಜಧಾನಿ ದೇವಗಿರಿ. ಇದೇ ಸುಮಾರಿನಲ್ಲಿ ಚಾಲುಕ್ಯ ಸಾಮ್ರಾಜ್ಯದ ಪೂರ್ವಭಾಗದ ಪ್ರದೇಶಗಳನ್ನು ಕಾಕತೀಯರು ತಮ್ಮದು ಮಾಡಿಕೊಂಡು ಹನುಮಕೊಂಡವನ್ನು ತಮ್ಮ ರಾಜಧಾನಿ ಮಾಡಿಕೊಂಡು ಆಳಿದರು.

---

1) ಇವು ಅನಂತಕೃಷ್ಣಾಚಾರ್ಯರು ತಮ್ಮ ಪಾಷ್ಟಿಕನಾಮಾವಳಿ ಗ್ರಂಥದಲ್ಲಿ ಕೊಟ್ಟಿರುವ ಭಾರದ್ವಾಜಗೋತ್ರಕ್ಕೆ ಸೇರಿದ ಮನೆತನಗಳು. ಈ ಭಾರದ್ವಾಜ ಗೋತ್ರದ ಚಿನ್ನಭಂಡಾರದ ಮನೆತನಕ್ಕೆ ಜಯತೀರ್ಥರ ಪೂರ್ವಜರು ಸೇರಿದ್ದರೆಂದು ಅವರು ಅಭಿಪ್ರಾಯಪಡುತ್ತಾರೆ. ಆದರೆ ತಾಳಗುಂದ ಶಾಸನದ ರೀತ್ಯಾ ಟಂಕಸಾಲೆಯವರ ಉಲ್ಲೇಖನವಿದೆ. ಇವರೂ ಅನಂತಕೃಷ್ಣಾಚಾರ್ಯರು ಹೇಳುವ ಚಿನ್ನಭಂಡಾರದವರೂ ಒಂದೇ ಆಗಿರಬಹುದೆ ? ಈ ಅಭಿಪ್ರಾಯವನ್ನು ಲೇಖಕ ಎತ್ತಿ ಹಿಡಿದಿದ್ದಾನೆ. —ಲೇ.

ಚಾಲುಕ್ಯರಿಂದ ಸ್ವಾತಂತ್ರ್ಯ ಘೋಷಿಸಿಕೊಂಡ ಭಿಲ್ಲಮನಿಗೆ ಜಮಖಂಡಿ ಪ್ರದೇಶವೂ ಸೇರಿತ್ತು. ಅವನ್ನು ಅದನ್ನು ಪಾಪ್ಟಿಕಮನೆತನದ ಚಿನ್ನಭಂಡಾರದ ವಂಶೀಕರಿಗೇ ಕೊಟ್ಟನು. ಈ ಮನೆತನದವರ ವಿದ್ವತ್ತು, ಸದಾಚಾರ, ರಾಜನಿಷ್ಠೆ, ಆಡಳಿತ ದಕ್ಷತೆಗಳು ಮನೆಮಾತಾಗಿದ್ದುದರಿಂದ, ಭಿಲ್ಲಮನಿಗೆ ಅವರಲ್ಲಿ ಪ್ರೀತಿ ಗೌರವಗಳಿದ್ದವು.

ಭಿಲ್ಲಮನ ನಂತರ ಜೈತುಗಿ, ಸಿಂಘಣ, ಕೃಷ್ಣ, ಮಹಾದೇವ ಮುಂತಾದ ದೊರೆಗಳು ಆಳಿ ಈಗ ದೇವಗಿರಿ ಸಿಂಹಾಸನದಲ್ಲಿ ರಾಮಚಂದ್ರದೇವನು ಆಳುತ್ತಿದ್ದನು. ಈ ಸಮಯದಲ್ಲಿ ಚಿನ್ನಭಂಡಾರಿ ಕೇಶವಭಟ್ಟನ ವಂಶದವನೇ ಆದ ಕೇಶವಭಟ್ಟನೆಂಬುವನು ಮಂಗಳವೇಡೆಯ ದೇಶಪಾಂಡೆಯಾಗಿದ್ದನು. ವಿದ್ವಾಂಸನಾದ ಇವನನ್ನು ಕೇಶವಪಂತನೆಂದೂ ಜನರು ಪ್ರೀತಿಯಿಂದ ಕರೆಯುತ್ತಿದ್ದರು.

ಕೇಶವಭಟ್ಟನಿಗೆ ಇಬ್ಬರು ಮಕ್ಕಳು. ಹಿರಿಯವನೇ ಧುಂಡಿರಾಜ. ಕಿರಿಯವನಾದ ಗೋವಿಂದಭಟ್ಟನು ಕ್ರಿ. ಶ. 1282 ರಲ್ಲಿ ಜನಿಸಿದ್ದನು.

ಕೇಶವಭಟ್ಟನು ಮಂಗಳವೇಡೆಯ ದೊರೆಯಾಗಿದ್ದಾಗ ಒಂದು ದುರ್ಘಟನೆ ನಡೆಯಿತು. ಈ ಘಟನೆಯು ಭಾರತದ ಸ್ವರೂಪವನ್ನೇ ಬದಲಾಯಿಸಿತು.

ಆಗ ದಿಲ್ಲಿ ಸಿಂಹಾಸನದಲ್ಲಿ ಖಿಲ್ಜಿವಂಶದ ಜಲಾಲುದ್ದೀನ್‌ಫಿರೋಜಷಹನು ಆಳುತ್ತಿದ್ದನು. ಇವನ ಸೋದರಳಿಯನೂ, ಮಹತ್ವಾಕಾಂಕ್ಷಿತರುಣನೂ, ಸಾಹಸಿಯೂ, ಕ್ರೂರಿಯೂ, ಕಪಟಿಯೂ ಆಗಿದ್ದ ಅಲ್ಲಾವುದ್ದೀನನೆಂಬುವನು ಸುಲ್ತಾನನ ಕೈಕೆಳಗೆ ಕಾರಾ ಎಂಬ ಪ್ರದೇಶದಲ್ಲಿ ಆಳುತ್ತಿದ್ದನು. ಇವನಿಗೆ ದೇವಗಿರಿ ಯಾದವರ ಬಳಿಯಲ್ಲಿದ್ದ ವಿಪುಲವಾದ ಸಂಪತ್ತಿನ ಸುದ್ದಿಯು ತಿಳಿದಿತ್ತು. ಅದನ್ನು ತನ್ನದು ಮಾಡಿಕೊಳ್ಳುವ ಏಕೈಕ ಉದ್ದಿಶ್ಯದಿಂದ ಅಲ್ಲಾವುದ್ದೀನನು ಸುಲ್ತಾನನಿಗೂ ಸುದ್ದಿಕೊಡದೆ, ಅವನ ಅಪ್ಪಣೆಯನ್ನೂ ಪಡೆಯದೆ ಕೇವಲ ಮೂರುಸಾವಿರ ಅಶ್ವದಳದೊಡನೆ ಹೊರಟು, ತನ್ನ ಉದ್ದಿಶ್ಯವು ಯಾರಿಗೂ ತಿಳಿಯಬಾರದೆಂದು, ರಹಸ್ಯವಾಗಿ ದೇವಗಿರಿಯ ದಾರಿ ಹಿಡಿದನು.

ಅವನು ದಿಲ್ಲಿಯಿಂದ ತಲೆ ತಪ್ಪಿಸಿಕೊಂಡು ಬಂದ ಒಬ್ಬ ಸರದಾರನಂತೆ ವೇಷಕಟ್ಟಿ ರಾಜಮಹೇಂದ್ರಿಯ ದೊರೆಯ ಬಳಿ ಆಶ್ರಯ ಪಡೆಯಲು ಹೊರಟವನಂತೆ ಸುದ್ದಿ ಹರಡಿ, ದೇವಗಿರಿಯ ಮೇಲೆ ಕ್ರಿ. ಶ. 1296 ರಲ್ಲಿ ಹಠಾ

ತ್ತನೆ ದಾಳಿಯಿಟ್ಟನು. ಈ ಸಮಯದಲ್ಲಿ ರಾಮಚಂದ್ರದೇವನ ಸೈನ್ಯವು ಅವನ ಮಗ ಸಿಂಘಣ (ಶಂಕರ ?) ದೇವನ ನೇತೃತ್ವದಲ್ಲಿ ಕಾಕತೀಯರೊಡನೆ ಹೋರಾಟ ನಡೆಸುತ್ತಿತ್ತು. ರಕ್ಷಕರಿಲ್ಲದ ದೇವಗಿರಿಗೆ ಹನ್ನೆರಡು ಮೈಲಿ ದೂರದಲ್ಲಿ ಕರ್ಣ ನೆಂಬುವನು ಅಲ್ಲಾವುದ್ದೀನನನ್ನು ಎದುರಿಸಿ, ಯುದ್ಧದಲ್ಲಿ ಮಡಿದನು. ಇವನು ಕೇಶವಭಟ್ಟನ ಬಾಲ್ಯದ ಮಿತ್ರನೂ, ಗುರುಕುಲದಲ್ಲಿ ಸಹಪಾಠಿಯೂ ಆಗಿದ್ದು, ರಾಮಚಂದ್ರದೇವನ ಅಭಿಮಾನಿ ಅಧಿಕಾರಿಗಳಲ್ಲಿ ಒಬ್ಬನಾಗಿದ್ದನು. ಅವನ ಪತ್ನಿಯು ಚಿಕ್ಕ ಮಕ್ಕಳಾದ ನರಹರಿ ನಾಯಕ ಮತ್ತು ಕೃಷ್ಣಪ್ಪನಾಯಕರನ್ನು ಕೇಶವಭಟ್ಟನಿಗೆ ಒಪ್ಪಿಸಿ, ಪತಿಯೊಡನೆ ಸಹಗಮನ ಮಾಡಿದಳು.

ಕರ್ಣನ ಮೇಲಿನ ಯುದ್ಧದಲ್ಲಿ ಅಲ್ಲಾವುದ್ದೀನನಿಗೆ ಜಯವಾಗಲು, ರಾಮಚಂದ್ರದೇವನು ಬೇರೆ ದಾರಿಯಿಲ್ಲದೆ ದೇವಗಿರಿ ಕೋಟೆಯೊಳಗೆ ಸೇರಿ ಕೊಂಡು, ಅದರ ರಕ್ಷಣೆಗೆ ಉದ್ಯುಕ್ತನಾದನು. ಮಗನು ಸೈನ್ಯ ಸಮೇತ ರಕ್ಷಣೆಗೆ ಬರುವವರೆಗೆ ಹೇಗಾದರೂ ಅದನ್ನು ಶತ್ರುಗಳಿಂದ ಪಾರು ಮಾಡುವುದೇ ಅವನ ಉದ್ದಿಶ್ಯವಾಗಿತ್ತು. ಆದರೆ ಅವನೊಂದು ನೆನೆದರೆ ದೈವವೊಂದು ನೆನೆಯಿತು. ಎಷ್ಟು ಕಾಲವಾದರೂ ಸಿಂಘಣನು ಸಹಾಯಕ್ಕೆ ಬರಲಿಲ್ಲ. ಆದರ ಬದಲು ದೆಹಲಿಯಿಂದ ಇಪ್ಪತ್ತು ಸಾವಿರ ರಾವುತರ ದಳ ಅಲ್ಲಾವುದ್ದೀನನನ್ನು ಕೂಡಿ ಕೊಳ್ಳಲು ಹೊರಟಿದೆ ಎಂಬ ಸುದ್ದಿ ಬಂತು. ಕೋಟೆಯಲ್ಲಿದ್ದ ಆಹಾರ ಸಾಮಗ್ರಿ ಗಳೂ, ನೀರೂ ಮುಗಿದು ಹೋಗಲು, ಅಲ್ಲಿದ್ದ ನಿವಾಸಿಗಳ ಸ್ಥಿತಿ ಪರಿಶೋಚ ನೀಯವಾಯಿತು. ಅವನು ಬೇರೆ ದಾರಿಯಿಲ್ಲದೆ ಶತ್ರುಗಳ ಜೊತೆಯಲ್ಲಿ ಸಂಧಾ ನಕ್ಕೆ ಎಳೆಸಿದನು.

ಅಲ್ಲಾವುದ್ದೀನನಿಗೂ ಬೇಕಾಗಿದ್ದುದೂ ಅದೇ. ಅವನು ರಾಮಚಂದ್ರ ದೇವನೊಂದಿಗೆ ಒಪ್ಪಂದ ಮಾಡಿಕೊಂಡನು. ಆದರ ಷರತ್ತುಗಳಂತೆ ಅಲ್ಲಾ ವುದ್ದೀನನಿಗೆ ವಿಪುಲವಾದ ಸಂಪತ್ತು ಕೈ ಸೇರಿತು. ಅವನಿಗೆ ಅಲ್ಲಿ 600 ಮಣ ಮುತ್ತುಗಳು, 1 ಮಣ ವಜ್ರ, 1000 ಮಣ ಬೆಳ್ಳಿ, 4000 ರೇಷ್ಮೆ ವಸ್ತ್ರಗಳು ಮತ್ತು ಎಲಿಚಪುರದ ವಾರ್ಷಿಕ ವರಮಾನಗಳು ಬಳುವಳಿಯಾಗಿ ದೊರತವು. ಈ ಸಂಪತ್ತಿನಿಂದ ಪ್ರಬಲನಾಗಿ ಅಲ್ಲಾವುದ್ದೀನನು ತನ್ನ ಸಾಕು ತಂದೆಯಂತಿದ್ದ ಫಿರೋಜ್‌ಷಹನನ್ನು ಮೋಸದಿಂದ ಕೊಂದು ದಿಲ್ಲಿ ಸಿಂಹಾಸನ ವನ್ನೇರಿದನು. ಅಂದಿನಿಂದ ಅಲ್ಲಾವುದ್ದೀನನಿಗೆ ದಕ್ಷಿಣ ರಾಜ್ಯಗಳು ಸಂಪತ್ತನ್ನು ಕೊಡುವ ಕಾಮಧೇನು ಕಲ್ಪವೃಕ್ಷಗಳಂತಾದವು.

# ಧುಂಡೀರಾಯನು ಅಧಿಕಾರಕ್ಕೆ ಬಂದನು

ಈ ಘಟನೆ ಕೇಶವಭಟ್ಟನ ಪಾಲಿಗೆ ಒಂದು ಬರಸಿಡಿಲಿನಂತೆ ಬಂದೆರಗಿತ್ತು.

ಕೇಶವಭಟ್ಟನು ದೇವಗಿರಿಯ ದೊರೆಗಳಿಗೆ ಆಶ್ರಿತನಾಗಿದ್ದುದಲ್ಲದೆ ಅವರ ಅಭಿಮಾನಿಗಳಲ್ಲಿ ಹಿರಿಯನಾಗಿದ್ದನು. ಅವನು ದೇವಗಿರಿಗೆ ಹೋಗಿ ತನ್ನ ಗೆಳೆಯನಿಗೆ ಅಶ್ರುತರ್ಪಣ ಕೊಟ್ಟು, ರಾಮದೇವರಾಯನನ್ನು ಸಂತೈಸಿ, ಕರ್ಣದೇವನ ಇಬ್ಬರು ಮಕ್ಕಳೊಡನೆ ಮಂಗಳವೇಡೆಗೆ ಹಿಂತಿರುಗಿ ಬಂದನು. ಈ ಇಬ್ಬರು ಬಾಲಕರು ತಮ್ಮ ಚಿಕ್ಕ ವಯಸ್ಸಿನಲ್ಲೇ ತಂದೆ ತಾಯಿಗಳನ್ನು ಕಳೆದುಕೊಂಡು ತಬ್ಬಲಿಗಳಾಗಿದ್ದರು. ಅವನ ಪತ್ನಿಯು ಅವರನ್ನು ಕೇಶವಭಟ್ಟನಿಗೆ ಒಪ್ಪಿಸುವ ಮುನ್ನ ಅವರ ವಿದ್ಯಾಬುದ್ಧಿಯೋಗಕ್ಷೇಮದ ಭಾರವನ್ನು ಅವನಿಗೇ ಒಪ್ಪಿಸಿ ಹೋಗಿದ್ದಳು. ಹೀಗಾಗಿ ಕೇಶವಭಟ್ಟನು ಆ ಬಾಲಕರನ್ನು ಕರೆದುಕೊಂಡು ಮಂಗಳವೇಡೆಗೆ ಹಿಂತಿರುಗಿ, ಮಗ ಗೋವಿಂದಭಟ್ಟನೊಡನೆ ಅವರನ್ನು ದೇಗಾವಿಯ ಗುರುಕುಲಕ್ಕೆ ವಿದ್ಯಾಭ್ಯಾಸದ ಸಲುವಾಗಿ ಕಳುಹಿಸಿಕೊಟ್ಟನು.

ಈಗ ಸಾಮಾನ್ಯ ಹಳ್ಳಿಯಾಗಿರುವ ದೇಗಾವೆಯು ಆ ಕಾಲದಲ್ಲಿ ಸುಪ್ರಸಿದ್ಧ ಅಗ್ರಹಾರವಾಗಿತ್ತು. ಈ ದೇಗಾವೆಯನ್ನು ಪಾಪ್ಟಿಕಮುನೆತನವನ್ನು ಕನ್ನಡನಾಡಿಗೆ ಕರೆತಂದ ಗೋವೆಯ ಕದಂಬ ಅರಸನಾದ ಶಿವಚಿತ್ತಪೆರ್ಮಾಡಿದೇವನ ನೆಚ್ಚಿನ ಮಡದಿಯಾದ ಕಮಲಾದೇವಿಯು ಅಗ್ರಹಾರವನ್ನಾಗಿ ಮಾಡಿ ಅದನ್ನು ಅಲ್ಲಿಯ ಬ್ರಾಹ್ಮಣರಿಗೆ ದಾನ ಕೊಟ್ಟಿದ್ದಳು. ಅನುದಿನವೂ ಪುರಾಣ ಧರ್ಮಶಾಸ್ತ್ರಗಳನ್ನು ಬೋಧಿಸುತ್ತಿದ್ದ ಬ್ರಾಹ್ಮಣರ ಶ್ರೇಷ್ಠತೆಯನ್ನು ಕಂಡು ರಾಜಹಂಸಿ ಕಮಲಾದೇವಿಯು ಪಂಡಿತರಾಗಿದ್ದ ಹಲವು ಬ್ರಾಹ್ಮಣರು ದೇಗಾವೆಯಲ್ಲಿ ನೆಲೆಸುವಂತೆ ಮಾಡಿದಳು. ಬ್ರಾಹ್ಮಣರ ಪ್ರತಿಭೆಯನ್ನು ನೋಡಿ ದೇಗಾವೆಯನ್ನು ಅವರಿಗೆ ದಾನವಾಗಿ ಕೊಡಬೇಕೆಂದಿದ್ದ ಅರಸಿಯು ಅರಸನನ್ನು ಸಮ್ಮತಿ ನೀಡಬೇಕೆಂದು ಆಸ್ಥಾನಿಕರ ಮುಂದೆ ಸಗೌರವದಿಂದ ಬೇಡಿದಳು. ಇದಕ್ಕೆ ತನ್ನ ಒಪ್ಪಿಗೆ ಕೊಟ್ಟಿದ್ದ ಅರಸು ತನ್ನ ತಾಯಿಯೊಡನೆ ಇದರ ಬಗ್ಗೆ ವಿಮರ್ಶಿಸಿ ತನ್ನ ಮಂತ್ರಿಗಳು ಹಾಗೂ ರಾಜಪುರೋಹಿತರಾದ ವಿಂದ್ಯಾವಾಸಿ ಭಟ್ಟೋಪಾಧ್ಯಾಯರೊಡನೆಯೂ ಸಮಾಲೋಚಿಸಿ ಅರಸಿಯ ಬೇಡಿಕೆಗೆ ಸಮ್ಮತಿಸಿದನು. ಅರಸನ ಆಳ್ವಿಕೆಯ 28ನೆಯ ವರ್ಷದ ಜಯಸಂವತ್ಸರದ ಮಾರ್ಗಶಿರ ಮಾಸದ ಮಂಗಳವಾರ ಸೂರ್ಯಗ್ರಹಣದಂದು ಕಮಲಾದೇವಿಯು ಬ್ರಾಹ್ಮಣೋತ್ತಮರ ಪಾದ

ಪೂಜೆ ಮಾಡಿ ಹಿರಣ್ಯ ಸಹಿತವಾಗಿ ನಾನಾ ಗೋತ್ರಕ್ಕೆ ಸೇರಿದ ಧಾರ್ಮಿಕ ಕಾರ್ಯದಲ್ಲಿ ನಿರತರಾದ ಬ್ರಾಹ್ಮಣರಿಗೆ ಪಲಸಿಕಾದಲ್ಲಿದ್ದ ದೇಗಾವೆಯನ್ನು ಸೀಗೆರೆಯ ಸಹಿತ ಧಾರಾಪೂರ್ವಕವಾಗಿ ಹಂಚಿಕೊಟ್ಟಳು. ಅದರಂತೆ ಭಟ್ಟೋಪಾಧ್ಯಾಯರಾದ ಶ್ರೀಧರ, ರುದ್ರ, ಭಾನು, ಗೋವಿಂದ, ದ್ರೋಣ, ಕೇಶವ, ಸೋಮೇಶ್ವರ, ಪದ್ಮನಾಭ ಮತ್ತು ಗಂಗಾಧರ ಎಂಬ ಹಾರಿತ, ಕಾಶ್ಯಪ, ಶ್ರೀವತ್ಸ, ಕೌಶಿಕ, ಲೋಹಿತ, ವಿಶ್ವಾಮಿತ್ರ, ಕಾಶ್ಯಪ, ವಶಿಷ್ಠ ಮತ್ತು ಕೌಂಡಿನ್ಯ ಗೋತ್ರಕ್ಕೆ ಸೇರಿದ ಬ್ರಾಹ್ಮಣರಿಗೆ ಒಂದೊಂದು ಭಾಗವು ಕೊಡಲ್ಪಟ್ಟಿತು, ಇನ್ನು ಹಲವು ಭಾಗಗಳು ಭಟ್ಟೋಪಾಧ್ಯಾಯರಾದ ವಶಿಷ್ಠಗೋತ್ರದ ರುದ್ರ, ಕೌಶಿಕಗೋತ್ರದ ಕಾಲಿದಾಸ, ವಶಿಷ್ಠಗೋತ್ರದ ರೋಮೇಶ್ವರ, ವಿಶ್ವಾಮಿತ್ರ ಗೋತ್ರದ ಪ್ರಭಾಕರ, ಭಾರದ್ವಾಜಗೋತ್ರದ ಮಾಧವ, ಕಾಶ್ಯಪಗೋತ್ರದ ಶ್ರೀಧರ ಮತ್ತು ಭಾರದ್ವಾಜಗೋತ್ರದ ನಾರಾಯಣ ಇವರಿಗೆಲ್ಲ ಕೊಡಲ್ಪಟ್ಟಿತು.

ಮತ್ತೊಂದು ಭಾಗವು ಇನ್ನುಳಿದ ಭಟ್ಟೋಪಾಧ್ಯಾಯರಿಗೆ ಅಂದರೆ ಲಕ್ಷ್ಮೀಧರ, ಚೌಂಡರಾಯ ಶ್ರೀಧರ, ಕಾಲಿದೇವ, ವೈಜನಾಥ ಸೋಮೇಶ್ವರ, ಆದಿತ್ಯ, ಕುಮಾರಸ್ವಾಮಿ, ನಾರಾಯಣ ಸರ್ವದೇವ ಕುಮಾರಸಿಂಹ, ನರಸಿಂಹ, ಮುಂತಾದವರಿಗೆ ಕೊಡಲ್ಪಟ್ಟಿತು. ಇದೇ ರೀತಿಯಾಗಿ ಐದು ವೃತ್ತಿಗಳು ಕಮಲೇಶ್ವರ ದೇವರಿಗೂ ಕೊಡಲ್ಪಟ್ಟಿತು. ಅದರಂತೆ ಶ್ರೀದೇವಿಮಹಾಲಕ್ಷ್ಮಿಗೆ ವೃತ್ತಿದ್ವಯವು ಸತ್ರದ ಸಲುವಾಗಿ ಮೂರು ವೃತ್ತಿಗಳಿಗೂ ಸಂದಾಯವಾದವು. ಅಲ್ಲಿ ಬಾಲಶಿಕ್ಷೆ ಹಾಗೂ ಪ್ರೌಢ ವಿದ್ಯಾಭ್ಯಾಸಕ್ಕೆ ಅನುಕೂಲವಿತ್ತು. ಅಲ್ಲಿ ವೇದ ವೇದಾಂಗಗಳು, ನ್ಯಾಯ, ಮೀಮಾಂಸೆ, ಸಾಂಖ್ಯ, ಯೋಗ, ವೇದಾಂತ, ಸ್ಮೃತಿ, ಇತಿಹಾಸ ಪುರಾಣ ಮತ್ತು ಖಗೋಲ ಶಾಸ್ತ್ರಗಳನ್ನು ಕಲಿಸಿಕೊಡುವ ವ್ಯವಸ್ಥೆ ಇತ್ತು.

ಇಂಥ ವಿದ್ಯಾ ಕೇಂದ್ರದಲ್ಲಿ ತನ್ನ ಮಗ ಗೋವಿಂದ ಭಟ್ಟನೂ, ಸಾಕು ಮಕ್ಕಳಾದ ನರಹರಿನಾಯಕ, ಕೃಷ್ಣಪ್ಪನಾಯಕರೂ ಚೆನ್ನಾಗಿ ಕಲಿತು ಉತ್ತಮ ವಿದ್ವಾಂಸರಾಗಿ ಲೌಕಿಕ ಹಾಗೂ ವೈದಿಕ ವಿದ್ಯೆಗಳಲ್ಲಿ ಪಾರಂಗತರಾಗಬೇಕೆಂದು ಕೇಶವಭಟ್ಟನು ಆಶಿಸಿದ್ದನು.

ಆದರೆ ದೈವದ ವಿಚಾರ ಬೇರೆ ಇತ್ತು.

ಗೋವಿಂದಭಟ್ಟನು ಗುರುಕುಲಕ್ಕೆ ಸೇರಿ ಇಪ್ಪತ್ತು ವರ್ಷ ಕಳೆದಿದ್ದರೂ ಅದನ್ನು

ಬಿಟ್ಟು ಅವನು ಮಂಗಳವೇಡೆ ಮನೆಗೆ ಹಿಂತಿರುಗಲೇ ಇಲ್ಲ. ಅವನ ಸಂಗಡಿಗರಾಗಿದ್ದ ನರಹರಿನಾಯಕ, ಕೃಷ್ಣಪ್ಪನಾಯಕರಿಗೆ ವೈದಿಕ ವಿದ್ಯೆಯಲ್ಲಾಗಲೀ ಶಾಸ್ತ್ರ ಕಲಿಕೆಯಲ್ಲಾಗಲೀ ಅಷ್ಟಾಗಿ ಆಸಕ್ತಿ ಇರಲಿಲ್ಲ. ಅವರದು ಹೇಳಿ ಕೇಳಿ ಕ್ಷತ್ರಿಯ ಸ್ವಭಾವ. ನರಹರಿನಾಯಕನು ರಣವಿದ್ಯೆಗಳಲ್ಲಿ ಪಾರಂಗತನಾಗಿ, ದೇವಗಿರಿ ಅರಸರ ಸೇವೆಯನ್ನು ಹುಡುಕಿಕೊಂಡು ಹೊರಟುಹೋದನು. ಕೃಷ್ಣಪ್ಪನಾಯಕನು ಅದಕ್ಕೆ ಭಿನ್ನವಾದ ವ್ಯಾಪಾರ ವಾಣಿಜ್ಯಗಳಲ್ಲಿ ಆಸಕ್ತಿ ವಹಿಸಿ, ಕೆಲವು ಕಾಲ ಕೆಳದಿಯಲ್ಲೂ, ಅನಂತರ ಗೋವೆಯಲ್ಲೂ ವ್ಯಾಪಾರದ ಮಳಿಗೆ ತೆಗೆದು ಅವನು ಅತ್ಯಲ್ಪ ಕಾಲದಲ್ಲಿ ದಕ್ಷಿಣಾಪಥದಲ್ಲೆಲ್ಲಾ ಶ್ರೀಮಂತನೆಂಬ ಹೆಸರನ್ನು ಗಳಿಸಿದನು. ಅವನು ಪರದೇಶದಿಂದ ಕುದುರೆಗಳನ್ನು ಮತ್ತಿತರ ಬೆಲೆಯುಳ್ಳ ವಸ್ತುಗಳನ್ನು ಹಡಗುಗಳಲ್ಲಿ ತರಿಸಿ ಅವುಗಳನ್ನು ಹೊಯ್ಸಳ ಹಾಗೂ ಸೇವುಣ ದೊರೆಗಳಿಗೂ ಸಣ್ಣಪುಟ್ಟ ಅರಸು ಮನೆತನಗಳಿಗೂ ಮಾರಿ ಲಾಭ ಗಳಿಸುತ್ತಿದ್ದನು.

ಅವರಿಬ್ಬರ ಏಳಿಗೆಯನ್ನು ನೋಡಿ ಕೇಶವಭಟ್ಟನಿಗೆ ಸಂತೋಷವಾಗಿದ್ದರೂ, ತನ್ನ ಕಿರಿಯ ಮಗನ ವಿಷಯದಲ್ಲಿ ಅವನು ಕಟ್ಟಿದ್ದ ಸ್ವರ್ಣಮಂದಿರ ಕುಸಿದು ಬಿದ್ದಿತ್ತು.

ಗೋವಿಂದಭಟ್ಟನು ಮೊದಲಿನಿಂದಲೂ ಏಕಾಂತ ಪ್ರಿಯನಾಗಿದ್ದನು. ಅವನಿಗೆ ಮನೆತನದ ಆಸ್ತಿಪಾಸ್ತಿಗಳ ವಿಚಾರಣೆ, ಭಂಡಾರದ ಆದಾಯ ವೆಚ್ಚ, ರಾಜಕಾರಣ, ಬೇಟೆ, ಕ್ರೀಡೆಗಳು ಕೊಂಚವೂ ಇಷ್ಟವಾಗುತ್ತಿರಲಿಲ್ಲ. ಸದಾ ಯಾವುದಾದರೊಂದು ಗ್ರಂಥವನ್ನು ಹಿಡಿದು ಕುಳಿತನೆಂದರೆ ಹಗಲು ರಾತ್ರಿ ಭೇದವೇ ಮರೆತು ಹೋಗುತ್ತಿತ್ತು. ತಾನಾಯಿತು, ತನ್ನ ಪ್ರೀತಿಯ ಪುಸ್ತಕ ಭಂಡಾರವಾಯಿತು. ಅವನಿಗಿದ್ದ ಒಂದೇ ಒಂದು ಚಟವೆಂದರೆ ಹಸ್ತಪ್ರತಿಗಳನ್ನು ಸಂಗ್ರಹಿಸುವುದು. ಸಂಸ್ಕೃತ, ಕನ್ನಡ, ಮರಾಠಿ ಹಸ್ತಪ್ರತಿಗಳು ಯಾವುದು ದೊರೆತರೂ, ಎಷ್ಟೇ ಬೆಲೆಯಾದರೂ ಅವುಗಳನ್ನು ಕೊಂಡು ತಂದು ತನ್ನ ಪುಸ್ತಕ ಭಂಡಾರದಲ್ಲಿ ಸೇರಿಸುತ್ತಿದ್ದನು. ಒಮ್ಮೊಮ್ಮೆ ತನಗೆ ಬೇಸರ ಬಂದರೆ, ಯಾವುದಾದರೂ ಗ್ರಂಥದ ವಿಷಯದಲ್ಲಿ ಸಂದೇಹ ಬಂದರೆ ಅವನು ವಿದ್ವಾಂಸರನ್ನು ಹುಡುಕಿಕೊಂಡು ಊರಿಂದೂರಿಗೆ ಅಲೆಯುತ್ತಿದ್ದನು. ಇಲ್ಲದಿದ್ದರೆ ಅವನು ಯಾರಿಗೂ ತಿಳಿಸದಂತೆ ತನ್ನ ವಿದ್ಯಾಭ್ಯಾಸ ನಡೆದಿದ್ದ ದೇಗಾವಿಗೆ ಹೊರಟು ಹೋಗುತ್ತಿದ್ದನು. ಅವನ ಬಗ್ಗೆ ತಂದೆ ಕಾತರಗೊಂಡು ಹುಡು

ಕಾಡಿದ ಮೇಲೆ ಯಾರ ಮೂಲಕವೋ ಅವನು ದೇಗಾವಿಯಲ್ಲಿರುವ ಸಂಗತಿ ತಿಳಿಯುತ್ತಿತ್ತು. ಅಲ್ಲಿಗೇ ಬಂದು ಇಲ್ಲವೇ ದೂತರನ್ನು ಅಟ್ಟಿ ಅವನನ್ನು ಕರೆಸಿಕೊಳ್ಳಬೇಕಾಗುತ್ತಿತ್ತು.

ಒಮ್ಮೊಮ್ಮೆ ಅಮೂಲ್ಯವಾದ ಗ್ರಂಥಗಳನ್ನು ಹುಡುಕಿಕೊಂಡು ಅವನು ಕನ್ನಡನಾಡಿನ ಅಗ್ರಹಾರಗಳನ್ನೂ, ವಿದ್ಯಾಪೀಠಗಳನ್ನೂ ಸಂದರ್ಶಿಸುತ್ತಾ ಸಮಯ ಕಳೆಯುತ್ತಿದ್ದನು. ಅವನು ಮೇಲಿಂದ ಮೇಲೆ ಭೇಟಿ ಕೊಡುತ್ತಿದ್ದ ಊರುಗಳೆಂದರೆ ವೇಣುಗ್ರಾಮ, ಹಲಸಿ, ಸುಗಂಧವತಿ, ಬಳ್ಳಿಗಾಮೆ, ದ್ವಾರಾವತಿ, ತಾಳಗುಂದ ಮುಂತಾದ ಊರುಗಳು. ಒಮ್ಮೆ ಯಾವುದೋ ಗ್ರಂಥ ಶೋಧನೆಗಾಗಿ ಐಹೊಳೆ, ಪಟ್ಟದಕಲ್ಲುಗಳವರಿಗೂ ಹೋಗಿದ್ದ.

ಅವನ ಈ ಹುಚ್ಚು ಹರಿದಾಟವನ್ನು ನೋಡಿ ಬೇಸತ್ತ ಕೇಶವಭಟ್ಟನು ಒಮ್ಮೆ ಆಕ್ಷೇಪಿಸಿದನು.

"ನೀನೇನು ಎಳೆಯ ಮಗುವಲ್ಲ ಗೋವಿಂದ, ಎಷ್ಟು ದಿನ ಹೀಗೆ ಊರಿಂದೂರಿಗೆ ಅಲೆಯುವುದರಲ್ಲಿ ಕಾಲ ಕಳೆಯುತ್ತಿ ? ಎಲ್ಲರಂತೆ ಮದುವೆಯಾಗಿ, ನೀನು ಮಕ್ಕಳ ತಂದೆಯಾಗುವುದನ್ನು ನೋಡಿ ನಾನು ಸಂತೋಷ ಪಡಬೇಡವೇ" ಎಂದು ಮೂದಲಿಸಿದ್ದನು.

"ಅಪ್ಪಾಜಿ, ನಿಮಗೆ ಸತ್ಯ ಹೇಳುವುದಾದರೆ ನನಗೆ ಮದುವೆ ಮಾಡಿಕೊಳ್ಳಲು ಇಷ್ಟವಿಲ್ಲ. ಬ್ರಹ್ಮಚಾರಿಯಾಗಿ ಇರಬೇಕೆಂದಿದ್ದೇನೆ."

"ಹಾಗಾದರೆ ನೀನು ಸನ್ಯಾಸಿಯಾಗುತ್ತೀಯಾ ?"

"ಅಷ್ಟು ವೈರಾಗ್ಯ ನನಗಿನ್ನೂ ಬಂದಿಲ್ಲ. ಬಂದಾಗ ಭಗವಂತನ ಇಚ್ಛೆ."

"ನಾವು ಶುದ್ಧ ವೈದಿಕ ವಂಶದವರಲ್ಲ. ರಾಜ್ಯ ಸೂತ್ರಗಳನ್ನು ಕೈಲಿ ಹಿಡಿದು, ದುಷ್ಟ ಶಿಕ್ಷಣ, ಶಿಷ್ಟ ಪರಿಪಾಲನೆ ಮಾಡಬೇಕಾದ ಬ್ರಹ್ಮಕ್ಷತ್ರಿಯರು. ಸಮಯ ಬಂದರೆ ರಣಭೂಮಿಗೂ ಹೋಗಿ ಕಾದಾಡಬೇಕಾಗಿದೆ. ಇದು ನಮ್ಮ ವೃತ್ತಿ."

"ಹೌದು ಅದು ನಿಮ್ಮ ವೃತ್ತಿ. ಆದರೆ ನನಗೆ ಅದರಲ್ಲಿ ಎಳ್ಳಷ್ಟೂ ಆಸಕ್ತಿ ಇಲ್ಲ. ನನ್ನ ಪ್ರವೃತ್ತಿ ವೇದಾಂತ ಮಾರ್ಗದಲ್ಲಿದೆ. ಶಾಸ್ತ್ರ ಗ್ರಂಥಗಳ ಅಧ್ಯಯನದಲ್ಲಿ ನನಗೆ ಆಗುವ ಸಂತೋಷ ಉಳಿದ ಯಾವ ಲೌಕಿಕ ಭೋಗ ಭಾಗಗಳಿಂದ ನನಗೆ ಆಗುತ್ತಿಲ್ಲ."

"ಹಾಗಾದರೆ ನಾನು ಮೊಮ್ಮಕ್ಕಳನ್ನು ನೋಡುವ ಹಂಬಲ ಬಿಡಬೇಕೆ ?"

"ಏಕೆ ದುಂಡಣ್ಣ ನಿದ್ದಾನಲ್ಲ. ಅವನಿಗೆ ಮದುವೆಯಾಗಿದೆ. ಮುಂದೆ ಮನ್ಯೆ

ತುಂಬ ಮೊಮ್ಮಕ್ಕಳನ್ನು ನೀವು ಕಾಣುತ್ತೀರಿ ?"

"ಅವನ ಮಾತು ಹಾಗಿರಲಿ ನಿನ್ನ ವಿಷಯ ಹೇಳು ?"

"ನನಗೆ ಈ ಜನ್ಮದಲ್ಲಿ ಮದುವೆಯಿಲ್ಲ. ಸಂಸಾರವೇನಿದ್ದರೂ ನನ್ನಂಥ ಉಢಾಳ ವೃತ್ತಿಯವನಿಗಲ್ಲ. ನನ್ನ ಹಂಬಲ ಬಿಟ್ಟು ನಿಶ್ಚಿಂತರಾಗಿರಿ."

"ದೇಶಪಾಂಡೆ ಮನೆತನದ ಗೌರವ ಪ್ರತಿಷ್ಠೆಗಳನ್ನು ಗಾಳಿಗೆ ತೂರಿ, ನೀನು ಸನ್ಯಾಸಿಯಾಗುವೆಯಾ ?"

"ನೀವು ನನ್ನ ಮನಸ್ಸಿನಲ್ಲಿರುವುದನ್ನೇ ಹೇಳುತ್ತಿದ್ದೀರಿ ಅಪ್ಪಾಜಿ. ನನಗೆ ಈ ಲೋಕದ ಜೀವನಬೇಸರ ಬಂದಿದೆ. ಸನ್ಯಾಸ ಸ್ವೀಕರಿಸಲು ಹೋಗ್ಯ ಗುರುಗಳ ಶೋಧನೆಯಲ್ಲಿದ್ದೇನೆ. ಅಂಥ ಗುರುಗಳು ಸಿಕ್ಕಿದರೆ ಸನ್ಯಾಸ ಸ್ವೀಕರಿಸುತ್ತೇನೆ. ಇಲ್ಲದಿದ್ದರೆ ನನ್ನ ಪಾಡಿಗೆ ನಾನು ಶಾಸ್ತ್ರಾಧ್ಯಯನ ಮಾಡಿಕೊಂಡು ಹೀಗೇ ಕಾಲ ಹಾಕುತ್ತೇನೆ. ಅವನ ಕರೆ ಬಂದಾಗ ಹೊರಟುಬಿಡುತ್ತೇನೆ."

ಕೇಶವಭಟ್ಟನು ಈ ಮಾತನ್ನು ಗೋವಿಂದಭಟ್ಟನ ಬಾಯಲ್ಲಿ ಕೇಳಿದ ಮೇಲೆ ಅವನ ನಿಶ್ಚಿತ ನಿರ್ಧಾರ ಕೇಳಿದ ಮೇಲೆ ಬೇರೇನೂ ಹೇಳಲಾಗದೆ ಮೌನ ತಾಳಿದನು.

ತಂದೆಯು ಅವನನ್ನು ಸಂಸಾರಕ್ಕೆ ಎಳೆಯಲು ಅನೇಕ ಉಪಾಯಗಳನ್ನು ಮಾಡಿ ಸೋತನು. ಒಮ್ಮೆ ಗಣ್ಯರಾದ ಶ್ರೀಮಂತನ ಮನೆಯ ಕನ್ಯೆಯರನ್ನು ಮಗನಿಗೆಂದು ಗೊತ್ತುಮಾಡಿ, ಅವನು ಮನೆಯಲ್ಲೇ ಇರಬೇಕೆಂದು ಹೇಳಿದನು. ಈ ಸುಳಿವನ್ನು ಹೇಗೋ ತಿಳಿದ ಗೋವಿಂದಭಟ್ಟನು ಮನೆ ಬಿಟ್ಟು ಹೋದವನು ಅನೇಕ ತಿಂಗಳುಗಳ ಕಾಲ ಹಿಂದಿರುಗಿ ಬರಲಿಲ್ಲ.

ಇದೇ ಕೊರಗಿನಿಂದ ಕೇಶವಭಟ್ಟನು ಹಾಸಿಗೆ ಹಿಡಿದು ಮಲಗಿದನು. ಒಂದು ದಿನ ಗೋವಿಂದಭಟ್ಟನು ಪರವೂರಿನಲ್ಲಿ ಇದ್ದಾಗ ಮಗನ ಚಿಂತೆಯಲ್ಲೇ ಕೊನೆಯುಸಿರೆಳೆದನು. ಅವನ ಕೊನೆಗಾಲದಲ್ಲಿ ಧುಂಡಿರಾಜನೂ, ಅವನ ಸಾಕು ಮಕ್ಕಳಾದ ನರಹರಿನಾಯಕ ಮತ್ತು ಕೃಷ್ಣಪ್ಪನಾಯಕರು ಹಾಸಿಗೆಯ ಬಳಿ ಇದ್ದರು. ಆದರೆ ಗೋವಿಂದಭಟ್ಟನು ಮಾತ್ರ ಅಲ್ಲಿರಲಿಲ್ಲ.

"ಮಗು ರಘುನಾಥ, ನಿನಗೆ ಈ ಮಂಗಳವೇಡೆ ರಾಜ್ಯದ ಸಮಸ್ತ ಹೊಣೆಗಾರಿಕೆಯನ್ನೂ, ಆ ನಿನ್ನ ತಿಳಿಗೇಡಿ ಸೋದರನ ಜವಾಬ್ದಾರಿಯನ್ನೂ ಒಪ್ಪಿಸಿ ಹೋಗುತ್ತಿದ್ದೇನೆ, ಅವನ ಯೋಗಕ್ಷೇಮ ನಿನ್ನದು. ಅವನು ಅವಧೂತವೃತ್ತಿ ಹಿಡಿದಿದ್ದಾನೆ. ಅವನಿಗೆ ತಂದೆಯಾಗಿ, ತಾಯಿಯಾಗಿ ನೀನೇ ನಿಂತು ನೋಡಿ

ಕೊಳ್ಳಬೇಕು. ಅವನನ್ನು ಅನಾಥನನ್ನಾಗಿ ಮಾಡಬೇಡ." ಎಂದು ಹೇಳಿ ಅವನಿಂದ ವಚನ ಪಡೆದು ಕಡೆಯಬಾರಿಗೆ ಕಣ್ಣು ಮುಚ್ಚಿದನು.

## ಪದ್ಮನಾಭತೀರ್ಥರ ಭೇಟಿ

ತಂದೆಯು ಸತ್ತಾಗ ಗೋವಿಂದಭಟ್ಟನಿಗೆ ಇಪ್ಪತ್ತೆಂಟು ವರ್ಷ ವಯಸ್ಸು. ಅವನು ಯಾವುದೋ ಮಹತ್ವದ ಗ್ರಂಥವನ್ನು ಹುಡುಕಿಕೊಂಡು ರಾಜ ಮಹೇಂದ್ರಿಯವರೆಗೆ ಯಾತ್ರೆ ಹೋಗಿದ್ದನು. ಅಲ್ಲಿಂದ ಹಿಂದಿರುಗುವಾಗ ತಂದೆ ತೀರಿಕೊಂಡುದು ತಿಳಿಯಿತು. ತನ್ನ ಅಭ್ಯುದಯವನ್ನು ಹಾರೈಸುತ್ತಿದ್ದ, ಪ್ರಪಂಚದೊಂದಿಗೆ ತನ್ನನ್ನು ಬಂಧಿಸಿದ್ದ ಏಕ ಮಾತ್ರ ತಂತು ಕಡಿಯಿತೆಂದು ಒಂದು ರೀತಿಯಲ್ಲಿ ಸಮಾಧಾನದ ನಿಟ್ಟುಸಿರು ಬಿಟ್ಟನು.

ಈ ಬಾರಿ ರಾಜಮಹೇಂದ್ರಿಗೆ ಹೋಗಿದ್ದಾಗ ಅಲ್ಲಿನ ಪಂಡಿತರೊಬ್ಬರಿಂದ ನರಹರಿತೀರ್ಥರ ಹೆಸರನ್ನು ಕೇಳಿದ್ದನು. ಆ ಹೆಸರು ಗೋವಿಂದಭಟ್ಟನ ಕಿವಿಗೆ ಬಿದ್ದಿತ್ತು. ಅವರು ಮಹಾ ವಿದ್ವಾಂಸರೆಂದೂ ಶ್ರೀಕೂರ್ಮಕ್ಷೇತ್ರದಲ್ಲಿ ಯೋಗಾನರಸಿಂಹಸ್ವಾಮಿಯನ್ನು ಪ್ರತಿಷ್ಠಿಸಿರುವರೆಂದೂ ಅವರಿಂದಲೇ ಕೇಳಿ ಕುತೂಹಲಗೊಂಡನು. ಸನ್ಯಾಸಿಯಾಗಿ ನರಹರಿತೀರ್ಥರು ದೀರ್ಘ ಕಾಲ ರಾಜ್ಯಭಾರ ನಡೆಸಿ, ಒಳ್ಳೆಯ ಕೀರ್ತಿಯನ್ನು ಪಡೆದು ಉಡುಪಿಯಲ್ಲಿದ್ದ ತಮ್ಮ ಗುರುಗಳ ಬಳಿಗೆ ಶ್ರೀ ಮೂಲರಾಮನೊಡನೆ ಹೋಗಿರುವುದಾಗಿ ತಿಳಿಯಿತು.

ಗುರುಗಳ ಬಗೆಗೆ ಶೋಧನೆ ನಡೆಸುತ್ತಿದ್ದ ಗೋವಿಂದಭಟ್ಟನು

"ನರಹರಿತೀರ್ಥರ ಗುರುಗಳು ಯಾರು ?"—ಎಂದು ಲೋಕಾಭಿರಾಮವಾಗಿ ಕೇಳಿದನು.

"ಎಲ್ಲರೂ ಅವರನ್ನು ಶ್ರೀ ಮಧ್ವಾಚಾರ್ಯರೆಂದು ಹೇಳುತ್ತಾರೆ. ಅವರ ನಿಜವಾದ ನಾಮಧೇಯ ಪೂರ್ಣಪ್ರಜ್ಞರೆಂದು. ಅವರನ್ನು ಸರ್ವಜ್ಞಾಚಾರ್ಯರೆಂದೂ, ಸುಖತೀರ್ಥರೆಂದೂ ಕರೆಯುತ್ತಾರೆ."

"ನೀವು ಅವರನ್ನು ನೋಡಿದ್ದೀರಾ ?"

"ಅವರು ಇಲ್ಲಿಗೆ ಕೆಲವು ವರ್ಷಗಳ ಹಿಂದೆ ಬಂದಿದ್ದರು. ಅವರು ವಿದ್ವಾಂಸರ ಸಭೆಯಲ್ಲಿ ನಡೆಸಿದ ಒಂದು ವಾಕ್ಯಾರ್ಥ ಇನ್ನೂ ನನಗೆ ಚೆನ್ನಾಗಿ ನೆನಪಿದೆ. ಆಗ ನಾನಿನ್ನೂ ಹದಿನಾರು ವರ್ಷದ ಬಾಲಕ. ನಮ್ಮ ತಂದೆಯವ

ರೊಡನೆ ಆ ಸಭೆಗೆ ಹೋಗಿದ್ದ ನೆನಪು ಇನ್ನೂ ಇದೆ. ಆಚಾರ್ಯರದು ಒಳ್ಳೇ ಆಜಾನುಬಾಹು ದೇಹ. ಭವ್ಯಾಕೃತಿ, ಸರಸ್ವತಿಯ ವರಪುತ್ರರಂತೆ ಅವರ ವಾಕ್ಸರಣಿ. ತೇಜಃಪುಂಜ ಮುಖ. ಅಂತಹ ತೇಜಸ್ವೀ ಪುರುಷರನ್ನು ನಾವು ಅದುವರೆಗೂ ನೋಡಿರಲಿಲ್ಲ."

"ಅವರು, ಕಾಣಲು ಎಲ್ಲಿ ಸಿಕ್ಕುತ್ತಾರೆ?"

"ಅದು ಹೇಳುವುದು ಕಷ್ಟ. ಅವರನ್ನು ವಾಯುಅವತಾರವೆಂದುಜನರು ನಂಬುತ್ತಾರೆ. ಒಂದು ಕ್ಷಣ ಒಂದೆಡೆ ನಿಲ್ಲದೆ ಸದಾ ಸಂಚಾರದಲ್ಲಿ ಇರುತ್ತಾರೆ. ಆದರೂ ನೀವು ಓರಂಗಲ್ಲಿಗೆ ಹೋದರೆ ಶ್ರೀ ಪದ್ಮನಾಭತೀರ್ಥರೆಂಬ ಅವರ ಶಿಷ್ಯರು ಸಿಕ್ಕುತ್ತಾರೆ. ಅವರು ಪ್ರತಾಪರುದ್ರದೇವರ ರಾಜಗುರುಗಳಾಗಿದ್ದಾರೆ. ಅವರನ್ನು ಕೇಳಿದರೆ ಆಚಾರ್ಯರ ವಿಷಯ ಹೆಚ್ಚು ತಿಳಿಯಬಹುದು."—

ಆದರೆ ಗೋವಿಂದಭಟ್ಟ ಅಲ್ಲಿರುವಾಗ ತನ್ನ ತಂದೆ ಹಾಸಿಗೆ ಹಿಡಿದಿರುವುದನ್ನು ಕೇಳಿ ಮಂಗಳವೇಡೆಗೆ ಕೂಡಲೇ ಹಿಂದಿರುಗಬೇಕಾಗಿತ್ತು. ಪದ್ಮನಾಭತೀರ್ಥರನ್ನು ನೋಡುವ, ಅವರೊಡನೆ ಮಾತನಾಡುವ ಆಸೆಯನ್ನು ಅಲ್ಲಿಗೇ ಬಿಟ್ಟು ನೇರ ಮಂಗಳವೇಡೆಗೆ ಹಿಂತಿರುಗಿದನು. ಆದರೆ ಅವನು ಬರುವುದರೊಳಗೆ ಕೇಶವಭಟ್ಟನು ತನ್ನ ಇಹಲೋಕದ ಯಾತ್ರೆಯನ್ನು ಮುಗಿಸಿದ್ದನು.

ಇಲ್ಲಿಗೆ ಗೋವಿಂದಭಟ್ಟನ ಗೊತ್ತು ಗುರಿಯಿಲ್ಲದ ಅಲೆದಾಟಕ್ಕೆ ಒಂದು ಕೊನೆ ಬಂದಂತೆ ಆಯಿತು. ಅವನು ತಂದೆಯ ಕಡೆಯ ಉಪದೇಶ ಕೇಳಿ ಊರಿನಲ್ಲೇ ನಿಂತನು. ಅವನನ್ನು ಊರಿನಲ್ಲೇ ನಿಲ್ಲಿಸಿಕೊಳ್ಳಲು ಧುಂಡಿರಾಜನು ಮಾಡಿದ ಪ್ರಯತ್ನವೇನೂ ಅಲ್ಪವಲ್ಲ. ತನ್ನಿಂದ ತನ್ನ ಸಹೋದರನಿಗೂ ಅವನ ಕುಟುಂಬಕ್ಕೂ ಏತಕ್ಕೆ ತೊಂದರೆಯಾಗಬೇಕೆಂದು ಬಗೆದು ಗೋವಿಂದಭಟ್ಟನು ಮನೆಯಲ್ಲೇ ತನ್ನ ವ್ಯಾಸಂಗವನ್ನು ಮುಂದುವರೆಸಿದನು. ಪೂಜೆ, ಚಿಂತನೆ. ಅಧ್ಯಯನಗಳಲ್ಲಿ ಸಮಯವನ್ನು ಕಳೆಯುತ್ತಾ ನಿಂತನು.

ಸಾಮಾನ್ಯವಾಗಿ ಗೋವಿಂದಭಟ್ಟನು ಬ್ರಾಹ್ಮೀಮುಹೂರ್ತದಲ್ಲಿ ಏಳುತ್ತಿದ್ದನು. ಅನಂತರ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಸ್ನಾನಾಹ್ನಿಕಗಳನ್ನು ಮುಗಿಸುತ್ತಿದ್ದನು. ಅನಂತರ ಹನ್ನೊಂದು ಗಂಟೆಯವರೆಗೆ ಯಾವುದಾದರೂ ಒಂದು ಶಾಸ್ತ್ರ ಗ್ರಂಥವನ್ನು ಓದುತ್ತ ಕುಳಿತುಕೊಳ್ಳುವನು. ಅನಂತರ ಮತ್ತೆ ಸ್ನಾನ, ಮಾಧ್ಯಾಹ್ನಿಕೆ, ದೇವತಾರ್ಚನೆಯಲ್ಲಿ ಬಹಳ ಸಮಯ ಹೋಗುತ್ತಿತ್ತು. ಅಡಿಗೆಯಾದ ಮೇಲೆ ದೇವರಿಗೆ ನೈವೇದ್ಯ ಮಾಡಿ, ಮನೆಯ ಹಜಾರಕ್ಕೆ ಬಂದು

ನಿಲ್ಲುತ್ತಿದ್ದನು. ಆ ದಿನ ಊರಿಗೆ ಯಾರಾದರೂ ಬ್ರಾಹ್ಮಣರು ಬಂದಿದ್ದರೆ ಅರಮನೆಗೆ ಬಂದು ಊಟ ಮಾಡಿ ಹೋಗಬಹುದಿತ್ತು. ಅತಿಥಿ ಅಭ್ಯಾಗತರೊಡನೆ ತೀರ್ಥ ಪ್ರಸಾದಗಳನ್ನು ಸ್ವೀಕರಿಸಿದ ಮೇಲೆ ಕೊಂಚ ಕಾಲ ವಿಶ್ರಾಂತಿ.

ಅನಂತರ ಧುಂಡಿರಾಜನ ಆಡಳಿತ ಕಚೇರಿಗೆ ಹೋಗಿ ಒಂದೆರಡು ತಾಸು ಅಲ್ಲಿದ್ದು ಕಳೆಯುತ್ತಿದ್ದನು. ಆಗ ಅವನಿಗೆ ಊರಿನ ವಿಷಯ, ದೇಶದ ವಿಷಯ, ರಾಜ್ಯದ ವಿಷಯಗಳೆಲ್ಲವೂ ತಿಳಿಯುತ್ತಿದ್ದವು. ಮನೆಯ ಹಿರಿಯ ವ್ಯಕ್ತಿಯಾಗಿ ಅವನು ಸಲಹೆ ಬಯಸಿದವರಿಗೆ ಸಲಹೆ ಹೇಳುತ್ತಿದ್ದನು

ಸಂಜೆ ಕೈ ಕಾಲು ತೊಳೆದುಕೊಂಡು ಮನೆಯ ಹೆಣ್ಣು ಮಕ್ಕಳಿಗೂ ವೃದ್ಧರಿಗೂ ಪುರಾಣ ಹೇಳುತ್ತಿದ್ದನು. ಆ ಮೇಲೆ ಅವನು ತನ್ನ ವ್ಯಾಸಂಗ ಕೋಣೆಯನ್ನು ಸೇರಿದನೆಂದರೆ, ಮುಗಿಯಿತು. ಆಯಾಸವಾಗಿ ನಿದ್ದೆ ಬಂದರೆ ಅಲ್ಲೇ ಕೃಷ್ಣಾಜಿನದ ಮೇಲೆ ಮಲಗಿಬಿಡುತ್ತಿದ್ದನು.

ಮತ್ತೆ ಬೆಳಗಿನ ಜಾವ ಏಳುವುದು ! ಹೀಗೆ ಅವನ ದಿನಚರಿ, ಕ್ರಮಬದ್ಧವಾಗಿ ಯಾಂತ್ರಿಕವಾಗಿ ನಡೆದಿತ್ತು. ಇದರಲ್ಲಿ ವೈವಿಧ್ಯತೆ ರಾಜೇಶ್ವರಿಯ ಕಾರಣದಿಂದ ಉಂಟಾಗುತ್ತಿತ್ತು. ರಾಜೇಶ್ವರಿಯು ತಾಯಿಲ್ಲದ ತಬ್ಬಲಿ. ಅವಳು ಸಖೂಬಾಯಿಯ ಗೆಳತಿಯ ಮಗಳು. ಮನೆಯಲ್ಲೇ ಬೆಳೆದು ದೊಡ್ಡವಳಾಗಿದ್ದಳು. ಅವಳನ್ನು ತಮ್ಮ ಸೋದರಳಿಯ ಸರ್ವೋತ್ತಮದೇವನಿಗೆ ಕೊಟ್ಟು ವಿವಾಹ ಮಾಡಿದ್ದರು. ಅವನಿಗೆ ದೇವಗಿರಿ ರಾಮಚಂದ್ರದೇವನ ಸೈನ್ಯದಲ್ಲಿ ಒಂದು ಒಳ್ಳೆ ಹುದ್ದೆ ಇತ್ತು. ಅವನು ಸಾವಿರ ಅಶ್ವಗಳುಳ್ಳ ದಳಪತಿಯಾಗಿದ್ದನು. ಅವನು ಎಂದಾದರೊಮ್ಮೆ ಪತ್ನೀಸಮೇತ ಮಂಗಳವೇಡೆಗೆ ಬಂದು ಕೆಲವುಕಾಲ ಇದ್ದು ಹೋಗುತ್ತಿದ್ದನು.

ಈ ದಂಪತಿಗಳಿಗೆ ಅವರ ದಾಂಪತ್ಯದ ಫಲವಾಗಿ ರಾಜದೇವ ಜಯದೇವರೆಂಬ ಬಾಲಕರು ಹುಟ್ಟಿದರು. ಜಯದೇವನ, ಹೆರಿಗೆಗೆ ಬಂದಿದ್ದ ರಾಜೇಶ್ವರಿಯು ದೇವಗಿರಿಯ ಪ್ರಕ್ಷುಬ್ಧ ವಾತಾವರಣ ಮನಗೊಂಡು ಅವರನ್ನು ಮಂಗಳವೇಡೆಯಲ್ಲಿಯೇ ಬಿಟ್ಟು ಹೋಗಿದ್ದಳು. ದೊಡ್ಡವನಾದ ರಾಜದೇವನಿಗೆ ಈ ನಾಲ್ಕು ವರ್ಷ, ಚಿಕ್ಕವನಿಗೆ ಎರಡು ವರ್ಷ. ಮಕ್ಕಳಿಲ್ಲದಿದ್ದ ಧುಂಡಿರಾಜನಿಗೆ ಅವರೇ ಮನೆಯ ಮಕ್ಕಳಾಗಿದ್ದರು.

ಇತ್ತೀಚಿನ ದಿನಗಳಲ್ಲಿ ದೇವಗಿರಿ, ಓರಂಗಲ್ಲು, ದ್ವಾರಸಮುದ್ರಗಳ ಕಡೆಯಿಂದ ಬರುತ್ತಿದ್ದ ಪ್ರಯಾಣಿಕರು ಭಯಂಕರ ಸುದ್ದಿಯನ್ನು ತರುತ್ತಿದ್ದರು.

ಮತ್ತೊಮ್ಮೆ ದಕ್ಷಿಣಾಪಥದ ಈ ರಾಜ್ಯಗಳ ಮೇಲೆ ಮುಸಲ್ಮಾನರು ದಂಡೆತ್ತಿ ಬರಲಿದ್ದಾರೆ ಎಂಬುದೇ ಆ ಸುದ್ದಿ.

ಇದಕ್ಕೆ ಸಮರ್ಥನೆಯಾಗಿ ಅಲ್ಲಾವುದ್ದೀನನು ತನ್ನ ಮಾವನನ್ನೇ ಮೋಸದಿಂದ ಕೊಂದು ದಿಲ್ಲಿಯ ಸುಲ್ತಾನನಾಗಿದ್ದು ಇಡೀ ಹಿಂದೂಸ್ಥಾನದ ಚಕ್ರೇಶ್ವರನಾಗುವ ಮಹಾತ್ವಾಕಾಂಕ್ಷೆಯಿಂದ ಭಾರತದ ಸ್ವತಂತ್ರ ರಾಜ್ಯಗಳನ್ನು ಒಂದೊಂದಾಗಿ ಕಬಳಿಸುತ್ತ ಬಂದಿದ್ದನು. ಗುಜರಾತಿನ ದೊರೆ ವಾಘೇಲವಂಶದ ಕರ್ಣನನ್ನು ಸೋಲಿಸಿ, ಅವನ ಪತ್ನಿ ಕಮಲಾದೇವಿಯನ್ನು ತನ್ನ ಅಂತಃಪುರ ಸೇರಿಸಿಕೊಂಡಿದ್ದನು. ಚಿತ್ತೂರಿನ ಭೀಮಸಿಂಗನ ಪತ್ನಿ ಪದ್ಮಿನಿಯ ರೂಪಕ್ಕೆ ಮೋಹಗೊಂಡು ರಾಜಾಸ್ಥಾನದ ರಾಜ್ಯಗಳನ್ನೂ ಕಬಳಿಸಿದ್ದನು. ಈಗ ಅವನು ಮಲ್ಲಿಕಾಫರನೆಂಬ ಸೇನಾನಿಯೊಡನೆ ದೊಡ್ಡದೊಂದು ಸೈನ್ಯವನ್ನು ಕೊಟ್ಟು ದಕ್ಷಿಣ ರಾಜ್ಯಗಳ ಮೇಲೆ ಕಳುಹಿಸಿಕೊಟ್ಟಿರುವನೆಂಬ ಸಮಾಚಾರ ಹುಟ್ಟಿತ್ತು. ಅಲ್ಲಾವುದ್ದೀನನ ಸೈನ್ಯ ಸಂಗ್ರಹಣೆ, ಯುದ್ಧಸಿದ್ಧತೆಗಳನ್ನು ಕಂಡವರು ಈ ಮಾತು ಸತ್ಯವೆಂದು ತಿಳಿಯುತ್ತಿದ್ದರು. ಇದು ಕರ್ಣಾಕರ್ಣಿತವಾಗಿ ಎಲ್ಲೆಡೆಯಲ್ಲೂ ಹಬ್ಬಿತ್ತು. ಜನ ಉದ್ವಿಗ್ನರಾಗಿದ್ದರು.

ಇಂಥ ಪ್ರಕ್ಷುಬ್ಧ ವಾತಾವರಣದಲ್ಲಿ ಒಂದು ದಿನ ಗೋವಿಂದಭಟ್ಟನು ದಿನ ನಿತ್ಯದ ದೇವರ ಪೂಜೆಯನ್ನು ಮುಗಿಸಿ, ಅತಿಥಿಗಳ ಸಲುವಾಗಿ ಅರಮನೆಯ ಮುಂದಿನ ಹಜಾರಕ್ಕೆ ಬಂದು ನಿಂತಿದ್ದನು.

ಅಂದು ಅಲ್ಲಿಗೆ ನಾಲ್ಕೈದು ಜನರ ಗುಂಪೊಂದು ಬರುತ್ತಿರುವಂತೆ ಕಾಣಿಸಿತು. ಅವರಲ್ಲಿ ಒಬ್ಬಾತನು ಸನ್ಯಾಸಿಯಂತೆ ಕಾವಿಯನ್ನು ಉಟ್ಟಿದ್ದನು. ಅವನ ಸಂಗಡಿಗರು ವೈದಿಕ ಬ್ರಾಹ್ಮಣರಂತೆ ಕಾಣುತ್ತಿದ್ದರು. ಇಬ್ಬರು ಸೇವಕರು ದೊಡ್ಡ ದೊಡ್ಡ ಗಂಟುಗಳನ್ನು ಹೊತ್ತಿದ್ದರು. ಅವರು ಬಹಳ ದೂರದಿಂದ ಪ್ರಯಾಣ ಮಾಡಿ ದಣಿದವರಂತೆ ಮುಖ ಹಾಗೂ ಅವರ ವಸ್ತ್ರಗಳಿಂದ ಕಾಣುತ್ತಿತ್ತು. ಅವರ ಮುಖಂಡನಂತೆ ಕಾಣುವ ಆ ತೇಜಸ್ವಿಯಾದ ಸನ್ಯಾಸಿಯು "ಧುಂಡಿರಾಜರು ಮನೆಯಲ್ಲಿ ಇದ್ದಾರೆಯೇ" ಎಂದು ಗೋವಿಂದಭಟ್ಟನನ್ನು ಪ್ರಶ್ನಿಸಿದನು. ಗೋವಿಂದಭಟ್ಟನು ಬೆರಗಾಗಿ ನೋಡಿ ನಕ್ಕನು.

ಅವನು ಯಾರೋ ವೈದಿಕ ಬ್ರಾಹ್ಮಣನಿರಬೇಕೆಂದು ಅನುಮಾನಿಸಿ, ಭದ್ರ ರಾಜಪುರುಷನಂತೆ ಕಾಣುತ್ತಿದ್ದ ಸನ್ಯಾಸಿಯು ಮತ್ತೆ ಮಾತನಾಡಿದನು.

"ಧುಂಡಿರಾಜರನ್ನು ಕಾಣಬೇಕೆಂದು ಬಂದಿದ್ದೇವೆ. ಒಮ್ಮೆ ಅವರನ್ನು

ಭೆಟ್ಟಿ ಮಾಡಿದ್ದೆವು ಆಗ ಇಲ್ಲಿಗೆ ಬರಲು ಕೋರಿದ್ದರು. ನಾವು ಪ್ರಯಾಣ ಹೊರಟಿದ್ದವರು, ಅವರ ನೆನಪಾಗಿ ಇತ್ತ ಬಂದೆವು. ಅವರು ಮನೆಯಲ್ಲಿದ್ದಾರೆ ಯಷ್ಟೇ."

"ಇದ್ದಾರೆ, ಇನ್ನೂ ಕಚೇರಿ ಮುಗಿಸಿಕೊಂಡು ಅರಮನೆಗೆ ಬಂದಿಲ್ಲ. ತಾವು ಯಾರು ? ತಮ್ಮ ನಾಮಧೇಯ ತಿಳಿಸಿದರೆ ಕೃತಾರ್ಥನಾಗುತ್ತೇನೆ."

ಜೊತೆಯಲ್ಲಿದ್ದ ಬ್ರಾಹ್ಮಣರಂತೆ ತೋರುತ್ತಿದ್ದ ಪರಿವಾರದವರು "ಇವರು ಶ್ರೀ ಪದ್ಮನಾಭತೀರ್ಥರು. ಶ್ರೀ ಮಧ್ವಾಚಾರ್ಯರ ಶಿಷ್ಯರು.1 ಓರಂಗಲ್ಲಿನ ಪ್ರತಾಪರುದ್ರಗಜಪತಿಗಳ ರಾಜಗುರುಗಳು. ಶ್ರೀಮಧ್ವಾಚಾರ್ಯರ ದರ್ಶನಾರ್ಥ ಉಡುಪಿಗೆ ಹೊರಟಿದ್ದ ನಾವು ಧುಂಡಿರಾಜರ ಆಮಂತ್ರಣವನ್ನು ನೆನೆದು ಇತ್ತ ಬಂದೆವು"—ಎಂದು ಹೇಳಿದರು.

ಈ ಮಾತು ಕೇಳಿ ಗೋವಿಂದಭಟ್ಟನಿಗೆ ಮಿಂಚು ಹೊಳೆದಂತೆ ಆಯಿತು. ಅವನು ರೋಮಾಂಚನಗೊಂಡನು. ತಾನು ಯಾರನ್ನು ನೋಡಲೆಂದು ಹಗಲಿರುಳು ಹಂಬಲಿಸುತ್ತಿದ್ದನೋ ಆ ಶ್ರೀ ಪದ್ಮನಾಭತೀರ್ಥರೇ ತನ್ನ ಮನೆಗೆ ತನ್ನನ್ನು ಉದ್ಧರಿಸಲೋಸುಗ ಬಂದಿದ್ದಾರೆ ಎಂದು ತಿಳಿದು ಮಡಿಯಲ್ಲಿದ್ದುದನ್ನು ಮರೆತು ಅವರ ಕಾಲುಗಳ ಮೇಲೆ ಬಿದ್ದು ದೀರ್ಘದಂಡನಮಸ್ಕಾರ ಮಾಡಿ, ಕೈ ಜೋಡಿಸಿ ನಿಂತನು.

"ಸ್ವಾಮಿ ! ನನ್ನ ಪಾಲಿನ ಭಾಗ್ಯದೇವತೆಯಾಗಿ ತಾವು ಇಲ್ಲಿಗೆ ದಯ ಮಾಡಿಸಿದ್ದೀರಿ. ತಮ್ಮ ದರ್ಶನಕ್ಕಾಗಿ ನಾನು ಹಗಲಿರುಳು ಹಂಬಲಿಸುತ್ತಿದ್ದೆ. ತಾವು ನನ್ನ ಮೊರೆ ಕೇಳಿ ಬಂದವರಂತೆ ಬಂದಿದ್ದೀರಿ. ನನ್ನ ಮನೆ ಪವಿತ್ರ ವಾಯಿತು, ನನ್ನ ಬಾಳು ಸಾರ್ಥಕವಾಯಿತು"—ಎಂದನು ಗೋವಿಂದಭಟ್ಟ.

ಭಾವೋನ್ಮಾದದಲ್ಲಿ ಬಾರಿಬಾರಿಗೂ ಅವರಿಗೆ ಅಡ್ಡಬಿದ್ದು ಕೃತಕೃತ್ಯ ನಾದವನಂತೆ ಮಡಿದ.

---

1) ಯಸ್ತ್ವಯೀಶಸಕಲಪಕ್ಷಶಿಕ್ಷಕ
ಸ್ತತ್ರ ಸಂಸದಿ ವರಿಷ್ಠಸಮ್ಮತಃ ।
ಶೋಭನೋಪಪದಭಟ್ಟನಾಮಕಃ
ಪೂರ್ಣಸಂಖ್ಯಮನಮನ್ಮಹಮುರ್ದಾ ॥
—ಸುಮಧ್ವ ವಿಜಯ, ಸರ್ಗ 9, ಶ್ಲೋಕ 17.

"ನಿಮ್ಮ ಪರಿಚಯವಾಗಲಿಲ್ಲ" ಎಂದು ಎಡಬಲದ ಶಿಷ್ಯರಲ್ಲಿ ಒಬ್ಬನು ಕೇಳಿದನು.

"ನನ್ನನ್ನು ಗೋವಿಂದಭಟ್ಟನೆಂದು ಕರೆಯುತ್ತಾರೆ ಸ್ವಾಮಿ! ನಾನು ಧುಂಡಿರಾಜರ ಹಿರಿಯ ಸೋದರ. ಬಾಲ್ಯದಲ್ಲೇ ವೈರಾಗ್ಯ ಬಂದು ಏನು ಮಾಡಬೇಕೆಂದು ತಿಳಿಯದೆ, ಗುರುವನ್ನು ಹುಡುಕುತ್ತ ಗೊತ್ತು ಗುರಿ ಇಲ್ಲದೆ ತಿರುಗಿದೆ. ನಾನು ರಾಜಮಹೇಂದ್ರಿಗೆ ಒಮ್ಮೆ ಹೋಗಿದ್ದಾಗ ಯಾರಿಂದಲೋ ತಮ್ಮ ಹೆಸರನ್ನು ಕೇಳಿದ್ದೆ. ಆದರೆ ತಮ್ಮ ದರ್ಶನಕ್ಕೆ ಬರಲಾಗಲಿಲ್ಲ. ಭಗವಂತನೆಷ್ಟು ಕರುಣಾಶಾಲಿ. ನನ್ನ ಸ್ವರೂಪೋದ್ಧಾರ ಮಾಡುವ ಗುರುಗಳನ್ನು ನನ್ನ ಮನೆಗೇ ಕರೆತಂದಿದ್ದಾನೆ ಆ ಸ್ವಾಮಿ."

"ನಾನು ನಿನ್ನ ಗುರುವಲ್ಲ. ನಮ್ಮೆಲ್ಲರ ಸ್ವರೂಪೋದ್ಧಾರಕ ಗುರು ಉಡುಪಿಯಲ್ಲಿದ್ದಾರೆ. ನೀನು ಅವರಿಂದ ಉಪದೇಶ ಪಡೆದು ನಿನ್ನ ಜನ್ಮವನ್ನು ಸಾರ್ಥಕಪಡಿಸಿಕೋ. ಏಳು'—ಎಂದು ಗೋವಿಂದಭಟ್ಟನನ್ನು ಎಬ್ಬಿಸಿ ಪದ್ಮನಾಭತೀರ್ಥರರು ವ್ಯಾತಡವಿದರು.

"ನಮ್ಮೆಲ್ಲರ ಗುರು–ಜಗದ್ಗುರು—ಶ್ರೀವಾಯುದೇವರ ಅವತಾರರಾದ ಶ್ರೀಮಧ್ವನಾಮಕಜೀವೋತ್ತಮರು ಅವರು ನಮ್ಮೆಲ್ಲರ ಸ್ವರೂಪೋದ್ಧಾರಕರಾಗಿ, ಕರುಣೆಯೇ ಮೈವೆತ್ತಂತೆ ಉಡುಪಿ ಕ್ಷೇತ್ರದಲ್ಲಿದ್ದಾರೆ. ನೀನು ಅವರಿಗೆ ಶರಣು ಹೋಗಿ ಆತ್ಮೋದ್ಧಾರ ಮಾಡಿಕೋ." ಗೋವಿಂದಭಟ್ಟನು ಅವಾಕ್ಕಾಗಿ ನಿಂತನು. "ಅಯ್ಯಾ ಗೋವಿಂದಭಟ್ಟ. ನನಗೆ ನಿನ್ನ ಸಹೋದರ ಧುಂಡಿರಾಜ ನಿನ್ನ ವಿಷಯವೆಲ್ಲ ತಿಳಿಸಿದ್ದಾನೆ. ನಿನ್ನನ್ನು ಕಾಣುವ ಸಲುವಾಗಿಯೇ ನಾವು ರಾಜಮಾರ್ಗವನ್ನು ಬಿಟ್ಟು ಇತ್ತ ಬಂದುದು, ತಿಳಿಯಿತೇ"—ಎಂದು ಹೇಳಿ ಪದ್ಮನಾಭತೀರ್ಥರು ಅವನನ್ನು ಸಮಾಧಾನಗೊಳಿಸಿದರು.

---

1) ಅಕ್ಷೋಭ್ಯತೀರ್ಥರ ಪೂರ್ವಾಶ್ರಮದ ಹೆಸರು ಗೋವಿಂದಶಾಸ್ತ್ರಿಗಳು ಎಂದು ಗುರುಕಲ್ಪತರುವಿನಲ್ಲಿ ಹೇಳಿದೆ.

ತತ ಉತ್ತರದೇಶಾತ್ ಬ್ರಹ್ಮಚರ್ಯಸಮನ್ವಿತಃ ।
ಗೋವಿಂದಶಾಸ್ತ್ರೀ ತಂ ಗತ್ವಾ ಸನ್ಯಾಸಂ ಸಮಯಾಚತ ।
ತಸ್ಮೈ ದತ್ವಾ ತು ಸನ್ಯಾಸಂ ಅಕ್ಷೋಭ್ಯ ಮುನಿರಿತ್ಯಥ ।
ನಾಮ ದತ್ವಾ ಚತುರ್ಭ್ಯೋಽಸೌ ಸರ್ವಾನ್ ಗ್ರಂಥಾನಬೋಧಯತ್ ॥

## ಸನ್ಯಾಸಿಯ ರಾಯಭಾರ

ಶ್ರೀ ಪದ್ಮನಾಭತೀರ್ಥರು ಒಂದು ದಿನ ಇದ್ದು ಹೋಗಲು ಮಂಗಳ ವೇಡೆಗೆ ಬಂದಿದ್ದವರು ಮೂರು ದಿನಗಳ ಕಾಲ ಗೋವಿಂದಭಟ್ಟನ ಪ್ರೀತಿ ಪೂರ್ವಕ ಒತ್ತಾಯಕ್ಕೆ ಕಟ್ಟುಬಿದ್ದು ಅಲ್ಲೇ ಉಳಿದರು. ಈ ಮೂರು ದಿನಗಳ ಕಾಲ ಅವರ ಸೇವೆಯನ್ನು ಎಷ್ಟು ರೀತಿಯಲ್ಲಿ ಮಾಡಿದರೂ ಗೋವಿಂದಭಟ್ಟ ನಿಗೆ ತೃಪ್ತಿಯಿಲ್ಲ. ತಾನೇ ಸೇವಕನಾಗಿ ನಿಂತು ಶ್ರೀ ಪದ್ಮನಾಭತೀರ್ಥರ ಸ್ನಾನಾಹ್ನಿಕ, ಪೂಜೆ ನೈವೇದ್ಯಗಳಿಗೂ ವ್ಯವಸ್ಥೆ ಮಾಡಿಕೊಟ್ಟದಲ್ಲದೆ ನೂರಾರು ಜನ ಬ್ರಾಹ್ಮಣ ಸುವಾಸಿನಿಯರಿಗೆ ಭೂರಿ ಭೋಜನದ ವ್ಯವಸ್ಥೆ ಮಾಡಿಸಿದನು. ಅವರು ತನ್ನ ಮನೆಗೆ ಬಂದುದರ ಸವಿನೆನಪಿನಲ್ಲಿ ಅನೇಕ ಸದ್ಬ್ರಾಹ್ಮಣರಿಗೆ ಅನೇಕ ದಾನಧರ್ಮಗಳನ್ನೂ ಎಸಗಿ ಜನ್ಮವನ್ನು ಸಾರ್ಥಕಪಡಿಸಿಕೊಂಡನು.

ಪದ್ಮನಾಭತೀರ್ಥರು ಈ ಉತ್ಸವದ ಗಡಿಬಿಡಿಗಳೆಲ್ಲವೂ ಮುಗಿದ ಮೇಲೆ ಧುಂಡಿರಾಜನೊಡನೆ ತಾವು ಇಷ್ಟು ದೂರ ಬಂದಿರುವ ಮುಖ್ಯರಾಯಭಾರ ವನ್ನು ಕುರಿತು ಮಾತು ಆರಂಭಿಸಿದರು. ಇದರಲ್ಲಿ ಗೋವಿಂದಭಟ್ಟನೂ ಪಾಲುಗೊಂಡನು.

ಪದ್ಮನಾಭತೀರ್ಥರು ಕಾಕತೀಯ ದೊರೆ ಪ್ರತಾಪರುದ್ರಗಣಪತಿಯ ವಿಶೇಷ ರಾಯಭಾರ ಹೊತ್ತು ಬಂದಿದ್ದರು.

ಈ ಅವಧಿಯಲ್ಲಿ ದಕ್ಷಿಣಾಪಥದ ಮೇಲೆ ಮುಸಲ್ಮಾನರ ದಾಳಿ ನಡೆಯು ವುದು ಸ್ಪಷ್ಟವಾಗಿತ್ತು. ಮಲ್ಲಿಕಾಫರನು ಲಕ್ಷಾಂತರ ಸಂಖ್ಯೆಯಲ್ಲಿ ದಂಡನ್ನು ತೆಗೆದುಕೊಂಡು, ಅಲ್ಲಾವುದ್ದೀನನಿಂದ ವೀಳ್ಯಪಡೆದು, ದೇವಗಿರಿ, ಓರಂಗಲ್ಲು ಗಳ ಮೇಲೆ ಮುತ್ತಿಗೆ ಹಾಕಿ ಅವರನ್ನು ಸಂಪೂರ್ಣವಾಗಿ ಸೋಲಿಸಿ ನಾಶಪಡಿ ಸಲು ಸನ್ನದ್ಧನಾಗಿ ಬರುತ್ತಿದ್ದಾನೆಂದು ಗೂಢಚಾರರಿಂದ ವಾರ್ತೆ ಬಂದಿತ್ತು.

ಈ ಎಲ್ಲ ರಾಜಕೀಯ ಪರಿಸ್ಥಿತಿಯನ್ನು ವಿಮರ್ಶಿಸಿದ ಮೇಲೆ ಪದ್ಮನಾಭ ತೀರ್ಥರು ಹೇಳಿದರು.

"ಧುಂಡಿರಾಜರೇ, ನಾನು ರಾಣಿ ರುದ್ರಮದೇವಿಯ ಕೋರಿಕೆಯ ಮೇರೆಗೆ, ಪ್ರಭುಗಳಾದ ಪ್ರತಾಪರುದ್ರದೇವರ ಆಶಯದಂತೆ ತಮ್ಮಲ್ಲಿಗೆ ಬಂದಿ ದ್ದೇನೆ.

ಮುಸಲ್ಮಾನರು ವಿಧರ್ಮೀಯರು ಮಾತ್ರವಲ್ಲ, ವಿಗ್ರಹಭೇದಕರೂ ಆಗಿ

ದ್ದಾನೆ. ಅವರಿಗೆ ಭಾರತೀಯರಾದ ಹಿಂದೂಗಳು ಕಾಫಿರರೆನಿಸಿದ್ದಾರೆ. ಅವರನ್ನು ಬಲಾತ್ಕಾರದಿಂದ ಇಸ್ಲಾಂ ಧರ್ಮಕ್ಕೆ ಸೇರಿಸುವುದು ತಮ್ಮ ಪವಿತ್ರ ಕರ್ತವ್ಯ ವೆಂದು ತಿಳಿದಿದ್ದಾರೆ. ನಮ್ಮ ಸ್ತ್ರೀಯರ ಮಾನಭಂಗ, ದೇವಾಲಯಗಳ ನಾಶ, ವಿಗ್ರಹಗಳನ್ನು ಒಡೆಯುವುದು, ಗೋಹತ್ಯೆ, ಬ್ರಾಹ್ಮಣರನ್ನು ಹಿಂಸಿಸುವುದು ತಮ್ಮ ಮತವನ್ನು ಅವರು ಹರಡಲು ಕಂಡುಕೊಂಡಿರುವ ಮಾರ್ಗಗಳಾಗಿದೆ. ಅವರ ಧರ್ಮದಲ್ಲಿ ಹಿಂಸೆಯನ್ನು ಹೇಳದಿದ್ದರೂ ಇಸ್ಲಾಂ ಧರ್ಮೀಯರು ಪವಿತ್ರ ವಾದ ವೈದಿಕ ಸಂಸ್ಕೃತಿ ಹಾಗೂ ಧರ್ಮಗಳಿಗೆ ಭಾರತೀಯ ಮೌಲ್ಯಗಳಿಗೆ ಕೊಡಲಿ ಪೆಟ್ಟು ಹಾಕಲೆಂದೇ ಅವರ ಉದ್ದಿಶ್ಯವಾಗಿದೆ. ಅವರಿಗೆ ಕೊಲೆ, ಸುಲಿಗೆ, ಹಿಂಸೆ, ಅತ್ಯಾಚಾರಗಳು ದೈನಂದಿನ ವ್ಯವಹಾರಗಳಾಗಿವೆ. ಅಲ್ಲಾವುದ್ದೀನನು ತನ್ನ ಏಳಿಗೆಗೆ ಕಾರಣನಾಗಿದ್ದ ಸೋದರಮಾವನನ್ನೇ, ಹೆಣ್ಣುಕೊಟ್ಟು ಮನೆಯನ್ನು ಬೆಳಗಿದ ಮಾವನನ್ನೇ ಕ್ರೂರವಾಗಿ, ಮೋಸದಿಂದ ಇರಿದು ಕೊಂದು ಅಧಿಕಾರಕ್ಕೆ ಬಂದಿದ್ದಾನೆ. ಈ ಅಲ್ಲಾವುದ್ದೀನನನ್ನು ನಾವು ಈ ಎಲ್ಲ ಪಾಶವೀಶಕ್ತಿಯ ರಾಕ್ಷಸೀಸ್ವಭಾವದ ಮತಾಂಧರ ಸಂಕೇತವೆಂದು ತಿಳಿಯಬೇಕು. ಇಂದು ನಮ್ಮ ಮುಂದಿರುವ ಕಾರ್ಯ ಇದು ಸಮಾಜದ ಪ್ರತಿಯೊಂದು ವ್ಯಕ್ತಿ ಸಂಸ್ಥೆಗಳು ರಾಷ್ಟ್ರಧರ್ಮದ ದೀಕ್ಷಾಂತರಾಗಿ, ರಾಷ್ಟ್ರದ ಹಾಗೂ ವೈದಿಕ ಮತದ ಅಳಿವು ಉಳಿವಿಗಾಗಿ ನಮ್ಮ ಸರ್ವಸ್ವವನ್ನು ಮೀಸಲಿಟ್ಟು ಹೋರಾಡಬೇಕಾಗಿದೆ. ನಮ್ಮಲ್ಲಿ ಆತ್ಮಶಕ್ತಿಯನ್ನು ಬೆಳೆಸಿಕೊಂಡು ಈ ರಣಯಜ್ಞಕ್ಕೆ ದೀಕ್ಷಿತರಾಗಬೇಕಾಗಿದೆ. ಇಂದು ನಾವು ಪರಸ್ಪರ ಹೋರಾಟದಲ್ಲೂ ದ್ವೇಷಾಸೂಯೆಗಳಲ್ಲೂ, ಅಂತಃಕಲಹ ವೈಮನಸ್ಯಗಳಲ್ಲೂ ತುಚ್ಛವಾದ ವಾದ ವಿವಾದ ಪ್ರತಿಷ್ಠೆಗಳಲ್ಲಿ ಮಗ್ನರಾಗಿ, ಕರ್ತವ್ಯವನ್ನು ಮರೆಯುವ ಸಮಯವಲ್ಲ. ಇಂದು ನಾವು ಉಳಿದರೆ, ರಾಷ್ಟ್ರದ ಉಳಿವು, ಧರ್ಮದ ಉಳಿವು. ಯಾರು ಧರ್ಮವನ್ನು ಉಳಿಸಲು ಆತ್ಮಾರ್ಪಣೆ ಬಲಿದಾನಗಳನ್ನು ಮಾಡುತ್ತಾರೋ ಅಂಥವರನ್ನು ಧರ್ಮ ಉಳಿಸುತ್ತದೆ. ಭಗವಂತನೂ ಅಂಥ ಧೀರರನ್ನು ಮೆಚ್ಚಿ ಒಲಿಯುತ್ತಾನೆ. ಜನತಾ ಜನಾರ್ಧನನ ಆಹವದಲ್ಲಿ ನಾವೆಲ್ಲರೂ ರಣ ದೀಕ್ಷಿತರಾಗಬೇಕೆಂದೇ ಸರ್ವಸಂಗ ಪರಿತ್ಯಾಗಿಗಳಾದ ನಮ್ಮಂಥವರೂ ಈಗ ರಾಜಕೀಯವನ್ನು ಪ್ರವೇಶಿಸಬೇಕಾಗಿದೆ. ಈ ದುಷ್ಟಶಕ್ತಿಯನ್ನು ಅದೇ ದುಷ್ಟ ಶಕ್ತಿಯಿಂದ ಮಣಿಸಬೇಕಾಗಿದೆ. ಕುಟಿಲ ತಂತ್ರಕ್ಕೆ ಕುಟಿಲ ತಂತ್ರದಿಂದಲೇ ಉತ್ತರ ಹೇಳಬೇಕಾಗಿದೆ. ಈ ದೃಷ್ಟಿಯಿಂದ ನಾವು ನಿಮ್ಮಲ್ಲಿಗೆ ಬಂದಿರುವುದು.

ಹಿಂದೆ ನಮ್ಮ ರಾಜ್ಯದ ಮೇಲೆ ದಂಡೆತ್ತಿ ಬಂದು ಪೆಟ್ಟುತಿಂದು ಹೋಗಿದ್ದ

ಈ ಯವನರು ಮತ್ತೆ ಸೇಡು ತೀರಿಸಿಕೊಳ್ಳದೆ ಬಿಡುವುದಿಲ್ಲವೆಂದು ನಾವು ಎಚ್ಚತ್ತಿದ್ದೆವು. ನಮ್ಮ ಎಣಿಕೆ ಸತ್ಯವಾಗಿದೆ. ಮಲ್ಲಿಕಾಫರನೆಂಬ ಮತಾಂತರ ನಾದ ಹಿಂದುವೇ ನಮ್ಮ ಸರ್ವನಾಶಕ್ಕೆ ಖಡ್ಗ ಹಿಡಿದು ಪಣ ತೊಟ್ಟು ಬರುತ್ತಿದ್ದಾನೆ ಎಂದು ವಾರ್ತೆ ಬಂದಿದೆ. ಈಗ ಪ್ರತಿಭಟನಾ ಕಾರ್ಯದಲ್ಲಿ ಕಾಕತೀಯರು, ಯಾದವರು ಭಾರತಾಂಬೆಯ ಪುಣ್ಯ ಗರ್ಭದಲ್ಲಿ ಹುಟ್ಟಿದವ ಯಾರೇ ಆಗಲಿ ಶತ್ರುಗಳೊಡನೆ ತಮ್ಮ ಸರ್ವಸ್ವವನ್ನು ಪಣವೊಡ್ಡಿ ಹೋರಾಟ ನಡೆಸಬೇಕಾಗಿದೆ. ಈ ಸಂದೇಶವನ್ನು ಹೊತ್ತು ನಾವು ಬಂದಿದ್ದೇವೆ"—ಎಂದರು

ಇದನ್ನೆಲ್ಲಾ ಚೆನ್ನಾಗಿ ಆಲೋಚಿಸಿದ ಧುಂಡಿರಾಜನು "ಪದ್ಮನಾಭತೀರ್ಥ ಶ್ರೀಪಾದಂಗಳು ನನ್ನ ಮಾತನ್ನು ಅಪಾರ್ಥ ಮಾಡಿಕೊಳ್ಳಬಾರದು. ಈಗ ತಾವು ಹೇಳಿದ ಮಾತುಗಳಿಗೆ ನಮ್ಮ ಸಂಪೂರ್ಣ ಒಪ್ಪಿಗೆ ಇದೆ. ಆದರೆ ನಾವು ದೇವಗಿರಿ ಸಾಮ್ರಾಟರ ಆಶ್ರಿತ ರಾಜರು. ನಮ್ಮಂತಹ ಅಸ್ವತಂತ್ರ ಅಲ್ಪ ಜನ ಏನು ತಾನೇ ಮಾಡಲು ಬಂದೀತು? ಈ ಹೋರಾಟದಲ್ಲಿ ನಾವು ಹೇಗೆ ತಾನೇ ಪಾಲುಗೊಳ್ಳಲು ಸಾಧ್ಯ?"

"ಇಲ್ಲೇ ನೀವು ತಪ್ಪಿರುವುದು. ಈ ಬಾರಿ ನಮ್ಮ ದೊರೆಗಳು ಶತ್ರುಗಳೊಡನೆ ಅಂತಿಮ ಹೋರಾಟ ನಡೆಸಲು ಸಿದ್ಧರಿದ್ದಾರೆ. ಅವರೊಡನೆ ಯಾದವರು ನೆರವಿಗೆ ಬರಲಿ. ಅವರೊಡನೆ ಹೊಯ್ಸಳರೂ, ಪಾಂಡ್ಯ ದೊರೆಗಳೂ ಸಹಕರಿಸಲಿ. ಆಗ ನಮ್ಮ ಸಂಘಟನೆಯ ಪ್ರತಿಭಟನೆಯ ವಿರುದ್ಧ ಯಾರು ನಿಂತರೂ ಮಣಿಯಲೇಬೇಕಾದೀತು."

"ಈಗ ನಮ್ಮಿಂದ ಏನಾಗಬೇಕೆಂದು ನೀವು ನಿರೀಕ್ಷಿಸುತ್ತೀರಿ?"

"ನೀವು ಈ ಸಂಘಟನೆಗೆ ಸೇರಿರಿ. ಯಾದವ ದೊರೆಯನ್ನು ಮನವೊಲಿಸಿ, ಶತ್ರುಗಳಾದ ದಿಲ್ಲೀಶ್ವರನ ಮೇಲೆ ಎತ್ತಿ ಕಟ್ಟುವುದರಲ್ಲಿ ನೆರವಾಗಿರಿ. ಇದರಲ್ಲಿ ನೀವು ಮಹತ್ವದ ಪಾತ್ರ ವಹಿಸಬಹುದು."

"ಹೇಗೆ?"

"ನಿಮ್ಮ ಬಂಧು ಸರ್ವೋತ್ತಮದೇವನು ಯಾದವ ಸೈನ್ಯದಲ್ಲಿ ಪ್ರಭಾವ ಬೀರಬಲ್ಲ ದಂಡನಾಯಕನೆಂದು ಕೇಳಿದ್ದೇವೆ. ಅವನ ಮಿತ್ರ ಯುವರಾಜ ಕುಮಾರ ಶಂಕರದೇವರೆಂದು ಅರಿತಿದ್ದೇವೆ. ಅವರ ಮೂಲಕ ವೃದ್ಧ ದೊರೆ ರಾಮಚಂದ್ರದೇವನನ್ನು ನಾವು ಒಳಗಿಸಬಹುದು."

"ಈ ಕಾರ್ಯಕ್ಕೆ ನಾವು ಸಂಪೂರ್ಣ ಬೆಂಬಲ ನೀಡುತ್ತೇವೆ"—ಧುಂಡಿರಾಜ ಮತ್ತು ಗೋವಿಂದಭಟ್ಟರು ಒಕ್ಕೊರಲಿನಿಂದ ಹೇಳಿದರು.

"ಹಾಗಿದ್ದರೆ ನಾವು ಬಂದ ಕಾರ್ಯ ಯಶಸ್ವಿಯಾಯಿತು. ನಾವು ಇನ್ನು ಮುಂದೆ ಹೊಯ್ಸಳ ದೊರೆ ಮುಮ್ಮಡಿ ಬಲ್ಲಾಳರಾಯರನ್ನೂ, ಮಧುರೆಯ ವೀರಪಾಂಡ್ಯರನ್ನೂ ಸಂದರ್ಶಿಸಿಬರಲು ಹೋಗುತ್ತೇವೆ. ಹಾಗೆಯೇ ಶ್ರೀ ಮಧ್ವಾಚಾರ್ಯರನ್ನೂ ಸಂದರ್ಶಿಸಿ, ಅವರ ಆಶೀರ್ವಾದವನ್ನೂ ಈ ಸ್ವಾತಂತ್ರ್ಯ ಹೋರಾಟಕ್ಕೆ ದೊರಕಿಸಿಕೊಂಡು ಬರುತ್ತೇವೆ. ಹಿಂದಿರುಗುವಾಗ ನಿಮ್ಮನ್ನು ಮತ್ತೊಮ್ಮೆ ನೋಡುತ್ತೇವೆ. ಈಗ ನಮಗೆ ಹೋಗಲು ಅಪ್ಪಣೆ ಕೊಡಬೇಕು" ಎಂದರು ಪದ್ಮನಾಭತೀರ್ಥರು.

"ಶ್ರೀ ಮಧ್ವಾಚಾರ್ಯರ ದರ್ಶನಕ್ಕೆ ನಿಮ್ಮೊಂದಿಗೆ ನಾನೂ ಬರುತ್ತೇನೆ" ಎಂದ ಗೋವಿಂದಭಟ್ಟ.

"ಈಗ ಬೇಡ. ಮತ್ತೊಮ್ಮೆ ನಿಮ್ಮನ್ನು ಶ್ರೀ ಮಧ್ವಾಚಾರ್ಯರಲ್ಲಿಗೆ ನಾವೇ ಕರೆದೊಯ್ಯುತ್ತೇವೆ"-ಎಂದು ವಾಗ್ದಾನಮಾಡಿ ಪದ್ಮನಾಭತೀರ್ಥರು ಅವರನ್ನು ಬೀಳ್ಕೊಂಡು ಹೊರಟರು.

## ಸ್ವಾತಂತ್ರ್ಯದ ಹೋರಾಟ

ಪದ್ಮನಾಭತೀರ್ಥರು ಯಾವ ಮಹತ್ವದ ಉದ್ದಿಶ್ಯವನ್ನು ಹೊತ್ತು ಮಂಗಳವೇಡೆಗೆ ಬಂದಿದ್ದರೋ ಅದು ಈಡೇರಿತ್ತು. ಅವರು ಸಂತೋಷದಿಂದ ದ್ವಾರಸಮುದ್ರದ ದಾರಿಯನ್ನು ಹಿಡಿದರು.

ಅನೇಕ ದಿನಗಳು ಪ್ರಯಾಣ ಮಾಡಿ ಹೊಯ್ಸಳ ರಾಜಧಾನಿಗೆ ಅವರು ಬಂದಾಗ ಸಂಜೆಯಾಗಿತ್ತು. ಅವರು ರಾಜಧಾನಿಯ ಹೊರವಲಯದ ಕೆರೆಯಲ್ಲಿ ಸ್ನಾನಾಹ್ನಿಕಗಳನ್ನು ಮುಗಿಸಿಕೊಂಡು ಹೊಯ್ಸಳೇಶ್ವರ ಶಾಂತಲೇಶ್ವರ ದೇವಾಲಯದಲ್ಲಿ ಮನೋಭಿಮಾನಿದೇವತೆ ರುದ್ರದೇವರನ್ನು ಸಂದರ್ಶಿಸಿದರು. ಅನಂತರ ರಾಜದೂತರ ಮೂಲಕ ಮಾರನೆಯ ದಿನ ಬೆಳಿಗ್ಗೆ ದೊರೆಗೆ ತಾವು ಬಂದಿರುವ ಸಂಗತಿಯನ್ನು ಹೇಳಿಕಳುಹಿಸಿದರು.

ಆಸ್ತಿಕನೂ ದೈವಭಕ್ತನೂ ಹಿಂದೂಸಂಸ್ಕೃತಿಯ ಅಭಿಮಾನಿಯೂ,

ವೀರನೂ ಆಗಿದ್ದ ಬಲ್ಲಾಳರಾಯನು ತಾನೇ ಬಂದು ಪದ್ಮನಾಭತೀರ್ಥರನ್ನು ಎದುರ್ಗೊಂಡು ಕರೆದುಕೊಂಡುಹೋಗಿ ಅರಮನೆಯಲ್ಲಿ ಅವರ ಪಾದಪೂಜೆ, ದೇವರ ಪೂಜೆ ಮತ್ತು ತೀರ್ಥಪ್ರಸಾದಗಳಿಗೆ ವ್ಯವಸ್ಥೆ ಮಾಡಿದನು.

ಭೂರಿಭೋಜನ, ವಿಶ್ರಾಂತಿ, ಮುಗಿದಮೇಲೆ ದೊರೆಯನ್ನು ಅಂತರಂಗಕ್ಕೆ ಕರೆಸಿಕೊಂಡು ತಾವು ಬಂದ ರಹಸ್ಯದ ರಾಯಭಾರವನ್ನು ಕುರಿತು ಪ್ರಸ್ತಾಪಿಸಿದರು.

ಎಲ್ಲವನ್ನೂ ಕೇಳಿದ ದೊರೆಯು ಮುಗುಳುನಗುತ್ತ, "ನಮ್ಮ ನಿಜವಾದ ಶತ್ರು ದೂರದಲ್ಲಿರುವ ಯವನರಲ್ಲ, ನೆರೆಯಲ್ಲಿದ್ದು ನಮಗೆ ತೊಂದರೆ ಕೊಡುತ್ತಿರುವ ದೇವಗಿರಿಯ ಯಾದವರು, ಅವರು ನಮ್ಮೊಡನೆ ಭಿಲ್ಲಮ, ಸಿಂಘಣನ ಕಾಲದಿಂದ ಸೆಣೆಸುತ್ತಾ ಬಂದಿದ್ದಾರೆ. ಅವರು ದೊಡ್ಡವರಾಗಿರುವುದು, ನಮ್ಮದಾಗಿದ್ದ ರಾಜ್ಯಗಳನ್ನು ಗೆದ್ದು. ಅವರನ್ನು ನಾವು ಬಗ್ಗುಬಡಿಯದೆ, ಅವರೊಡನೆ ಸಹಕರಿಸಿ, ಯವನರೊಡನೆ ಹೋರಾಡುವುದೇ ?"

"ನೀವು ತಿಳಿದಂತೆ ಇದು ಹೊಯ್ಸಳರು-ಯಾದವರ ರಾಜ್ಯ ವಿಸ್ತರಣೆಯ ಹೋರಾಟವಲ್ಲ ಬಲ್ಲಾಳ ದೊರೆಗಳೇ. ಇದು ವಿಧರ್ಮೀಯರಾದ ಯವನರಿಗೂ ವೈದಿಕ ಸಂಸ್ಕೃತಿಯಲ್ಲಿ ನಂಬಿಕೆ ಇರಿಸಿರುವ ಭಾರತೀಯರಾದ ಹಿಂದೂಗಳಿಗೂ ನಡೆದಿರುವ ಮತೀಯ ಹೋರಾಟ. ಈಗ ನೀವು ಹಿಂದಣ ವೈರವನ್ನು ಮರೆತು ಸಂಘಟಿತ ಪ್ರಯತ್ನಕ್ಕೆ ಸೇರದಿದ್ದರೆ, ನಾಳೆ ದೇವಗಿರಿ, ಓರಂಗಲ್ಲನ್ನು ಗೆದ್ದು ವಿಜಯೋನ್ಮತ್ತರಾದ ಯವನರು ನಿಮ್ಮ ಮೇಲೆ ಖಂಡಿತವಾಗಿಯೂ ದಂಡೆತ್ತಿ ಬಂದು, ಉಳಿದ ಹಿಂದೂರಾಜ್ಯಗಳಿಗೆ ಒದಗಿದ ಗತಿಯನ್ನೇ ನಿಮಗೂ ಕಾಣಿಸುತ್ತಾರೆ !"

"ಇದು ನಿಮ್ಮ ಊಹೆಯಲ್ಲ ತಾನೇ."

"ಇತಿಹಾಸದಿಂದ ಕಲಿಯಬೇಕಾದ ಪಾಠ !"

'ವಿರಕ್ತರಾದ ನಿಮಗೆ ರಾಜಕಾರಣವೇನು ಗೊತ್ತು' ಎಂಬಂತೆ ಬಲ್ಲಾಳ ದೊರೆ ತಿರಸ್ಕಾರದಿಂದ ನೋಡಿದ. ಅವನ ದೃಷ್ಟಿಯನ್ನು ಅರ್ಥಮಾಡಿಕೊಂಡು ಪದ್ಮನಾಭತೀರ್ಥರು ಹೇಳಿದರು.

"ಅಯ್ಯಾ ಮಹಾರಾಜ, ನಾವು ಹುಟ್ಟುತ್ತಲೇ ವಿರಕ್ತರೂ, ಸನ್ಯಾಸಿಗಳೂ ಆಗಿ ಹುಟ್ಟಲಿಲ್ಲವೆಂಬುದನ್ನು ಮರೆಯಬೇಡ. ನಾವು ಮೂವತ್ತುವರ್ಷಗಳಕಾಲ ರಾಜಕಾರಣದಲ್ಲಿದ್ದವರು, ತಿಳಿದುಕೊ. ಈಗ ನಾವು ನಮ್ಮ ಸ್ವಾರ್ಥ ಸಾಧಿಸಲು

ಪರಿಸ್ಥಿತಿಯನ್ನು ಉಪೇಕ್ಷಿಸಿದರೆ, ಅದಕ್ಕಾಗಿ ನಾವು ದಂಡ ತೆರಬೇಕಾದೀತು. ಮುಂದೆ ಅದಕ್ಕಾಗಿ ಪರಿತಪಿಸಬೇಕಾದೀತು. ಜನತೆಯ ಕಣ್ಣಿನಲ್ಲಿ ರಾಷ್ಟ್ರದ್ರೋಹಿಗಳಾಗಿ ಮುಂದಿನ ಶತಮಾನಗಳಲ್ಲಿ ತಪ್ಪಿತಸ್ಥರಾಗಿ ನಿಲ್ಲಬೇಕಾದೀತು, ಎಚ್ಚರವಿರಲಿ. ಯಾವುದಕ್ಕೂ ದುಡುಕುವ ಸಮಯವಲ್ಲ. ನಿಮ್ಮ ನಿರ್ಧಾರವೇನಿದ್ದರೂ, ನಾವು ಮಧುರೆಯಿಂದ ಹಿಂತಿರುಗಿ ಬಂದಾಗ ತಿಳಿಸಿರಿ" ಎಂದು ಹೇಳಿ ಪದ್ಮನಾಭ ತೀರ್ಥರು ದ್ವಾರಸಮುದ್ರವನ್ನು ಬಿಟ್ಟು ಮಧುರೆಯ ದಾರಿ ಹಿಡಿದರು.

ದ್ವಾರಸಮುದ್ರದಲ್ಲಿ ದೊರೆತ ನಿರುತ್ಸಾಹದ ಸ್ವಾಗತದಿಂದ ಅವರಿಗೆ ಬೇಸರವಾದರೂ ಅದನ್ನು ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ಅಧಿಕಾರೋನ್ಮತ್ತ ದೊರೆಗಳಿಗೆ ವಿಧಿ ಮಾತ್ರ ಪಾಠ ಕಲಿಸಲು ಸಮರ್ಥನೆಂಬುದು ಅವರಿಗೆ ತಿಳಿದಿತ್ತು. ಫಲಾಫಲಗಳು ಶ್ರೀ ಹರಿಯ ಚಿತ್ತ, ಕರ್ತವ್ಯ ತಮ್ಮದು ಎಂದು ಅವರು ನಿಜವಾದ ವಿರಕ್ತರಂತೆ ವಸ್ತುಸ್ಥಿತಿಯನ್ನು ಒಪ್ಪಿಕೊಂಡು ಅಲ್ಲಿಂದ ತೆರಳಿದರು.

ಅವರು ಮಧುರೆಗೆ ಬಂದಾಗ ಅಲ್ಲಿನ ರಾಜಕೀಯ ಸ್ಥಿತಿ ಸ್ಫೋಟಿಸುವ ಸ್ಥಿತಿಯಲ್ಲಿತ್ತು. ಹಿರಿಯ ಪಾಂಡ್ಯ ದೊರೆಯು ತೀರಿಕೊಂಡು ರಾಜ್ಯಕ್ಕಾಗಿ ಅವನ ಮಕ್ಕಳಲ್ಲಿ ಹೋರಾಟಕ್ಕೆ ಕಣ ಸಿದ್ಧವಾಗುತ್ತಿತ್ತು. ಅಣ್ಣತಮ್ಮಂದಿರಾದ ಸುಂದರ ಪಾಂಡ್ಯನಿಗೂ ವೀರಪಾಂಡ್ಯನಿಗೂ ಯುದ್ಧ ನಡೆಯುವುದು ಅನಿವಾರ್ಯವಾಗಿತ್ತು.

ಇಬ್ಬರೂ ದಂಡು ಕಟ್ಟುವ ಸನ್ನಾಹದಲ್ಲಿ ಮಲಬಾರ ಪ್ರದೇಶದಲ್ಲಿ ನಿರತರಾಗಿದ್ದರು. ಇಬ್ಬರೂ ಹೊಯ್ಸಳಬಲ್ಲಾಳನ ಸಹಾಯಕ್ಕಾಗಿ ಪ್ರಯತ್ನಿಸುತ್ತಿದ್ದರು. ಈ ಕಾರ್ಯ ಸಾಧಿಸದಿದ್ದರೆ, ದಿಲ್ಲಿಯ ಮುಸಲ್ಮಾನರನ್ನಾದರೂ ಸ್ವಾಗತಿಸಬೇಕೆಂದು ಸುಂದರಪಾಂಡ್ಯನು ಸ್ವಾರ್ಥದ್ರೋಹದಿಂದ ನಿಶ್ಚಯಿಸಿದ್ದನು. ಅವನು ಈಗಾಗಲೇ ದಿಲ್ಲೀಶ್ವರನಾದ ಅಲ್ಲಾವುದ್ದೀನನ ಸಮ್ಮುಖಕ್ಕೆ ನೆರವನ್ನು ಬೇಡಿ ಪತ್ರವನ್ನು ಬರೆದು, ವಿಶೇಷ ರಾಯಭಾರಿಗಳೊಡನೆ, ರಹಸ್ಯವಾಗಿ ಕಳುಹಿಸಿದ್ದನು.

ಇಂಥಸ್ಥಿತಿಯಲ್ಲಿ ಪದ್ಮನಾಭತೀರ್ಥರ ಮಾತನ್ನು ಕೇಳುವವರು ಯಾರು ? ಅವರು ಮಲಬಾರಿನ ಮೂಲಕ ಪ್ರಯಾಣ ಮಾಡಿ, ಆ ಸಹೋದರರನ್ನು ಕಂಡು ಬುದ್ಧಿ ಮಾತನ್ನು ಹೇಳಿ, ಅನಂತರ ಉಡುಪಿ ಕ್ಷೇತ್ರಕ್ಕೆ ಆಗಮಿಸಿದರು. ಅಲ್ಲಿ ಶ್ರೀ ಮಧ್ವಾಚಾರ್ಯರಿಗೆ ಎಲ್ಲವನ್ನು ಬಿನ್ನವಿಸಿ ಖಿನ್ನರಾಗಿ ಕುಳಿತರು.

"ಪದ್ಮನಾಭತೀರ್ಥರೇ, ಇದಕ್ಕಾಗಿ ನೀವೇಕೆ ಖಿನ್ನರಾಗಬೇಕು ? ಶ್ರೀಹರಿಯ ಸಂಕಲ್ಪವಿದ್ದಂತೆ ನಡೆಯಲಿ. ಅದಕ್ಕಾಗಿ ನಾವೇಕೆ ಚಿಂತಿಸ

ಬೇಕು. ಈಗ ನಮ್ಮ ವೈದಿಕ ಧರ್ಮಕ್ಕೆ ವಿಪತ್ತು ಬಂದಂತೆ ಕಂಡರೂ ಅದು ಸನಾತನ ಧರ್ಮವೆಂಬುದು ನೀವರಿಯಿರಾ? ಹಿಂದೆ ಅದನ್ನು ನಾಶ ಮಾಡಲು ವಿಧರ್ಮೀಯರಾದ ಶಕರೂ, ಹೂಣರೂ ಬಂದಂತೆ ನಮ್ಮವರೇ ಆದ ಜೈನರೂ ಬೌದ್ಧರೂ ಪ್ರಯತ್ನಿಸಿದರು. ಆದರೆ ಅದನ್ನು ನಾಶ ಮಾಡಲು ಅವರಿಂದ ಸಾಧ್ಯವಾಗಲಿಲ್ಲ. ಅದು ಅಮರವಾಗಿರುವುದರಿಂದಲೇ ಸನಾತನವೆನಿಸಿದೆ. ಈಗ ಅಪದೆಸೆ ಬಂದಿರಬಹುದು ಅಂತಲೇ ಈ ಬಗೆಯ ವಿಪತ್ತು ತಲೆದೋರಿರುವುದು ನಿಜವಾದ ಅಪಾಯ ಬಂದಿರುವುದು ಪರಕೀಯರಿಂದಲ್ಲ. ನಮ್ಮವರೇ ನಮಗೆ ಶತ್ರುಗಳಾಗಿದ್ದಾರೆ. ಅವರ ಸ್ವಾರ್ಥ ದ್ವೇಷಾಸೂಯೆಗಳು ನಿಜವಾಗಿ ಪರಿಹಾರ ವಾಗಿ, ಜನತೆ ಜಾಗ್ರತಿಗೊಂಡು, ಸ್ವರೂಪಜ್ಞಾನೋದಯವಾದಾಗ ಮಾತ್ರ ಅವರು ಕಳೆದುಕೊಂಡಿರುವ ಸ್ವಾತಂತ್ರ್ಯ ಅವರಿಗೆ ಲಭಿಸುತ್ತದೆ. ಈ ಆತ್ಮೋ ದ್ಧಾರದ ಮಾರ್ಗದಲ್ಲಿ ಇರುವ ಗಂಡಾಂತರಗಳು ಪರಿಹಾರವಾಗದೆ ಇರುವುದಿಲ್ಲ. ವೇದಮಂತ್ರದ್ರಷ್ಟರಾದ ಋಷಿಗಳ ಪರಂಪರೆಯಲ್ಲಿ ಬಂದ ಭಾರತೀಯರಿಗೆ ಅಲ್ಲಿ ಯವರೆಗೆ ಸೋಲು, ಅಪಮಾನ, ಪರಪೀಡೆ, ದುಃಖ ದಾರಿದ್ರ್ಯಗಳು ತಪ್ಪುವು ದಿಲ್ಲ. ಈ ಮಾತು ಸತ್ಯ. ದೀರ್ಘಕಾಲ ನಡೆಯುವ ಹೋರಾಟ ಇದು. ಶತ ಮಾನಗಳಕಾಲ ನಡೆಯುವ ಹೋರಾಟ ಇದು. ಜ್ಞಾನ ಅಜ್ಞಾನಗಳ ನಡುವೆ, ವಿದ್ಯೆ ಅವಿದ್ಯೆಗಳ ನಡುವೆ ಸತ್ಯ ಮೋಸಗಳ ನಡುವೆ, ಸಾತ್ವಿಕ ಡಾಂಭಿಕರ ನಡುವೆ ನಡೆಯುವ ಹೋರಾಟ ಇದು–ನೀವೂ ನಾವೂ ಕೇವಲ ಕರ್ಮಚಾರಿಗಳು ಅಷ್ಟೇ. ನಡೆಯುವುದೆಲ್ಲವೂ ಆ ಶ್ರೀಹರಿಯ ಇಚ್ಛೆಯಂತೆ ಎಂದು ತ್ರಿಕರಣಪೂರ್ವಕವಾಗಿ ನಂಬಿ, ನಮ್ಮ ಪಾಲಿಗೆ ಬಂದ ಕರ್ತವ್ಯವನ್ನು ನಾವು ನಿಷ್ಠೆಯಿಂದ ಮಾಡಬೇಕು" ಎಂದು ಪದ್ಮನಾಭತೀರ್ಥರಿಗೆ ಸಮಾಧಾನ ಹೇಳಿ ಅವರನ್ನು ಬೀಳ್ಕೊಟ್ಟರು.

"ಈ ಬಾರಿ ಬರುವಾಗ ಗೋವಿಂದಭಟ್ಟರನ್ನು ಜೊತೆಯಲ್ಲಿ ಕರೆತನ್ನಿರಿ. ಅದೊಂದು ಸುಜೀವ. ಅದಕ್ಕೆ ಸನ್ಯಾಸ ನಮ್ಮಿಂದಲೇ ದೊರಕಬೇಕಾಗಿದೆ. ನಮ್ಮ ಸಾಕ್ಷಾತ್ ಶಿಷ್ಯರಲ್ಲಿ ಅವರೇ ಕೊನೆಯ ಸನ್ಯಾಸಿಗಳು. ನಾಳೆ ನಮ್ಮ ಸರ್ವಜ್ಞಪೀಠಕ್ಕೆ ಏರಬೇಕಾಗಿರುವ ಪುಣ್ಯಜೀವ ಅದು"

––ಎಂದು ಹೇಳಿ ಅವರನ್ನು ಬೀಳ್ಕೊಟ್ಟರು.

# ಮಲ್ಲಿಕಾಫರನು ಹಿಂದೂ ಮಕುಟವರ್ಧನರ ಮೇಲೆ ನಡೆದನು

ಯಾವುದು ನಡೆಯಬಾರದೆಂದು ಪದ್ಮನಾಭತೀರ್ಥರು ಆಶಿಸಿದ್ದರೋ ಅದು ನಡದೇ ನಡೆದಿತ್ತು. ಇದರಲ್ಲಿ ವಿಧಿಯ ಸಂಕಲ್ಪ ಬೇರೆ ಇತ್ತು.

ಹಿಂದಕ್ಕೆ ಹೋಗುವಂದು ಧುಂಡಿರಾಜನೊಡನೆ ಅವರು ದೇವಗಿರಿಗೆ ತೆರಳಿದರು. ಸರ್ವೋತ್ತಮದೇವನ ಮೂಲಕ ಯುವರಾಜಕುಮಾರ ಸಿಂಘಣನನ್ನು ಈ ಸಂಘಟನೆಗೇ ಒಲಿಸಿಕೊಳ್ಳಲು ಆಶಿಸಿದರು. ಸಮರ್ಥನಾದರೂ ಶಾಂತಿಪ್ರಿಯನೂ, ಹೇಡಿಯೂ ವಿಚಾರ ಶೂನ್ಯನೂ ಆಗಿದ್ದ ರಾಮಚಂದ್ರ ದೇವನು ಈ ಹಿಂದೂ ಪ್ರತಿಭಟನೆಗೆ ಬೆಂಬಲ ನೀಡಲಿಲ್ಲ.

ತಾವು ದಿಲ್ಲಿ ಸುಲ್ತಾನರನ್ನು ಯುದ್ಧದಲ್ಲಿ ಎದುರಿಸಿದರೆ ಸರ್ವನಾಶ ತಂದುಕೊಳ್ಳಬೇಕಾದೀತೆಂದು ಬಲ್ಲಾಳನು ಪದ್ಮನಾಭತೀರ್ಥರ ಅಭಿಪ್ರಾಯಕ್ಕೆ ಸಮ್ಮತಿಸಲಿಲ್ಲ. ಕುಲಶತ್ರುಗಳಾದ ಕಾಕತೀಯರು, ಹೊಯ್ಸಳರೊಡನೆ ಸೇರಿ ಮುಸಲ್ಮಾನರನ್ನು ಎದುರಿಸಿ ಹೋರಾಟ ನಡೆಸುವುದು ಹುಚ್ಚು ಸಾಹಸವಾದೀತೆಂದು ಬಗೆದನು. ಈ ಸುಸಂಧಿ ಸಾಧಿಸಿ ದಿಲ್ಲೀಶ್ವರರ ಮಿತ್ರರಾಗಿದ್ದುಕೊಂಡು, ಕುಲಕಂಟಕರಾಗಿ, ಶತಮಾನಗಳಿಂದ ತೊಂದರೆ ಕೊಡುತ್ತಿದ್ದ ಆ ಇಬ್ಬರು ಶತ್ರುಗಳನ್ನು ಈಗ ನಿಷ್ಕರುಣೆಯಿಂದ ಸದೆ ಬಡಿದು, ಶತ್ರುನಾಶ ಸಾಧಿಸಬೇಕಾದ ಕಾಲದಲ್ಲಿ, ಸ್ವಾರ್ಥತ್ಯಾಗ ಮಾಡಿದರೆ ಮೂರ್ಖತನವಾಗದೇ ಎಂದು ಅವನ ಪ್ರಶ್ನೆ. ಅಂಥವನೊಡನೆ ಚರ್ಚಿಸಿ ಪ್ರಯೋಜನವಿರಲಿಲ್ಲ. ರಾಮಚಂದ್ರದೇವನು ಶಾಂತಿಯ ಹೆಸರಿನಲ್ಲಿ ತನ್ನ ಹಿರಿಯರು ತಲತಲಾಂತರದಿಂದ ಸಂಗ್ರಹಿಸಿದ್ದ ಕೋಟ್ಯಾಂತರ ವರಹಗಳು ಬೆಲೆಬಾಳುವ ಅಮೂಲ್ಯಸಂಪತ್ತನ್ನು ಧಾರೆ ಎರೆದಿದ್ದ, ಅಲ್ಲಾವುದ್ದೀನನನ್ನು ಅಳಿಯನನ್ನಾಗಿ ಮಾಡಿಕೊಳ್ಳಲು ಹೆಮ್ಮೆ ತಾಳಿದ್ದ. ಸಂಪದ್ಭರಿತ ಭಾಗಗಳನ್ನು ವಿಧರ್ಮೀಯನಾದ ಅವನಿಗೆ ಬಳುವಳಿ ನೀಡಿದ್ದ. ಇಂಥ ಅವಿವೇಕಿಯನ್ನು ಯಾರು ತಾನೇ ಒಪ್ಪಿಸಲು ಸಾಧ್ಯ. ಈ ಪ್ರಯತ್ನವನ್ನು ಕೈಬಿಟ್ಟು ಪದ್ಮನಾಭತೀರ್ಥರು ಸಿಂಘಣನನ್ನು ತಮ್ಮ ಕಡೆಗೆ ಒಲಿಸಿಕೊಂಡಿದ್ದರು.

ಅವನು ಇನ್ನೂ ಸ್ವಾಭಿಮಾನಿಯಾದ ಬಿಸಿ ನೆತ್ತರಿನ ತರುಣ. ಪದ್ಮನಾಭತೀರ್ಥರಂಥ ವರ್ಚಸ್ವೀ ಸನ್ಯಾಸಿಗಳ ಮಾತನ್ನು ಅರ್ಥ ಮಾಡಿಕೊಂಡನು. ತಂದೆಗೆ ತಿಳಿಸದಂತೆ, ದಿಲ್ಲಿಗೆ ಕೊಡಬೇಕಾಗಿದ್ದ ವಾರ್ಷಿಕ ಪೊಗದಿಯನ್ನು

ಕೊಡುವುದಿಲ್ಲವೆಂದು ಘೋಷಿಸಿ ಅಲ್ಲಾವುದ್ದೀನನಿಗೆ ಪತ್ರ ಬರೆದನು. ಈ ಬಗ್ಗೆ ತಂದೆ ಮಕ್ಕಳಲ್ಲಿ ವೈಮನಸ್ಸು ಉಂಟಾದರೂ, ಇಟ್ಟ ಹೆಜ್ಜೆಯನ್ನು ಸಿಂಘಣನು ಹಿಂತೆಗೆಯಲಿಲ್ಲ.

ಬೇಸತ್ತ ರಾಮಚಂದ್ರದೇವನು ಅಲ್ಲಾವುದ್ದೀನನಿಗೆ ಪತ್ರ ಬರೆದು ತನ್ನ ತಿಳಿಗೇಡಿ ಮಗನು ಮಾಡಿರುವ ಮಹಾಪರಾಧವನ್ನು ಕ್ಷಮಿಸಬೇಕೆಂದೂ, ಅವನೇ ದೇವಗಿರಿಗೆ ಬಂದರೆ, ಇಲ್ಲವೆ ತನ್ನ ಅಧಿಕಾರಿಗಳನ್ನು ಕಳುಹಿಸಿಕೊಟ್ಟರೆ ಬಾಕಿ ಯಾದ ಪೊಗದಿಯನ್ನು ಕಳುಹಿಸಿಕೊಡುವುದಾಗಿ ತಿಳಿಸಿದನು.

ಅಲ್ಲಾವುದ್ದೀನನಿಗೆ ಬೇಕಾಗಿದ್ದುದೂ ಇಂಥ ಕುಂಟುನೆಪ. ಅವನು ಮಲ್ಲಿಕಾಫರನಿಗೆ ದೇವಗಿರಿಯ ಮೇಲೆ ದಾಳಿಯಿಡಲು ಆಜ್ಞೆ ಮಾಡಿದನು..

ಮಲ್ಲಿಕಾಫರನು ಸೈನ್ಯದೊಡನೆ ಹೊರಟು ದಿನಾಂಕ 24, ಮಾರ್ಚಿ 1307 ರಂದು ದೇವಗಿರಿಯನ್ನು ಮುತ್ತಿದನು. ಈ ಸಮಯದಲ್ಲಿ ಭೀಕರ ಹೋರಾಟ ನಡೆದು ಮಲ್ಲಿಕಾಫರನಿಗೆ ಜಯವಾಯಿತು. ಅವನು ರಾಮಚಂದ್ರ ದೇವನನ್ನು ಸೆರೆ ಹಿಡಿದು ದೆಹಲಿಗೆ ಕಳುಹಿಸಿಕೊಟ್ಟನು. ಈ ಸೆಪದಲ್ಲಿ ಅವನು ರಾಮದೇವನ ಭಂಡಾರವನ್ನು ಸೂರೆಮಾಡಿದನು. ಅಸಂಖ್ಯಾತ ಆನೆ ಕುದುರೆ ಗಳನ್ನು ದೆಹಲಿಗೆ ಕಾಣಿಕೆಯಾಗಿ ಕಳುಹಿಸಿದನು. ಅಲ್ಲಾವುದ್ದೀನನು ಕುಟಿಲ ನಾಗಿದ್ದುದರಿಂದ ರಾಮಚಂದ್ರದೇವನು ತಮ್ಮ ಮಿತ್ರನಾಗಿ ಉಳಿದರೆ ಲಾಭವೆಂದು ಅರಿತು ಅವನನ್ನು ಗೌರವದಿಂದ ಬರಮಾಡಿಕೊಂಡು ಆರು ತಿಂಗಳ ಕಾಲ ದೆಹಲಿ ಯಲ್ಲಿ ಗೌರವಾನ್ವಿತ ಅತಿಥಿಯಾಗಿ ಇರಿಸಿಕೊಂಡನು. ಅವನನ್ನು ಒಲಿಸಿ ಕೊಳ್ಳಲು ರಾಯರಾಯನೆಂಬ ಬಿರುದನ್ನು ಇತ್ತುದಲ್ಲದೆ ನವಸಾರಿಪ್ರಾಂತ್ಯ ವನ್ನು ಅವನಿಗೆ ಉಳುವಳಿಯಾಗಿ ಕೊಟ್ಟನು. ಅವನ ಪ್ರಾರ್ಥನೆಗೆ ಓಗೊಟ್ಟವ ನಂತೆ ನಟಿಸಿ, ಅವನ ಮಗ ಸಿಂಘಣನನ್ನು ಈ ಬಾರಿ ಉದಾರವಾಗಿ ಕ್ಷಮಿಸಿದನು.

ರಾಮಚಂದ್ರದೇವನು ಈ ನಾಟಕದೀವ ಅವನ ವಿಶ್ವಾಸವನ್ನು ನಿಜವಾದು ವೆಂದು ತಿಳಿದು ದಿಲ್ಲಿಯ ಮುಂದಿನ ದಂಡಯಾತ್ರೆಗಳಿಗೆಲ್ಲ ಸಂಪೂರ್ಣ ನೆರವನ್ನು ನೀಡಿದುದಲ್ಲದೆ, ಓರಂಗಲ್ಲು, ದ್ವಾರಸಮುದ್ರ, ಮಧುರೆಗಳನ್ನು ಗೆಲ್ಲಲು ಸೈನ್ಯ ವಾಗೂ ಸಾಮಗ್ರಿಗಳಿಂದ ನೆರವಾದನು.

ಅನಂತರ ಅಲ್ಲಾವುದ್ದೀನನು ತನ್ನ ಮೇಲೆ ಅಸಂತೃಪ್ತರಾಗಿದ್ದ ಕಾಕತೀ ಯರನ್ನು ವಿಚಾರಿಸಿಕೊಳ್ಳಲು ತನ್ನ ದಳಪತಿ ಮಲ್ಲಿಕಾಫರನನ್ನು ಕಳುಹಿಸಿ ಕೊಟ್ಟನು. ಕ್ರಿ. ಶ. 1303 ರಲ್ಲೇ ಕಾಕತೀಯರ ಸಂಪತ್ತಿನ ಆಸೆಯಿಂದ

ಅವರ ಮೇಲೆ ದಂಡೆತ್ತಿ ಕಳುಹಿಸಿದ್ದರೂ ಕಾರಣಾಂತರಗಳಿಂದ ಅವನ ಆಸೆ ಈಡೇರದೆ ಹೋಗಿತ್ತು.

ಈಗ ಸ್ವತಂತ್ರ ಹಿಂದೂ ರಾಜ್ಯವಾದ ಓರಂಗಲ್ಲನ್ನು ಕಬಳಿಸಲು ನವೆಂಬರ್ 1, 1309 ರಂದು ಸೈನ್ಯವನ್ನು ಕಳುಹಿಸಿಕೊಟ್ಟನು.

ರಾಮಚಂದ್ರದೇವನು ಸುಲ್ತಾನನಿಗೆ ವಚನ ಕೊಟ್ಟಿದ್ದಂತೆ ಒಂದು ಮರಾಠಾ ಸೈನ್ಯವನ್ನು ಮಲ್ಲಿಕಾಫರನ ಸೈನ್ಯಕ್ಕೆ ಕಳುಹಿಸಿಕೊಟ್ಟದಲ್ಲದೆ, ಇತರ ವಿಷಯದಲ್ಲೂ ನೆರವಿತ್ತನು.

ಮಲ್ಲಿಕ ನಯೂಬನೆನಿಸಿದ ಕಾಫರನು ಭೆರಗಾಡ, ಸಿರಪುರಗಳನ್ನು ಮುತ್ತಿ ತೆಲಂಗಾಣದ ಬಹುಪಾಲು ಪ್ರದೇಶವನ್ನು ತನ್ನ ವಶಮಾಡಿಕೊಂಡನು. ಅವನು ಓರಂಗಲ್ಲಿನ ಬಳಿಯ ಹನುಮಕೊಂಡದ ಬಳಿ ಬೀಡುಬಿಟ್ಟು ಅಸಂಖ್ಯಾತ ಸ್ತ್ರೀಪುರುಷರೆನ್ನದೆ, ನಿರಪರಾಧಿ ಹಿಂದುಗಳನ್ನು ಕ್ರೂರ ರೀತಿಯಲ್ಲಿ ಕೊಲೆ ಮಾಡಿದನು. ಪ್ರತಾಪರುದ್ರನಿಗೆ ಭಯವುಂಟುಮಾಡುವುದೇ ಇದರ ಉದ್ದೇಶವಾಗಿತ್ತು.

ಪ್ರತಾಪರುದ್ರನು ಇದಕ್ಕೆಲ್ಲಾ ಸೊಪ್ಪು ಹಾಕಲಿಲ್ಲ. ಅವನ ಬಳಿ ಒಂಬತ್ತು ಲಕ್ಷ ಬಿಲ್ಗಾರರು ಇದ್ದರು. ಇಪ್ಪತ್ತುಸಾವಿರ ಕುದುರೆಗಳಿದ್ದವು. ಆದರೆ ಮುಸಲ್ಮಾನರ ದಂಡು ಒಂದು ಲಕ್ಷಕ್ಕೂ ಮೀರಿತ್ತು.

ಈ ಹೋರಾಟ ತನ್ನ ಅಳಿವು ಉಳಿವಿನ ಹೋರಾಟವೆಂದು ಅವನಿಗೆ ತಿಳಿದಿತ್ತು. ಅವನು ಪ್ರಾಣಹೋದರೂ ಶತ್ರುಗಳಿಗೆ ತಲೆಬಾಗುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದನು. ಆದರೆ ದೈವಗತಿ ಬೇರೆ ಇತ್ತು. ತನ್ನ ಕೋಟೆಯನ್ನು ಎಷ್ಟು ದೀರ್ಘಕಾಲ ರಕ್ಷಿಸಿಕೊಂಡರೂ, ಒಂದೂವರೆ ತಿಂಗಳ ಹೋರಾಟದ ಕೊನೆಯಲ್ಲಿ ಆಹಾರ ಹಾಗೂ ಯುದ್ಧ ವಸ್ತುಗಳ ಸಂಗ್ರಹ ತೀರಿ ಬರಲು ಬೇರೆ ದಾರಿಯಿಲ್ಲದೆ ಅವನು ಶರಣಾಗತನಾಗಬೇಕಾಯಿತು. ಹೀಗೆ ಮಾಡುವುದರ ಬದಲು, ಆತ್ಮಹತ್ಯ ಮಾಡಿಕೊಳ್ಳುವುದು ಲೇಸೆಂದು ನಿಶ್ಚಯಿಸಿದ ದೊರೆಯನ್ನು ಪದ್ಮನಾಭತೀರ್ಥರೇ ಸಮಾಧಾನಪಡಿಸಿ, ಶಾಂತಿ ಸಂಧಾನಕ್ಕೆ ಕಳುಹಿಸಿದರು.

"ಈ ಬಾರಿ ನಾವು ಸೋಲನ್ನು ಒಪ್ಪಿಕೊಂಡು ಸ್ನೇಹಿತರಾದವರಂತೆ ನಟಿಸಿ ನಾಳೆ ಶಕ್ತಿ ಸಂಚಯಿಸಿ, ಶತ್ರುಗಳ ಮೇಲೆ ಸೇಡು ತೀರಿಸಿಕೊಳ್ಳುವುದೇ ಸರಿಯಾದ ದಾರಿ"—ಎಂದು ಹೇಳಿ ಸಮಾಧಾನ ಮಾಡಿದರು.

ಈ ಒಪ್ಪಂದಕ್ಕೆ ಸಮ್ಮತಿಸಿ ಮಲ್ಲಿಕಾಫರನು ಪ್ರತಾಪರುದ್ರದೇವನಿಂದ

ಅವನ ತೂಕದ ಚಿನ್ನವನ್ನು ಬೇಡಿದನು. ಅರಮನೆಯ ಭಂಡಾರದ ಸಂಪತ್ತ ನ್ನೆಲ್ಲಾ ಒಪ್ಪಿಸಲು ಹೇಳಿದನು. ಅವನಿಂದ ನೂರು ಆನೆಗಳು, ಏಳು ಸಾವಿರ ಕುದುರೆಗಳನ್ನು ಕಿತ್ತುಕೊಂಡನು. ಅವನಿಗೆ ದೊರೆತ ವಿಪುಲ ಸೂರೆಯಲ್ಲಿ ಕೋಟಿ ನೂರು ವಜ್ರವೂ ಒಂದಾಗಿತ್ತೆಂದು ಕಾಫೀಖಾನನೆಂಬ ಮುಸ್ಲಿಂ ಇತಿಹಾಸಕಾರನು ಬರೆದಿದ್ದಾನೆ.

ಹೀಗೆ ವಿಪುಲ ಸಂಪತ್ತಿನೊಡನೆ ದಿನಾಂಕ 20, ಮಾರ್ಚ್ 1310 ರಂದು ಅಲ್ಲಿಂದ ಕಾಲ್ತೆಗೆದು ಪ್ರಯಾಣ ಮಾಡಿ, ಜೂನ್ 11 ರಂದು ದೆಹಲಿಯನ್ನು ತಲುಪಿ, ತನ್ನ ಸೂರೆಯನ್ನು ಸುಲ್ತಾನ ಅಲ್ಲಾವುದ್ದೀನನಿಗೆ ಒಪ್ಪಿಸಿದನು. ಅವನು ಸುಪ್ರೀತನಾಗಿ ವಿಶೇಷ ದರ್ಬಾರಿನಲ್ಲಿ ಮಲ್ಲಿಕಾಫರನನ್ನು ಗೌರವಿಸಿದನು.

ಮುಂದಿನ ದಂಡಯಾತ್ರೆಯ ಕಥೆ ಭಾರತೀಯರ ಸ್ವಾತಂತ್ರ್ಯ ಹರಣದ ದಾರುಣ ಕಥೆಯಾಗಿದೆ. ಅವನು ಕಾಕತೀಯರ ನೆರವಿಗೆ ಬಾರದಿದ್ದ ಬಲ್ಲಾಳನ ಮೇಲೆ ದಂಡೆತ್ತಿ ಹೊರಟು, 1311ನೇ ಫೆಬ್ರವರಿ 26 ರಂದು ದ್ವಾರಸಮುದ್ರ ವನ್ನು ಮುತ್ತಿದನು. ಅವನಿಗೆ ತಾನು ಕೊಟ್ಟಿದ್ದ ವಚನದಂತೆ ಪರಶುರಾಮ ದೇವನೆಂಬುವನನ್ನು, ರಾಮಚಂದ್ರದೇವನು ಮಾರ್ಗದರ್ಶಿಯಾಗಿ, ಜೊತೆಗೆ ಕಳು ಹಿಸಿಕೊಟ್ಟನು. ಅಲ್ಲಿ ಅವನಿಗೆ ವಿಪುಲವಾದ ಸೂರೆ ದೊರಕಿತು. ದ್ವಾರ ಸಮುದ್ರವು ಶತ್ರುಗಳ ಪಾಲಾಗಿ, ಅವರ ಕೈಯಿಂದ ಸಂಪೂರ್ಣವಾಗಿ ನಾಶವಾಗಿ ಇಂದಿನ ಹಳೇಬೀಡಾಯಿತು.

ಇದು ಪದ್ಮನಾಭತೀರ್ಥರ ಸಲಹೆಯನ್ನು ಸ್ವೀಕರಿಸದೆ ಹೋದ ಫಲ ವೆಂದು, ಜೀವದಿಂದ ತಲೆತಪ್ಪಿಸಿಕೊಂಡ ಮುಮ್ಮಡಿ ಬಲ್ಲಾಳನು ಸಾಯುವ ವರೆಗೆ ಪರಿತಪಿಸಬೇಕಾಯಿತು. ಇದು ಇತಿಹಾಸದ ದುರಂತಗಳಲ್ಲಿ ಒಂದು.

ಇದೇ ಗತಿ ಮುಸಲ್ಮಾನರನ್ನು ಆಹ್ವಾನಿಸಿದ್ದ ಮಧುರೆಯ ಸುಂದರಪಾಂಡ ನಿಗೂ, ವೀರಪಾಂಡ್ಯನಿಗೂ ಪ್ರಾಪ್ತವಾಯಿತು. ವೀರಪಾಂಡ್ಯನ ಬಳಿಯಿದ್ದ ಒಂದುಸಾವಿರ ಆನೆಗಳು ಹೊತ್ತ ಸಂಪತ್ತು ಮುಸಲ್ಮಾನರ ವಶವಾಯಿತು. ಚಿದಂಬರ, ಶ್ರೀರಂಗಗಳು ಶತ್ರುದಾಳಿಗೆ ಸಿಕ್ಕಿ ನಾಶಹೊಂದಿದವು. ಅವು ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡು ಮುಸಲ್ಮಾನ ಅಧಿಪತಿಗಳಿಗೆ ಶರಣಾಗಿದ್ದವು.

ಈ ಒಂದು ಮುತ್ತಿಗೆಯಲ್ಲೇ, ಐದು ಸಾವಿರ ಕುದುರೆಗಳು, ಐನೂರು ಮಣದಷ್ಟು ಮುತ್ತು ರತ್ನದ ಒಡವೆಗಳು ಮಲ್ಲಿಕಾಫರನ ಪಾಲಾಗಿದ್ದವು. ಅವನು ತನ್ನನ್ನು ತಡೆಯುವವರಿಲ್ಲದೆ ರಾಮೇಶ್ವರದವರೆಗೂ ದಂಡೆತ್ತಿ ಹೋಗಿ ಕೈಗೆ

ಸಿಕ್ಕಿದುದನ್ನು ಸೂರೆ ಮಾಡಿ, ಹಿಂದೂ ದೇವಮಂದಿರಗಳನ್ನು ಪಾಳುಗೆಡವಿ, ಅಪವಿತ್ರಗೊಳಿಸಿ, ಸ್ತ್ರೀಯರನ್ನು ಅತ್ಯಾಚಾರಕ್ಕೆ ಬಲಿಕೊಟ್ಟು, ಬಲಾತ್ಕಾರದಿಂದ ಇಸ್ಲಾಂ ಧರ್ಮಕ್ಕೆ ಜನರನ್ನು ಸೇರಿಸಿ, ಮಹಾಮಲ್ಲನಾಗಿ, ಮಕುಟವರ್ಧನ ರನ್ನು ಮೆಟ್ಟಿಕೊಂಡು ದಿಲ್ಲಿಗೆ ಹಿಂತಿರುಗಿದ್ದನು.

ಯಾವುದು ನಡೆಯಬಾರದೆಂದು ಪದ್ಮನಾಭತೀರ್ಥರು ಆಶಿಸಿದ್ದರೋ ದೈವಸಂಕಲ್ಪವು, ಹಿಂದೂಗಳ ವಿರುದ್ಧ ಇದ್ದುದರಿಂದ, ಅದೇ ನಡೆದಿತ್ತು.

ಶ್ರೀ ಮಧ್ವಾಚಾರ್ಯರು ಹೇಳಿದ್ದ ಭವಿಷ್ಯವಾಣಿ ಸತ್ಯವಾಗಿತ್ತು.

# ಶ್ರೀ ಮಧ್ವಾಚಾರ್ಯರೊಡನೆ ಸಂದರ್ಶನ

ಪದ್ಮನಾಭತೀರ್ಥರ ಓರಂಗಲ್ಲಿನ ನೀರಿನ ಋಣ, ಕಾಕತೀಯವಂಶದವರ ಸ್ನೇಹ ಋಣಗಳಿಗೆ ಕೊನೆ ಬಂದಿತ್ತು. ಓರಂಗಲ್ಲನ್ನು ಯುದ್ಧದ ಸುಳಿಗೆ ತೊಡಗಿಸಿದವರು ರಾಜಗುರುಗಳಾಗಿದ್ದ ಪದ್ಮನಾಭತೀರ್ಥರೆಂದು ಕೆಲವು ಆಸ್ಥಾನಿಕರು ಅವರ ಮೇಲೆ ಇಲ್ಲದ ಆರೋಪಗಳನ್ನು ಎತ್ತಿದರು. ಮಹಾರಾಣಿ ರುದ್ರಮದೇವಿ ಬದುಕಿರುವವರೆಗೆ ಯಾರ ಮಾತು ಆಕೆಯ ಮುಂದೆ ನಡೆಯು ತ್ತಿರಲಿಲ್ಲ. ಆಕೆಯು ಬಲು ಗಡಸುಗಾರ್ತಿ. ಚಾಣಾಕ್ಷಳಾದ ಹೆಣ್ಣುಮಗಳು. ಅವಳು ಗಣಪತಿದೇವನ ಮಗಳು. ಅವಳು ತಂದೆಯ ಮರಣಾನಂತರ ಕಾಕ ತೀಯ ಸಿಂಹಾಸನವನ್ನು ಏರಿದ ಪ್ರಥಮಮಹಿಳೆ. ಈಕೆಯ ಆಳ್ವಿಕೆಯಲ್ಲಿ ಜನತೆ ಸುಖ ನೆಮ್ಮದಿಗಳನ್ನು ಕಂಡರು. ರಾಜ್ಯವು ಶತ್ರುಗಳಿಂದ ಮುಕ್ತವಾಗಿತ್ತು.[1]

---

1) ಈ ಬಗ್ಗೆ ಮಾರ್ಕೋಪೋಲೋ ಎಂಬ ವಿದೇಶಿ ಪ್ರವಾಸಿಯು ಹೀಗೆ ಬರೆ ದಿದ್ದಾನೆ.

This was formerly under the rule of a King, and since his death, some 40 years past, it has been under his Queen, a lady of much discrition, who for the great love she bore him, would never marry another hasband, and I can assure you, that during all that space of 40 years she had administered her realm as well as ever her hus-

(ಮುಂದಿನ ಪುಟಕ್ಕೆ)

ಆದರೆ ಆಕೆ ತೀರಿಕೊಳ್ಳುತ್ತಲೂ ಆಸ್ಥಾನಿಕರು ಗರಿಗಟ್ಟಿಕೊಂಡಿದ್ದರು. ರುದ್ರಮದೇವಿಗೆ ದೇವ ಬ್ರಾಹ್ಮಣರಲ್ಲಿ ಅಪಾರವಾದ ಗೌರವವಿತ್ತು. ಅವಳು ಕುಮಾರ ಪ್ರತಾಪರುದ್ರದೇವನ ವಿದ್ಯಾಭ್ಯಾಸದ ಭಾರವನ್ನು ಪದ್ಮನಾಭ ತೀರ್ಥರಿಗೆ ಒಪ್ಪಿಸಿದ್ದಳು. ಕುಮಾರನು ಆಚಾರ್ಯರ ಮಾರ್ಗದರ್ಶನದಲ್ಲಿ ಸಮರ್ಥ ದೊರೆಯಾಗಿ ರೂಪುಗೊಂಡ ಮೇಲೆ ಅವನಿಗೆ ರಾಜ್ಯವನ್ನು ಒಪ್ಪಿಸಿ, ತಾನು ರಾಜಕೀಯ ಜೀವನದಿಂದ ನಿವೃತ್ತಿ ಹೊಂದಿದ್ದಳು. ಅವಳು ಮಲ್ಲಿಕಾಫರನ ದಂಡಯಾತ್ರೆಗೆ ಮುನ್ನ ಕೆಲವು ವರ್ಷಗಳ ಹಿಂದೆ ಮರಣಹೊಂದಿದ್ದಳು. ಈಗ ಪ್ರತಾಪರುದ್ರದೇವನು ನಿರಂಕುಶ ದೊರೆಯಾಗಿದ್ದನು.

ಅವನ ಆಸ್ಥಾನದಲ್ಲಿದ್ದ ಕೆಲವು ಶೈವಮತೀಯರು ವೈಷ್ಣವಾಚಾರ್ಯರಾದ ಪದ್ಮನಾಭತೀರ್ಥರ ಅಭ್ಯುದಯವನ್ನು ನೋಡಿ ಸಹಿಸದೆ ಅವರ ವಿರುದ್ಧ ದೊರೆಯ ಮನಸ್ಸನ್ನು ಕೆಡಿಸಲಾರಂಭಿಸಿದ್ದರು. ಅವರ ಮಾತುಗಳಿಗೆ ದೊರೆಯು ಕಿವಿಗೊಡುತ್ತಿರಲಿಲ್ಲ. ಈಗ ಅವನು ಯುದ್ಧದಲ್ಲಿ ಸೋತು ಅಪಮಾನ ದುಃಖಗಳನ್ನು ಅನುಭವಿಸುವಂತಾದಾಗ, ಇದೆಲ್ಲ ಪರಾಭವಕ್ಕೂ ತಾನು ಪದ್ಮನಾಭ ತೀರ್ಥರ ಮಾತುಗಳನ್ನು ನಂಬಿ ನಡೆದುದೇ ಕಾರಣವಾಯಿತೆಂದು ಅವರ ಬಗ್ಗೆ ಮನಸ್ಸನ್ನು ಕಹಿ ಮಾಡಿಕೊಂಡಿದ್ದ. ಆದರೆ ಅವನ ಪುತ್ರ ಕೃಷ್ಣದೇವನು ಮಾತ್ರ ಆಚಾರ್ಯರನ್ನು ನಿಷ್ಠೆಯಿಂದ ಸೇವಿಸುತ್ತಿದ್ದನು. ಆಸ್ಥಾನಿಕರು ಆಚಾರ್ಯರು ಸ್ವಾರ್ಥ ಸಾಧನೆಗಾಗಿ ಮಗನನ್ನು ತಂದೆಯ ವಿರುದ್ಧ ಎತ್ತಿಕಟ್ಟಲು ಹವಣಿಸುತ್ತಿದ್ದಾರೆಂದು ಆರೋಪಿಸಲಾರಂಭಿಸಿದರು. ಇದನ್ನು ಕಿವಿಯಾರೆ ಕೇಳಿದ ಮೇಲೆ ಇಂಥ ಅವಿವೇಕಿ ದೊರೆಯ ರಾಜ್ಯದಲ್ಲಿ ಇರುವುದು ಕ್ಷೇಮವಲ್ಲವೆಂದು ತಾವಾಗಿ

---

band did or bother ; and as she was a lover of Justice of equity and peace, she was more beloved by those of her Kingdom than ever was lady or lord of theirs' before.

ಇಲ್ಲಿ ಒಂದು ಪ್ರಮಾದವನ್ನು ಅವನು ಮಾಡಿದ್ದಾನೆ. ರುದ್ರಮದೇವಿಯನ್ನು ಗಣಪತಿ ದೇವನ ಪತ್ನಿ ಎಂದು ತಪ್ಪು ತಿಳಿದಿದ್ದಾನೆ. ಆದರೆ ಅವಳು ಅವನ ಹೆಂಡತಿಯಲ್ಲ, ಪುತ್ರಿ. ಅವಳ ಪತಿ ಮಹಾದೇವ. ಇವರ ಪುತ್ರನೇ ಇಮ್ಮಡಿ ಪ್ರತಾಪರುದ್ರದೇವ. ಇವನ ಕಾಲದಲ್ಲಿಯೇ ಮಲ್ಲಿಕಾಫರನು ಓರಂಗಲ್ಲಿನ ಮೇಲೆ ದಂಡೆತ್ತಿ ಬಂದು ಅದನ್ನು ಸೂರೆಮಾಡಿದುದು. —ಲೇಖಕ.

ತಮ್ಮ ಗುರುಗಳಿಂದ ಕರೆ ಬಂದಿದೆ ಎಂದು ನೆಪವೊಡ್ಡಿ ಓರಂಗಲ್ಲಿನಿಂದ ನಿರ್ಗಮಿಸಿದರು.

ಇದರಿಂದ ಸ್ವಾರ್ಥಿಪಿಸುನಿಗಳ ರೊಟ್ಟಿ ಜಾರಿ ತುಪ್ಪಕ್ಕೆ ಬಿದ್ದಂತಾಗಿ ಅವರು ಹರ್ಷಿಸಿದರೂ, ಕುಮಾರಕೃಷ್ಣನು ಮಾತ್ರ ತನ್ನ ದೇಹದಲ್ಲಿ ತೊಟ್ಟು ರಕ್ತವಿರುವವರೆಗೂ ತಾನು ತಾಯಿನಾಡಿನ ಬಂಧ ವಿಮೋಚನೆಗಾಗಿ, ಸ್ವಾತಂತ್ರ್ಯಕ್ಕಾಗಿ ಹೋರಾಡುವುದಾಗಿ ಅವನು ವಚನತೊಟ್ಟನು. ಅದರಂತೆ ನಡೆದುಕೊಂಡನು.1

ಪದ್ಮನಾಭತೀರ್ಥರು ಸೋಲು, ನಿರಾಶೆಗಳಿಂದ ಯಾವುದೇ ರೀತಿಯ ದುಃಖವನ್ನು ಅನುಭವಿಸದೆ, ತಮ್ಮ ಪಾತ್ರವನ್ನು ತಾವು ನಿಸ್ಪೃಹರಾಗಿ ನಿರ್ವಹಿಸಿದ ಕೃತಕೃತ್ಯಭಾವದಲ್ಲಿ ಅಲ್ಲಿಂದ ಹೊರಟವರು ದೇವಗಿರಿಗೆ ಬಂದರು.

ಅಲ್ಲಿನ ಆಸ್ಥಾನದಲ್ಲೂ ಬಹಳ ಬದಲಾವಣೆಯಾಗಿತ್ತು.

ರಾಮಚಂದ್ರದೇವನು ಮರಣಹೊಂದಿ ಅವನ ಮಗ ಸಿಂಘಣನು ದೊರೆಯಾಗಿದ್ದನು. ಅವನು ಗರಿಗಟ್ಟಿಕೊಳ್ಳದೆ ಮುಸಲ್ಮಾನರನ್ನು ಎದುರು ಹಾಕಿಕೊಳ್ಳಬಾರದೆಂದು ವಿಧೇಯನಂತೆ ನಟಿಸುತ್ತಿದ್ದನು. ಆದರೆ ಅಂತರಂಗದಲ್ಲಿ ದಿಲ್ಲಿ ಸುಲ್ತಾನರ ಮೇಲೆ ದ್ವೇಷ ಕಾರುತ್ತಿದ್ದನು.

ಇಂಥ ಸ್ಥಿತಿಯಲ್ಲಿ ಪದ್ಮನಾಭತೀರ್ಥರು ತಮ್ಮ ಮಾತಿಗೆ ಅಲ್ಲಿ ಬೆಲೆ ಬರುವ ಸಂಭವ ಕಡಿಮೆ ಎಂದು ಆಲೋಚಿಸಿ ಅಲ್ಲಿಂದ ಹೊರಡಲು ಯೋಚಿಸಿದರು.

ಇದನ್ನು ಅರಿತ ಸರ್ವೋತ್ತಮದೇವನು ಅವರನ್ನು ಸಮಾಧಾನಗೊಳಿಸಬೇಕಾಯಿತು.

---

1) Krishnadeva lead the Confederate Hindu armies against the Mohamedans in 1344 A. D. and expelled the whole of the Mohamedan garrissons from the Deccan for a time. In this expulsion of the Mohamedans, Harihara I of Vijayanagar seems to have taken a leading part.

—Never to be forgotten Empire
By B. Suryanarayan Rao.

ದೊರೆ ಸಿಂಘಣನು ರಹಸ್ಯವಾಗಿ ಪದ್ಮನಾಭತೀರ್ಥರನ್ನು ಭೇಟಿ ಮಾಡಿ, ತನ್ನ ಕಾರ್ಯಯೋಜನೆಯನ್ನು ಅವರ ಮುಂದೆ ತೋಡಿಕೊಂಡನು.

"ಆಚಾರ್ಯರೇ, ಈಗ ನಾವು ಮುಸಲ್ಮಾನರ ವಿರುದ್ಧ ಎದ್ದು ನಿಲ್ಲುವುದೂ ಕಠಿಣವಾಗಿದೆ. ಇನ್ನು ಹೋರಾಟದ ಮಾತು ದೂರವೇ ಸರಿ. ಆದರೂ, ನಮ್ಮ ತಂದೆಯು ಹಿಡಿದ ಸಂಧಾನದಮಾರ್ಗ ತುಳಿಯುವವನು ನಾನಲ್ಲ. ಸಿಂಘಣನೆಂಬ ಹೆಸರನ್ನು ಸಾರ್ಥಕಪಡಿಸಿಕೊಳ್ಳದೆ ಇರಲಾರೆ. ನಾನು ಈಗ ವಿಧೇಯತೆಯ ನಾಟಕವಾಡಿ, ಶಕ್ತಿಸಂಚಯನ ಮಾಡಿಕೊಳ್ಳಲು ನಿಶ್ಚಯಿಸಿದ್ದೇನೆ ಬರಿದಾಗಿರುವ ರಾಜಬೊಕ್ಕಸ, ಸೋತು ಎದೆಗೆಟ್ಟಿರುವ ಸೈನ್ಯ, ಸ್ವತಂತ್ರರಾಗಿರುವ ಅಧಿಕಾರಿಗಳು, ಇವರನ್ನು ನಂಬಿ, ನಾನು ಶತ್ರುಗಳ ಮೇಲೆ ಯುದ್ಧ ಘೋಷಿಸಿದರೆ ಸರ್ವನಾಶದ ಹಾದಿ ತುಳಿದಂತೆ. ಆದುದರಿಂದ ಶಕ್ತಿಯನ್ನು ರೂಢಿಸಿಕೊಂಡು ಹೋರಾಟದ ಕಣಕ್ಕೆ ಇಳಿಯಲು ಸಂಕಲ್ಪ ಮಾಡಿದ್ದೇನೆ. ನೀವು ನೀಡಿದ ಮಂತ್ರ, ಸ್ವೀಕರಿಸಿದ ದೀಕ್ಷೆಯನ್ನು ಸದಾ ನೆನೆಯುತ್ತಿರುತ್ತೇನೆ. ಸಮಯ ಸಾಧಿಸಿ, ನಾನು ದಿಲ್ಲೀಶ್ವರನ ವಿರುದ್ಧ ತಿರುಗಿ ಬೀಳುತ್ತೇನೆ. ನನ್ನ ಮಾತು ನಿಮ್ಮಾಣೆಗೂ ಸತ್ಯ" ಎಂದು ಘೋಷಿಸಿದನು.

ಸರ್ವೋತ್ತಮದೇವನು, ತಾನೂ ಬದುಕಿರುವವರೆಗೆ ಶತ್ರುಗಳಾದ ಮುಸಲ್ಮಾನರಿಗೆ ತಲೆಬಾಗುವುದಿಲ್ಲವೆಂದೂ, ತನ್ನ ಮರಣ ಎಂದಿದ್ದರೂ ರಣರಂಗದಲ್ಲಿ ಎಂದೂ ಪ್ರತಿಜ್ಞೆ ಮಾಡಿದನು.

ಈ ಮಾತುಗಳನ್ನು ಕೇಳಿದ ಮೇಲೆ ಪದ್ಮನಾಭತೀರ್ಥರಿಗೆ ಕಾರ್ಯ ಸಿದ್ಧಿಸಿದಷ್ಟು ಹರ್ಷವಾಯಿತು. ಅವರು ಸನ್ಯಾಸಿಗಳಾದರೂ, ವ್ಯವಹಾರಜ್ಞರಾದುದರಿಂದ ಸಂತೋಷದಿಂದಲೇ ದೇವಗಿರಿಯಿಂದ ಹೊರಬಿದ್ದರು.

ಅವರನ್ನು ಕಳುಹಿಸಿಕೊಡಲು ಸರ್ವೋತ್ತಮದೇವನೂ ಅವನ ನಿಷ್ಠಾವಂತ ದಳಪತಿಯಾಗಿದ್ದ ಮುಮ್ಮಡಿ ಸಿಂಗನೂ ಬಹಳ ದೂರ ಅನುಸರಿಸಿ ಬಂದರು. ಮಾತಿನ ಮಧ್ಯೆ ಮುಮ್ಮಡಿ ಸಿಂಗನು ಒಂದು ವಿಚಿತ್ರ ಕೋರಿಕೆಯನ್ನು ಮುಂದಿಟ್ಟನು.

"ಸ್ವಾಮಿ, ತಾವು ನಿಜಕ್ಕೂ ಮಹಾಮಹಿಮರು. ಭಗವಂತನ ಅನುಗ್ರಹಕ್ಕೆ ಮುಖ್ಯಪಾತ್ರರಾದವರು ಇಂದಲ್ಲ ನಾಳೆ ಮುಸಲ್ಮಾನರ ವಿರುದ್ಧ ಹೋರಾಡುವ ನನಗೆ ಒಂದು ಸ್ವತಂತ್ರ ಹಿಂದೂ ರಾಜ್ಯವನ್ನು ಸ್ಥಾಪಿಸಬೇಕೆಂಬ ಇಚ್ಛೆ ಇದೆ. ಆ ನನ್ನ ಆಸೆ ಈಡೇರಲೆಂದು ಆಶೀರ್ವಾದ ಮಾಡಬೇಕು."

ಪದ್ಮನಾಭತೀರ್ಥರು ಅವನ ವಿಚಿತ್ರ ಆಸೆಯನ್ನು ಕೇಳಿ ಮುಗುಳ್ನಕ್ಕು, ತಥಾಸ್ತು, ಎಂದು ಹೇಳಿದ್ದಲ್ಲದೆ "ನೀನು ರಾಜ್ಯ ಕಟ್ಟಿದಾಗ ನಾವೇ ಬಂದು ನಿನ್ನನ್ನು ಹರಸುತ್ತೇವೆ" ಎಂದು ಹೇಳಿ ಅವರನ್ನು ಬೀಳ್ಕೊಟ್ಟರು.

ಅನಂತರ ಪದ್ಮನಾಭತೀರ್ಥರು ನೇರ ಮಂಗಳವೇಡೆಗೆ ಬಂದರು.

ಅವರು ಈ ಬಾರಿ ಮತ್ತೊಂದು ಮಹತ್ವದ ಕಾರ್ಯಕ್ಕೆ ಬಂದಿದ್ದರು. ಶ್ರೀ ಮಧ್ವಾಚಾರ್ಯರು ಗೋವಿಂದಭಟ್ಟರ ಬಗ್ಗೆ ಹೇಳಿದ್ದ ಮಾತು ಅವರ ಸ್ಮೃತಿಪಟಲದಲ್ಲಿ ಇತ್ತು. ಅವನೂ ಆಚಾರ್ಯರ ದರ್ಶನಕ್ಕಾಗಿ ನಾಲ್ಕೈದು ವರ್ಷಗಳಿಂದ ಹಂಬಲಿಸುತ್ತಿದ್ದ. ಅವನದು ಸುಜೀವವೆಂದು ಅರಿತು, ಆಚಾರ್ಯರ ಬಳಿಗೆ ಅವನನ್ನು ಕರೆದೊಯ್ಯಲು ಈ ಭಾರಿ ಮಂಗಳವೇಡೆಗೆ ಬಂದಿದ್ದರು.

ಧುಂಡಿರಾಜನಿಗೆ ಪದ್ಮನಾಭತೀರ್ಥರನ್ನು ಕಾಣುತ್ತಲೇ ಸಂತೋಷ ವಿಷಾದಗಳು ಉಂಟಾದುವು. ಅವರಿಗೆ ಹೇಗೆ ಮುಖ ತೋರಿಸುವುದೆಂದು ತಿಳಿಯದೆ ನಾಚಿಕೆಯಾಯಿತು.

ಈ ಬಾರಿ ನಡೆಸಿದ ಸ್ವಾತಂತ್ರ್ಯ ಹೋರಾಟದಲ್ಲಿ ತಮಗೆ ಸೋಲಾದುದಕ್ಕಾಗಿ ಅವನಿಗೆ ವಿಷಾದ. ಅಂಥ ದೈವೀಪುರುಷರ ಮಾರ್ಗದರ್ಶನ ದೊರೆತರೂ ಜನತೆ ಎಚ್ಚೆತ್ತುಕೊಳ್ಳಲಿಲ್ಲವೆಂಬ ದುಃಖ. ಅವನನ್ನು ಆಚಾರ್ಯರೇ ಸಮಾಧಾನಪಡಿಸಬೇಕಾಯಿತು.

"ಅಯ್ಯಾ ಧುಂಡಿರಾಜ, ಯಾವುದಕ್ಕೂ ಕಾಲ ಕೂಡಿಬರಬೇಕು. ಒಂದು ಹಣ್ಣು ಪಕ್ವವಾಗಲೂ, ಅದು ಕಾಯಬೇಕಲ್ಲವೇ. ನಾವು ಬಿತ್ತಿರುವ ಬೀಜ, ಇಂದಲ್ಲ ನಾಳೆ ಹೆಮ್ಮರವಾಗುವುದು ದಿಟ. ಜನತೆಯಲ್ಲಿ ಮುಸಲ್ಮಾನರ ವಿರುದ್ಧ ಎಚ್ಚರ ಈಗ ಉಂಟಾಗಲಾರಂಭಿಸಿದೆ. ದೇವಗಿರಿಯಲ್ಲಿ ಸಿಂಘಣನಂಥ ಶಿಷ್ಯ ಸ್ವಾತಂತ್ರ್ಯಪ್ರೇಮಿ, ಅಧಿಕಾರಕ್ಕೆ ಬಂದಿದ್ದಾನೆ. ಓರಂಗಲ್ಲಿನಲ್ಲೂ ಅಷ್ಟೇ. ಕೃಷ್ಣನಿಗೆ ನಾವು ಸ್ವಾತಂತ್ರ್ಯದೀಕ್ಷೆ ಕೊಟ್ಟಿದ್ದೇವೆ. ಇವರಲ್ಲಿ ಯಾರೊಬ್ಬರು ನಾಯಕರಾಗಿ ನಿಂತರೂ ದೇಶದ ಜನತೆಯನ್ನು ಈ ಸ್ವಾತಂತ್ರ್ಯ ಹೋರಾಟಕ್ಕೆ ಸಜ್ಜುಗೊಳಿಸಬಲ್ಲರು. ನಮ್ಮ ಜೀವಿತ ಕಾಲದಲ್ಲಿ ನಾಡಿನ ಪುನರುದಯವನ್ನು, ಮಂಗಳ ಪ್ರಭಾತವನ್ನು, ನಾವು ಕಾಣಬಹುದು, ಕಾಣದಿರಬಹುದು—ಆದರೆ ಸ್ವಾತಂತ್ರ್ಯಕ್ಕಾಗಿ ನಡೆಸಿದ ಹೋರಾಟ, ನಮ್ಮೆಲ್ಲರ ಬಲಿದಾನ ವ್ಯರ್ಥವಾಗುವುದಿಲ್ಲ ; ಈ ಮಾತು ಖಂಡಿತ. ಈ ಜನತಾ ಹೋರಾಟಕ್ಕೆ ಶ್ರೀ ಮಧ್ವಾಚಾರ್ಯರ

ಆಶೀರ್ವಾದವಿದೆ, ಎಂದ ಮೇಲೆ, ಇಂದಲ್ಲ ನಾಳೆ ಇದು ಸಫಲವಾಗಲೇಬೇಕು" ಎಂದು ಹೇಳಿದರು.

"ತಾವೇಕೆ ಸ್ವಾತಂತ್ರ್ಯದ ಹಂಬಲಿಂದ ದೇಶ ದೇಶ ಅಲೆಯಬೇಕು. ಇಲ್ಲೇ ನಮ್ಮನ್ನು ಅನುಗ್ರಹಿಸುತ್ತ ನಿಲ್ಲಬಹುದಲ್ಲ"—ಎಂದ ಧುಂಡಿರಾಜ.

"ನಾವು ಇನ್ನೂ ಮಾಡಬೇಕಾಗಿರುವ ಕಾರ್ಯ ಅಪಾರವಾಗಿದೆ. ಈ ಜೀವಕ್ಕೆ ಹೋರಾಟದ ಬದುಕು ಸಾಕೆನಿಸಿ ವಿಶ್ರಾಂತಿ ಬಯಸಿದಾಗ, ಇಲ್ಲಿಗೇ ಬರುತ್ತೇವೆ. ಈಗ ನಾವು ಬಂದ ಕಾರ್ಯ ಇದು. ನಿಮ್ಮ ಸಹೋದರರು ಶ್ರೀ ಮಧ್ವಾಚಾರ್ಯರ ದರ್ಶನಕ್ಕಾಗಿ ಹಂಬಲಿಸುತ್ತಿದ್ದರು. ಅವರನ್ನು ಶ್ರೀ ಮಧ್ವಾಚಾರ್ಯರ ಭೇಟಿಗೆ ಕರೆದೊಯ್ಯಲು ಬಂದಿದ್ದೇವೆ."

"ಅವನು ಒಂದುವೇಳೆ ಸನ್ಯಾಸ ಸ್ವೀಕರಿಸಿದರೆ ಏನು ಗತಿ ಎಂಬ ಹೆದರಿಕೆ ನನ್ನದು."

"ಅವರು ಸನ್ಯಾಸ ಸ್ವೀಕರಿಸಿದರೆ ನಿನಗೆ ವ್ಯಥೆಯೇ ?"

"ವ್ಯಥೆಯ ಮಾತಲ್ಲ. ನಮ್ಮ ವಂಶದಲ್ಲಿ ಯಾರೂ ಇದುವರೆಗೆ ಸನ್ಯಾಸ ಸ್ವೀಕರಿಸಿದವರಿಲ್ಲ. ನಾವು ಬ್ರಾಹ್ಮಣರಾದರೂ ಕ್ಷತ್ರಿಯವೃತ್ತಿ ಹಿಡಿದಿದ್ದೇವೆ. ಪ್ರಜಾಪರಿಪಾಲನೆ—ನಮ್ಮ ಧರ್ಮ."

ಈ ಮಾತು ಕೇಳಿ ಪದ್ಮನಾಭತೀರ್ಥರು ಅರ್ಥಗರ್ಭಿತವಾಗಿ ನಕ್ಕರು.

"ಏಕೆ ನಗುತ್ತೀರೀ ?"

"ನಾಳೆ ನಿನ್ನ ಹೊಟ್ಟೆಯಲ್ಲಿ ಒಬ್ಬ ಮಗನು ಹುಟ್ಟಿ ಸನ್ಯಾಸ ಸ್ವೀಕರಿಸಿದರೆ ನೀನೇನು ಮಾಡುತ್ತಿ ?"

"ತಡೆಯಲು ನಾನಾರು ? ಎಲ್ಲ ಆ ಜೀವದ ಸಂಸ್ಕಾರವಿಶೇಷ, ಪ್ರಾರಬ್ಧ ಕರ್ಮದಲ್ಲಿದ್ದಂತೆ ನಡೆಯುತ್ತದೆ."

"ಗೋವಿಂದಭಟ್ಟರ ವಿಷಯವೂ ಹಾಗೆಯೇ. ಅದೊಂದು ಒಳ್ಳೆಯ ಜೀವ. ಲೋಕೋಪಕಾರಕ್ಕಾಗಿ, ಸಚ್ಛಾಸ್ತ್ರಪ್ರಚಾರಕ್ಕಾಗಿ, ಹುಟ್ಟಿರುವ ಜೀವ. ಹರಿವಾಯುಗಳ ವಿಶೇಷ ಅನುಗ್ರಹಕ್ಕೆ ಪಾತ್ರವಾಗಿರುವ ಸಜ್ಜೀವ. ಅವರು ಸನ್ಯಾಸ ಸ್ವೀಕರಿಸಬೇಕೆಂಬುದು ಶ್ರೀಹರಿಯ ಸಂಕಲ್ಪ. ಇದನ್ನು ನಾವಾರೂ ತಪ್ಪಿಸಲಾರೆವು. ಒಂದು ವೇಳೆ ಹಾಗಾದರೆ ಅದಕ್ಕಾಗಿ ನೀನು ದುಃಖಿಸುವ ಕಾರಣವಿಲ್ಲ. ಅವರಿಂದ ಲೋಕೋಪಕಾರವಾಗುತ್ತದೆ. ನಿನ್ನ ವಂಶದ ಏಳು ತಲೆಮಾರಿನ

ಜನ ಮೋಕ್ಷವನ್ನು ಹೊಂದುತ್ತಾರೆ. ನೀನು ಸಂತೋಷದಿಂದ ಅದಕ್ಕೆ ಅನುಮತಿ ಕೊಡು."

"ಭಗವದಿಚ್ಛೆಯಲ್ಲಿ ಇದ್ದಂತೆ ನಡೆಯಲಿ" ಎಂದು ಹೇಳಿ ತನ್ನ ಸಹೋದರನನ್ನು ಪದ್ಮನಾಭತೀರ್ಥರ ಜೊತೆಯಲ್ಲಿ ಉಡುಪಿಗೆ ಕಳುಹಿಸಲು ಸಮ್ಮತಿಸಿದನು.

ಗೋವಿಂದಭಟ್ಟನು ಪದ್ಮನಾಭತೀರ್ಥರೊಡನೆ ಪ್ರಯಾಣ ಮಾಡಿ ಶ್ರೀ ಮಧ್ವಾಚಾರ್ಯರ ವಾಸಸ್ಥಳವಾದ ಉಡುಪಿ ಕ್ಷೇತ್ರಕ್ಕೆ ಬಂದನು.

ಆ ದಿನ ಸೂರ್ಯಗ್ರಹಣ. ಕಣ್ವತೀರ್ಥ ಎಂಬಲ್ಲಿಗೆ ಆಚಾರ್ಯರು ಶಿಷ್ಯರನ್ನು ಕರೆದುಕೊಂಡು ಸಮುದ್ರ ಸ್ನಾನಕ್ಕೆ ಹೋಗಿದ್ದರು. ಈ ವಾರ್ತೆಯನ್ನು ಕೇಳಿ ಅವರಿಬ್ಬರೂ ಆಚಾರ್ಯರನ್ನು ಕೂಡಿಕೊಳ್ಳಲು ಅಲ್ಲಿಗೇ ಹೋದರು.

ಅಲ್ಲಿಗೆ ಬಂದಾಗ ಶ್ರೀ ಮಧ್ವಾಚಾರ್ಯರು ಅವರಿಬ್ಬರನ್ನು ಸಂತೋಷದಿಂದ ಸ್ವಾಗತಿಸಿದರು. ಇತರ ಪರಿವಾರದವರಿಗೆ ಸಂಭ್ರಮ. ಅವರೆಲ್ಲರೂ ಆಚಾರ್ಯರೊಡನೆ ಸಮುದ್ರದ ತೀರಕ್ಕೆ ತೆರಳಿದರು. ಅಂದು ಅಮಾವಾಸ್ಯೆಯಾಗಿದ್ದುದರಿಂದ ಪಶ್ಚಿಮ ಸಮುದ್ರದಲ್ಲಿ ಹೆಬ್ಬಂಡೆಗಳ ಎತ್ತರದ ಅಲೆಗಳು ಬಂದು ದಡವನ್ನು ಅಪ್ಪಳಿಸುತ್ತಿದ್ದವು. ಆಚಾರ್ಯರೇನೋ ಧೈರ್ಯವಾಗಿ ಸೂರ್ಯಗ್ರಹಣ ಪರ್ವಕಾಲದಲ್ಲಿ ಸ್ನಾನಕ್ಕೆಂದು ಸಮುದ್ರಕ್ಕೆ ಇಳಿದರು. ಭೋರ್ಗರೆಯುವ ಅಲೆಗಳು. ಚಂಡಮಾರುತಗಳಿಗೆ ಸಿಕ್ಕಿ ಕುದಿಯುವ ಸಮುದ್ರ. ಬಿಳಿ ನೊರೆಗಳು ಮೇಘಗಳಂತೆ ಕಾಣುತ್ತಿದ್ದವು. ಸುಳಿಗಳಿಂದ ಕೂಡಿ ಸುಯ್ಗುಡುವ ಈ ಸಮುದ್ರದಲ್ಲಿ ಅವರು ನಿರ್ಭಯರಾಗಿ ಇಳಿದಿದ್ದರು. ಆಚಾರ್ಯರ ಈ ಸಾಹಸವನ್ನು ಕಂಡು ಶಿಷ್ಯರಿಗೆ ಗಾಬರಿ ಹೆದರಿಕೆಗಳಾದವು. ಆಚಾರ್ಯರು ಸಮುದ್ರದಲ್ಲಿ ಇದ್ದುಕೊಂಡೇ ಶಿಷ್ಯರನ್ನು ಸ್ನಾನಕ್ಕೆ ಕೈ ಬೀಸಿ ಕರೆದರು. ಯಾರೊಬ್ಬರಿಗೂ ಧೈರ್ಯ ಬರಲಿಲ್ಲ. ಸ್ನಾನಕ್ಕೆ ಹೋದರೆ ಮುಳುಗಿ ಸಾಯುವುದು ನಿಶ್ಚಯವೆಂದು ಎಲ್ಲರೂ ಹೆದರಿ ಪರಸ್ಪರ ಮುಖ ನೋಡಿಕೊಳ್ಳುತ್ತಿದ್ದರು. ಈ ಸಮಯದಲ್ಲಿ ಪದ್ಮನಾಭತೀರ್ಥರೂ, ನರಹರಿತೀರ್ಥರೂ, ಮಾಧವತೀರ್ಥರೂ ಅಲ್ಲಿಗೆ ಬಂದಿದ್ದರು. ಅವರೆಲ್ಲರೂ ಆಚಾರ್ಯರನ್ನು ಪ್ರಾರ್ಥಿಸಿದರು. ದಡದಲ್ಲಿರಲು ಮನವಿಲ್ಲ, ಸಮುದ್ರಕ್ಕಿಳಿಯಲು ಧೈರ್ಯವಿಲ್ಲ. ಅಷ್ಟರಲ್ಲಿ ಗೋವಿಂದಭಟ್ಟನಿಗೆ ಅದೇನೆನಿಸಿತೋ, ನೇರ ಹೋಗಿ ಉಟ್ಟ ಬಟ್ಟೆಯಲ್ಲೇ ಸಮುದ್ರಕ್ಕೆ ಧುಮುಕಿದನು.

ಒಂದು ಕ್ಷಣ ಏನಾಯಿತೆಂದು ಯಾರಿಗೂ ತಿಳಿಯದು. ಅಲೆಗಳು ಆನೆಯ

ಗಾತ್ರವೆದ್ದು ಅವನನ್ನು ತಮ್ಮ ಗರ್ಭಕ್ಕೆ ಎಳೆದುಕೊಂಡವು. ಮರುಕ್ಷಣದಲ್ಲಿ ಶ್ರೀ ಮಧ್ವಾಚಾರ್ಯರು ಇದ್ದಲ್ಲಿಯೇ ಕೈ ಬೀಸಿ ಅಭಯ ನೀಡಿದರು. ಅವರ ಆಜ್ಞೆಗೆ ತಲೆ ಬಾಗಿದ ಸಮುದ್ರರಾಜನು ಉಬ್ಬರ ಏರಿಳಿತಗಳ ಪರ್ವದಿನದಲ್ಲೂ ಶಾಂತನಾದನು. ಅದು ಪ್ರಶಾಂತಗೊಂಡದ್ದರಿಂದ ಕೊಳದಂತೆ ಅಲೆಗಳಿಲ್ಲದ ಸಮುದ್ರದ ನೀರಿನಲ್ಲಿ ಗೋವಿಂದಭಟ್ಟನು ಶ್ರೀ ಮಧ್ವಾಚಾರ್ಯರ ಪಾದಕಮಲಗಳನ್ನು ಹಿಡಿದಿದ್ದುದು ಎಲ್ಲರಿಗೂ ಗೋಚರಿಸಿತು. ಅವನನ್ನು ಅನುಗ್ರಹ ದೃಷ್ಟಿಯಿಂದ ನೋಡಿ, ಆಚಾರ್ಯರು ತಮ್ಮ ಕೈಯಿಂದ ಮೇಲೆತ್ತಿ ಅವನ ತಲೆಯನ್ನು ನೇವರಿಸಿದರು. ಆ ಕ್ಷಣದಲ್ಲಿ ಗೋವಿಂದಭಟ್ಟನ ದೇಹದಲ್ಲಿ ಮಿಂಚಿನ ಹೊಳೆ ಹರಿದಂತೆ ಆಯಿತು. ನೀರಿನಲ್ಲಿದ್ದೂ ಅವನು ಬೆವರಿದನು. ಆ ಕ್ಷಣಕ್ಕೆ ಯಾವುದೋ ಆನಂದ ಅವನ ಮೈಯಲ್ಲಿ ತುಂಬಿಕೊಂಡಂತೆ ಭಾಸವಾಯಿತು.

ಶ್ರೀ ಮಧ್ವಾಚಾರ್ಯರ ಸ್ಪರ್ಶಮಾತ್ರದಿಂದಲೇ ಅವನಿಗೆ ಅಪರೋಕ್ಷ ಜ್ಞಾನವಾಗಿತ್ತು. ತಾನು ಯಾರು, ಲೋಕಕ್ಕೆ ಬಂದ ಕಾರ್ಯವೇನು. ತಾನು ಮಾಡಬೇಕಾಗಿರುವ ಕೆಲಸವೇನು—ಎಲ್ಲವೂ ಕಣ್ಣುಗಳ ಮುಂದೆ ಸುರುಳಿ ಬಿಚ್ಚಿಕೊಂಡಂತೆ ಭಾಸವಾಯಿತು. ಅವನು ಪುಳಕಿತನಾಗಿ ಮತ್ತೆ ಮತ್ತೆ ಶ್ರೀ ಮಧ್ವಾಚಾರ್ಯರ ಪಾದಗಳಿಗೆ ನಮಸ್ಕರಿಸುತ್ತಾ ಆವೇಶಭರಿತನಾಗಿ ದಡಕ್ಕೆ ಬಂದು ಯೋಗನಿದ್ರೆಯಲ್ಲಿ ಕುಳಿತಂತೆ ಕುಳಿತುಬಿಟ್ಟನು.

ಶ್ರೀ ಮಧ್ವಾಚಾರ್ಯರು ತಮ್ಮ ಕಣ್ಣೆದುರಿನಲ್ಲೇ ತೋರಿಸಿದ ಈ ಪವಾಡವನ್ನು ನೋಡಿ ಪದ್ಮನಾಭತೀರ್ಥರೇ ಆದಿಯಾಗಿ ಶಿಷ್ಯರೆಲ್ಲರೂ ಅಚ್ಚರಿಗೊಂಡರು. ಅವರು ಶ್ರೀ ಮಧ್ವಾಚಾರ್ಯರ ಗುಣಗಾನ ಮಾಡುತ್ತಾ ಪರ್ವಕಾಲದ ಸ್ನಾನಕ್ಕಾಗಿ ಸಮುದ್ರಕ್ಕೆ ಇಳಿದರು. ಈಗ ಸಮುದ್ರವು ಅವರ ಪಾಲಿಗೆ ಹುಡುಗರು ಆಡುವ ಕೊಳದಂತೆ ಆಗಿತ್ತು. ಮೊಳಕಾಲು ಮುಳುಗದ ನೀರಿನಲ್ಲಿ ಅವರಿಗೆ ಎಷ್ಟು ಬಾರಿ ಮುಳುಗೆದ್ದರೂ ತೃಪ್ತಿಯಿಲ್ಲ. ಕಡೆಗೆ ಸ್ನಾನಾಹ್ನಿಕಗಳನ್ನು ಮಾಡಿ, ಅವರೆಲ್ಲರೂ ಶ್ರೀ ಮಧ್ವಾಚಾರ್ಯರೊಡನೆ ಕಣ್ವತೀರ್ಥಕ್ಕೆ ಹಿಂದಿರುಗಿದರು.

ಅಲ್ಲಿ ಪದ್ಮನಾಭತೀರ್ಥರು ಲೌಕಿಕ ರೀತಿಯಲ್ಲಿ ಗೋವಿಂದಭಟ್ಟನನ್ನು ಶ್ರೀ ಮಧ್ವಾಚಾರ್ಯರಿಗೆ ಪರಿಚಯ ಮಾಡಿಸಿಕೊಟ್ಟರು.

"ಇವರು ಗೋವಿಂದಭಟ್ಟರು — ಭಾರದ್ವಾಜಗೋತ್ರೋದ್ಭವರಾದ ಪಾಷ್ಟಿಕ ಮನೆತನದ ಚಿನ್ನಭಂಡಾರ ವಂಶದ ಕೇಶವಭಟ್ಟರ ಮಕ್ಕಳು."

ಗೋವಿಂದಭಟ್ಟನು ವೈದಿಕ ಪದ್ಧತಿಯಂತೆ ತನ್ನ ಪ್ರವರ ಹೇಳಿಕೊಂಡು ಕಿವಿಗಳನ್ನು ಹಿಡಿದುಕೊಂಡು ಶ್ರೀ ಮಧ್ವಾಚಾರ್ಯರಿಗೆ ನಮಸ್ಕರಿಸಿದನು.

"ನಿಮ್ಮನ್ನು ನಾವು ಬಲ್ಲೆವು. ನಾವು ಜನ್ಮವೆತ್ತಿದಾಗಲೆಲ್ಲಾ ನೀವೂ ಜನ್ಮವೆತ್ತಿ ನಾವು ಆರಂಭಿಸಿದ ಧರ್ಮಪ್ರತಿಷ್ಠಾಪನಕಾರ್ಯದಲ್ಲಿ ನೆರವಾಗಿದ್ದೀರಿ. ಈ ಬಾರಿಯೂ ಅದೇ ಕಾರ್ಯಕ್ಕಾಗಿ ಅವತರಿಸಿದ್ದೀರಿ"—ಎಂದು ಮುಗುಳ್ನಗೆ ನಕ್ಕರು.

"ಕೃತಾರ್ಥನಾದೆ ಸ್ವಾಮಿ."

"ನೀವು ಸನ್ಯಾಸಾಶ್ರಮವನ್ನು ಸ್ವೀಕರಿಸುವುದಕ್ಕೆ ಇಂದೇ ಶ್ರೇಷ್ಠವಾದ ಪರ್ವದಿನ. ಅದಕ್ಕೆ ಸಿದ್ಧರಾಗಿ"—ಎಂದರು ಶ್ರೀ ಮಧ್ವಾಚಾರ್ಯರು.

ಅದರಂತೆ ಪದ್ಮನಾಭತೀರ್ಥರು ಗೋವಿಂದಭಟ್ಟನ ಸನ್ಯಾಸಾಶ್ರಮ ಸ್ವೀಕಾರಕ್ಕೆ ಬೇಕಾದ ಸಿದ್ಧತೆ ಮಾಡಿದರು. ಆ ದಿನ ಶುಭ ಮುಹೂರ್ತದಲ್ಲಿ ಗೋವಿಂದಭಟ್ಟರಿಗೆ ಶ್ರೀ ಮಧ್ವಾಚಾರ್ಯರು ಯತಿಪ್ರಣವಕಲ್ಪದಲ್ಲಿ ಹೇಳಿರುವಂತೆ ವಿಧ್ಯುಕ್ತವಾಗಿ ಸನ್ಯಾಸಾಶ್ರಮವಿತ್ತು ಪ್ರಣವಮಂತ್ರೋಪದೇಶ ಮಾಡಿ ಅಕ್ಷೋಭ್ಯ ತೀರ್ಥರೆಂಬ ಅನ್ವರ್ಥ ಯತಿನಾಮವನ್ನು ಕರುಣಿಸಿದರು.

ಈ ಅಕ್ಷೋಭ್ಯತೀರ್ಥರೆಂಬ ವಿಚಿತ್ರ ಹೆಸರನ್ನು ಕೇಳಿ ಶಿಷ್ಯರೆಲ್ಲಾ ಆಶ್ಚರ್ಯ ಪಟ್ಟರು. ಶ್ರೀ ಮಧ್ವಾಚಾರ್ಯರು ಮುಗುಳು ನಗುತ್ತಾ,

"ಈ ದಿನ ಪ್ರಕ್ಷುಬ್ಧಗೊಂಡ ಸಮುದ್ರದಲ್ಲಿ ನಮ್ಮ ಅಪ್ಪಣೆಯಂತೆ, ನೀವೆಲ್ಲರೂ ನೀರಿಗೆ ಇಳಿಯಲು ಹಿಂದು ಮುಂದೆ ನೋಡುತ್ತಾ ನಿಂತ ಸಮಯದಲ್ಲಿ, ಇವರು ಮಾತ್ರ ಅಕ್ಷುಬ್ಧರಾಗಿ ನೀರಿಗೆ ಇಳಿದು ನನ್ನ ಆಜ್ಞೆ ಪಾಲಿಸಿದರು. ಇವರ ಸ್ಪರ್ಶದಿಂದ ಸಮುದ್ರವು ಅಕ್ಷೋಭ್ಯತೀರ್ಥವಾಯಿತು. ಕಾಮಕ್ರೋಧಾದಿಗಳಿಂದ ಅಕ್ಷುಬ್ಧರಾಗಿರುವ ಇವರು ಇಂದಿನಿಂದ ಆ ಮಾತಿನ ಸಾಕಾರಮೂರ್ತಿಯಾಗಿ ನಿಂತು ಶ್ರೀ ಹರಿಯ ಸೇವೆ ಮಾಡಬೇಕೆಂಬುದೇ ನಮ್ಮ ಅಭಿಲಾಷೆ. ಇವರಿಂದ ಮುಂದೆ ಲೋಕೋತ್ತರವಾದ ಘಟನೆಗಳು ನಡೆಯುತ್ತವೆ. ಇವರ ಸಾಕ್ಷಾತ್ ಶಿಷ್ಯರಿಂದ ನಾವು ಆರಂಭಿಸಿರುವ ವಾಙ್ಮಯ ಸೇವೆಗೆ ಮಹತ್ತಮವಾದ ಕೊಡುಗೆ ಸಲ್ಲುತ್ತದೆ" ಎಂದು ಹೇಳಿದರು.

ಅನುಕ್ರಮವಾಗಿ, ಶ್ರೀ ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾದ ಶ್ರೀ ಪದ್ಮನಾಭತೀರ್ಥರೂ, ನರಹರಿತೀರ್ಥರೂ, ಮಾಧವತೀರ್ಥರೂ, ಅಕ್ಷೋಭ್ಯ

ತೀರ್ಥರನ್ನು ಆಲಿಂಗಿಸಿ ಅಭಿನಂದಿಸಿದರು.

"ನಮ್ಮ ಅವತಾರದ ಕಾರ್ಯ ಇನ್ನೇನು ಮುಗಿಯುತ್ತ ಬಂದಿದೆ. ನಾವು ಸದ್ಯದಲ್ಲಿಯೇ ವಿಶಾಲಬದರಿಗೆ ಶ್ರೀ ವೇದವ್ಯಾಸದೇವರ ಬಳಿಗೆ ಹಿಂತಿರುಗಲು ನಿಶ್ಚಯಿಸಿದ್ದೇವೆ. ನಮ್ಮ ನಂತರ ಈ ಸರ್ವಜ್ಞಪೀಠವನ್ನು ನೀವೂ, ನಿಮ್ಮ ನಂತರ ನರಹರಿತೀರ್ಥರೂ ಅವರ ನಂತರ ಮಾಧವತೀರ್ಥರೂ ಅಲಂಕರಿಸ ಬೇಕೆಂದು ನಮ್ಮ ಅಪೇಕ್ಷೆ. ಅವರ ನಂತರ ಸರ್ವಜ್ಞಸಿಂಹಾಸನವನ್ನಲಂಕರಿಸುವ ಕೊನೆಯ ಸಾಕ್ಷಾತ್ ಶಿಷ್ಯರೇ ಈ ಅಕ್ಷೋಭ್ಯತೀರ್ಥರು" ಎಂದು ಶ್ರೀ ಮಧ್ವಾ ಚಾರ್ಯರು, ಏಕಾಂತದಲ್ಲಿ ಶ್ರೀ ಪದ್ಮನಾಭತೀರ್ಥರನ್ನು ಉದ್ದೇಶಿಸಿ ಹೇಳಿದರು.

ಅನಂತರ, ನಮಸ್ಕರಿಸಿದ ಅವರನ್ನು ಆಶೀರ್ವದಿಸಿ, ತಮ್ಮ ಕಾರ್ಯ ನೆರವೇರಿದ ಕೃತಕೃತ್ಯಭಾವದಲ್ಲಿ ಕರುಣೆಯಿಂದ ನೋಡಿ, ಬೀಳ್ಕೊಟ್ಟರು.

ತಮ್ಮ ಅವತಾರ ಕಾರ್ಯ ಮುಗಿಸುವ ಮುನ್ನ, ಮುಂದಿನ ಆರು ವರ್ಷ ಗಳನ್ನು ಶ್ರೀ ಮಧ್ವಾಚಾರ್ಯರು ಉಡುಪಿಯಲ್ಲೇ ನಿಂತು ತಮ್ಮ ನಾಲ್ವರು ಸಾಕ್ಷಾತ್ ಶಿಷ್ಯರಿಗೂ ಇತರ ಗೃಹಸ್ಥ ಶಿಷ್ಯರಿಗೂ ಬ್ರಹ್ಮಸೂತ್ರಾದಿ ಪ್ರಸ್ಥಾನ ತ್ರಯದ ತಮ್ಮ ಸರ್ವಮೂಲ ಗ್ರಂಥಗಳನ್ನು ಕುರಿತು ಪಾಠ ಹೇಳಿದರು. ದ್ವೈತ ಸಿದ್ಧಾಂತದಲ್ಲಿ ನಾಲ್ಕು ಜನರನ್ನೂ ದಿಗ್ಗಜಗಳನ್ನಾಗಿ ಮಾಡಿದರು. ದ್ವೈತಧರ್ಮ ಪ್ರಚಾರಕ್ಕೆ ಅವರನ್ನು ಅಣಿಗೊಳಿಸಿದರು.

ಈ ಕಾರ್ಯ ಮುಗಿಯಿತೆಂದು ತಿಳಿಯುತ್ತಲೇ, ಕಡೆಯ ಬಾರಿಗೆ, ಅವರು ಅನಂತಾಸನ ದೇವಸ್ಥಾನದಲ್ಲಿ ಬಲಮೂಲೆಯಲ್ಲಿ ಐತರೇಯೋಪನಿಷದ್ಭಾಷ್ಯ ವನ್ನು ಶಿಷ್ಯರಿಗೆ ಬೋಧಿಸಲು ಪ್ರಾರಂಭಿಸಿದರು.

## ನೂತನ ರಾಜ್ಯಸ್ಥಾಪನೆಗೆ ನಾಂದಿ

ಶ್ರೀ ಮಧ್ವಾಚಾರ್ಯರು ಹೇಳಿದ್ದಂತೆ ಅವರು ಉಡುಪಿಯ ಅನಂತಾಸನ ಸ್ವಾಮಿಯ ಸನ್ನಿಧಿಯಲ್ಲಿ ಐತರೇಯೋಪನಿಷದ್ಭಾಷ್ಯವನ್ನು ಶಿಷ್ಯರಿಗೆ ಉಪ ದೇಶಿಸುತ್ತಾ, ಮಾಘ ಶುದ್ಧ ನವಮಿ (ಕ್ರಿ. ಶ. 1317 ರಲ್ಲಿ) ಅದೃಶ್ಯರಾದರು. ಅದಕ್ಕೆ ಮುನ್ನ ಪದ್ಮನಾಭತೀರ್ಥರಿಗೆ ಸರ್ವಜ್ಞಪೀಠದಲ್ಲಿ ಪಟ್ಟಾಭಿಷೇಕದ ಮೂಲಕ ಕರಕಮಲಸಂಜಾತತ್ವವನ್ನು ಅನುಗ್ರಹಿಸಿ ತಮ್ಮ ಉತ್ತರಾಧಿಕಾರಿಗಳ ನ್ನಾಗಿ ನಿಯಮಿಸಿ ತಮ್ಮ ಅವತಾರಕಾರ್ಯವನ್ನು ಸಮಾಪ್ತಿಗೊಳಿಸಿದ್ದರು.

ಪದ್ಮನಾಭತೀರ್ಥರು, ಅದೃಶ್ಯರಾದ ತಮ್ಮ ಗುರುಗಳ ಪ್ರೀತ್ಯರ್ಥವಾಗಿ, ವಿಶೇಷೋತ್ಸವವನ್ನು, ಮಹಾವೈಭವದಿಂದ ಆಚರಿಸಿ, ನರಹರಿತೀರ್ಥರು ಮತ್ತು ಮಾಧವತೀರ್ಥರನ್ನು ಮಧ್ವಮತ ಪ್ರಚಾರ ಕಾರ್ಯಕ್ಕೆ ನಿಯಮಿಸಿ ಅಕ್ಷೋಭ್ಯ ತೀರ್ಥರೊಡನೆ ಪಟ್ಟವನ್ನು ಏರಿದರು.

ಈ ಅವಧಿಯಲ್ಲಿ ಅನೇಕ ಮಹತ್ವದ ಘಟನೆಗಳು ದಕ್ಷಿಣಾಪಥದ ರಾಜ್ಯ ಗಳಲ್ಲಿ ನಡೆದಿದ್ದವು.

ದೇವಗಿರಿಯ ದೊರೆ ಸಿಂಘಣನು ಧೈರ್ಯ ಮಾಡಿ ದಿಲ್ಲಿ ಪ್ರಭುತ್ವವನ್ನು ತಿರಸ್ಕರಿಸಿ, ತಂದೆಯ ಕಾಲದಿಂದ ಕೊಡುತ್ತಿದ್ದ ಕಪ್ಪಕಾಣಿಕೆಗಳನ್ನು ನಿಲ್ಲಿಸಿ ದನು. ಈ ಸಂಗತಿಯನ್ನು ಕೇಳಿ ಕುಪಿತನಾದ ಅಲ್ಲಾವುದ್ದೀನನು ಕ್ರಿ. ಶ. 1313 ರಲ್ಲಿ ದೇವಗಿರಿಯನ್ನು ನಾಶ ಮಾಡಲು ಮಲ್ಲಿಕಾಫರನೊಡನೆ ಸೈನ್ಯ ಕೊಟ್ಟು ಕಳುಹಿಸಿದನು. ಮಲ್ಲಿಕಾಫರನು ದೇವಗಿರಿಯ ಮೇಲೆ ಯುದ್ಧ ಮಾಡಿ ಸಿಂಘಣನನ್ನು ಕೊಂದನು. ಅವನಿಗೆ ನೆರವಾದ ಅವನ ಭಾವ ಹರಪಾಲದೇವನು ತಲೆ ತಪ್ಪಿಸಿಕೊಂಡನು. ಅವನನ್ನು ಪಶುವಿನಂತೆ ಬೇಟೆಯಾಡಿದರೂ ಅವನು ದೊರಕಲಿಲ್ಲ. ಈ ಭೀಕರ ಹೋರಾಟದಲ್ಲಿ ಢುಂಡಿರಾಜನ ಅಳಿಯನಾಗಿದ್ದ ಸರ್ವೋತ್ತಮದೇವನು ವೀರಾವೇಶದಿಂದ ರಣರಂಗದಲ್ಲಿ ಹೋರಾಡಿ ಮರಣ ವನ್ನು ಅಪ್ಪಿ ವೀರಸ್ವರ್ಗವನ್ನು ಹೊಂದಿದನು. ಅವರಿಬ್ಬರು ಸ್ವಾತಂತ್ರ್ಯ ಹೋರಾಟದಲ್ಲಿ ಹೀಗೆ ಆತ್ಮಾರ್ಪಣೆ ಮಾಡಿಕೊಂಡರು.

ಮುಂದೆ ಮಲ್ಲಿಕಾಫರನು ಓರಂಗಲ್ಲಿನ ಕಡೆ ತಿರುಗಿ ಅದನ್ನು ದಿಲ್ಲಿ ಸುಲ್ತಾನ ನಿಗೆ ತಲೆಬಾಗುವಂತೆ ಮಾಡಿದನು. ಹಿಂದಣ ಯುದ್ಧದಲ್ಲಿ ಸೋತು ಸೆರೆಸಿಕ್ಕಿದ ಪ್ರತಾಪರುದ್ರನನ್ನು ಮತ್ತೆ ಸೆರೆಯಲ್ಲಿಟ್ಟನು. ಅವನು ಸೆರೆಮನೆಯಲ್ಲೇ ಅಸು ನೀಗಿದನು. ಅವನ ಮಗ ಕೃಷ್ಣನು ಬೀಸುವ ದೊಣ್ಣೆ ತಪ್ಪಿಸಿಕೊಳ್ಳಲು ಶತ್ರು ಗಳಿಗೇ ವಿಧೇಯನಾಗಿರಲು ಒಪ್ಪಿ, ಒಪ್ಪಂದ ಮಾಡಿಕೊಂಡನು.

ಮುಂದೆ ಮಲ್ಲಿಕಾಫರನ ವಕ್ರದೃಷ್ಟಿಗೆ ಹೊಯ್ಸಳರೂ, ಪಾಂಡ್ಯರೂ ಬಿದ್ದರು. ಈ ರಾಜ್ಯಗಳನ್ನು ನಿಶ್ಶೇಷಗೊಳಿಸುವ ಕಾರ್ಯದಲ್ಲಿ ಅವನಿರುವಾಗ ಅಲ್ಲಾವುದ್ದೀನನು ತೀವ್ರರೋಗಕ್ಕೆ ತುತ್ತಾಗಿ ಹಾಸಿಗೆ ಹಿಡಿದಿರುವ ವಾರ್ತೆ ಕೇಳಿ ತನ್ನ ಕಾರ್ಯವನ್ನು ಅರ್ಧಕ್ಕೆ ನಿಲ್ಲಿಸಿ ದೆಹಲಿಗೆ ಹಿಂತಿರುಗಿದನು. ಅಲ್ಲಾವುದ್ದೀನನು ಕ್ರಿ. ಶ. 1316 ರಲ್ಲಿ ಜನವರಿ, 5 ರಂದು ವಿಸ್ತಾರವಾದ ರಾಜ್ಯವನ್ನು ಅನಾಯಕಗೊಳಿಸಿ, ಕಣ್ಮುಚ್ಚಿದನು. ಅವನು ಮಡಿದುದೇ ತಡ

ಚಿತ್ತೂರು, ದೇವಗಿರಿ, ಓರಂಗಲ್ಲುಗಳು ಮತ್ತೆ ಸ್ವಾತಂತ್ರ್ಯವನ್ನು ಘೋಷಿಸಿ ಕೊಂಡವು. ರಾಮದೇವರಾಯನ ಅಳಿಯ ಹರಪಾಲದೇವನು ರಾಜನಾಗಿ ಘೋಷಿಸಿಕೊಂಡನು.

ಈ ಸಮಯವನ್ನು ಸಾಧಿಸಿ, ಅವನ ದಳಪತಿಯಾಗಿದ್ದ ಪೂವಲಿಕುಲದ ಮುಮ್ಮಡಿ ಸಿಂಗನು ಹೊಸಮಲೆ ಭಾಗದಲ್ಲಿ ಸ್ವತಂತ್ರ ರಾಜ್ಯವನ್ನು ಕಟ್ಟಿದನು. ಅದು ಇಂದಿನ ಬಳ್ಳಾರಿ ಪ್ರಾಂತ್ಯದ ಬಹುಪಾಲು ಪ್ರದೇಶವನ್ನೊಳಗೊಂಡಿತ್ತು. ಕುಮ್ಮಟದುರ್ಗವನ್ನು (ಕಂಪಿಲಿ) ರಾಜಧಾನಿಯಾಗಿ ಮಾಡಿಕೊಂಡು ಸಮರ್ಥ ರಾದ ಬೇಡರ ಪಡೆಯೊಂದನ್ನು ಅವನು ಸಜ್ಜುಗೊಳಿಸಿದನು. ಮುಮ್ಮಡಿಸಿಂಗನು ಕಟ್ಟಿದ್ದ ಕನಸು ಕಡೆಗೂ ನನಸಾಗಿತ್ತು. ಅವನು ತನ್ನ ರಾಜ್ಯವನ್ನು ವಿಸ್ತರಿಸುವ, ಹಾಗೂ ಶತ್ರುಗಳಿಂದ ರಕ್ಷಿಸುವ ಹೊಣೆಗಾರಿಕೆಯನ್ನು ತನ್ನ ಮಗ ಕಂಪಿಲ ರಾಯನಿಗೆ ಒಪ್ಪಿಸಿ, ನಿಶ್ಚಿಂತೆಯಿಂದ ಮರಣ ಹೊಂದಿದನು.

ಸಾಯುವ ಮುನ್ನ ಅವನು ಪದ್ಮನಾಭತೀರ್ಥರಿಗೆ ಕೊಟ್ಟಿದ್ದ ವಚನವನ್ನು ಮರೆತಿರಲಿಲ್ಲ.

"ಮಗೂ, ನಮ್ಮ ಈ ನೂತನ ರಾಜ್ಯ ನಿರ್ಮಾಣಕ್ಕೆ ಕಾರಣರಾದವರು ಶ್ರೀ ಪದ್ಮನಾಭತೀರ್ಥ ಮಹಾತ್ಮರು. ಅವರಿಗೆ ನಾವು ಸದಾ ಕೃತಜ್ಞರಾಗಿರ ಬೇಕು. ಅವರು ಎಲ್ಲಿದ್ದರೂ ಸರಿ, ಹುಡುಕಿಸಿ, ಹೊಸಮಲೆ ರಾಜ್ಯಕ್ಕೆ ಕರೆತಂದು, ಅವರನ್ನು ಅಮಾತ್ಯರನ್ನಾಗಿ ಮಾಡಿಕೊ. ಅವರ ಆಜ್ಞೆಯಂತೆ ನಡೆ. ಇದರಿಂದ ನಿನಗೆ ಅಭ್ಯುದಯವಾಗುತ್ತದೆ" ಎಂದು ಹೇಳಿ ಕಣ್ಣುಮುಚ್ಚಿಕೊಂಡಿದ್ದನು.

ಆದರಂತೆ ದೊರೆಯಾದ ಕಂಪಿಲರಾಯನು ಗುರುಗಳಾದ ಪದ್ಮನಾಭ ತೀರ್ಥರನ್ನು ಹುಡುಕಿಸುವ ಪ್ರಯತ್ನದಲ್ಲಿದ್ದಾಗ, ಇದನ್ನು ಯೋಗದೃಷ್ಟಿ ಯಿಂದ ಅರಿತವರಂತೆ, ಪದ್ಮನಾಭತೀರ್ಥರು ಅಕ್ಷೋಭ್ಯತೀರ್ಥರೊಂದಿಗೆ ಕುಮ್ಮಟದುರ್ಗದಲ್ಲಿ ಪ್ರತ್ಯಕ್ಷರಾದರು.

ಕಂಪಿಲರಾಯನು ಅತ್ಯಾಶ್ಚರ್ಯಪಟ್ಟು ಅವರನ್ನು ರಾಜೋಚಿತ ಗೌರವ ದಿಂದ ಸ್ವಾಗತಿಸಿ ಅವರಿಗೆ ಮುಖ್ಯಾಮಾತ್ಯ ಪದವಿಯನ್ನು ಇತ್ತನು.

ಇದಕ್ಕೆ ಪದ್ಮನಾಭತೀರ್ಥರು ಸಮ್ಮತಿಸಲಿಲ್ಲ.

"ಅಯ್ಯಾ ಕಂಪಿಲರಾಜೇಂದ್ರ, ಸರ್ವಸಂಗ ಪರಿತ್ಯಾಗ ಮಾಡಿದ ನಮ ಗೇಕೆ ಈ ರಾಜ ವೈಭವ? ನಾವು ಸನ್ಯಾಸಿಗಳು. ಮೇಲಾಗಿ ವಿರಕ್ತರು. ನಿನ್ನ

ರಾಜ್ಯದ ಆಡಳಿತವನ್ನು ನಿರ್ವಹಿಸುವ ಈ ಕಷ್ಟದ ಕಾರ್ಯಕ್ಕೆ ನಾವು ಹೆಗಲು ಕೊಡಲು ಸಮರ್ಥರೆ ?"— ಎಂದರು.

"ಮಹಾತ್ಮರಾದ ತಮಗೆ ಈ ಕಾರ್ಯವು ಒಂದು ಲೆಖ್ಖವೇ ? ತಾವು ಈ ಪದವಿಯನ್ನು ಅಲಂಕರಿಸಿ ನನಗೆ ಮಾರ್ಗದರ್ಶನ ಮಾಡಬೇಕೆಂಬುದೇ ನನ್ನ ಪೂಜ್ಯರಾದ ದಿವಂಗತ ಅಪ್ಪಾಜಿಯವರ ಅಭಿಲಾಷೆಯಾಗಿತ್ತು. ಅವರ ಕೋರಿಕೆಯನ್ನು ತಾವು ಈಡೇರಿಸಿ ಕೊಡಬೇಕು".

"ಹಾಗಿದ್ದರೆ ನಮ್ಮ ಶಿಷ್ಯನೂ, ನಿನ್ನ ನಿಷ್ಠಾವಂತ ಸೇವಕನೂ, ದಕ್ಷ ಆಡಳಿತಗಾರನೂ ಆಗಿರುವ ಬೈಚಪ್ಪನನ್ನು ಅಮಾತ್ಯನನ್ನಾಗಿ ಮಾಡಿಕೋ: ನಾವು ಹರಿಯು ಚಿತ್ತದಲ್ಲಿದ್ದಷ್ಟು ಕಾಲ ಇಲ್ಲಿ ರಾಜಗುರುಗಳಾಗಿದ್ದುಕೊಂಡು, ನಿಮ್ಮ ರಾಜ್ಯದ ಯೋಗಕ್ಷೇಮ ನೋಡಿಕೊಳ್ಳುತ್ತೇವೆ. ಆದರೆ ಒಂದು ಮಾತು. ನೀನು ನಮ್ಮಲ್ಲಿ ಇದೇ ವಿಶ್ವಾಸ ನಂಬಿಕೆಗಳು ಇರಿಸಿಕೊಂಡಿರುವವರಿಗೆ ನಾವು ಇಲ್ಲಿರುತ್ತೇವೆ. ನಮ್ಮಲ್ಲಿ ನಿನಗೆ ನಂಬಿಕೆ ತಪ್ಪಿದ ದಿನವೇ ನಾವು ಇಲ್ಲಿಂದ ಕಾಲ್ತೆಗೆಯುತ್ತೇವೆ."

"ಹಾಗೇ ಆಗಲಿ ಸ್ವಾಮಿ" ಎಂದು ಹೇಳಿ ಕಂಪಿಲರಾಯನು ಪದ್ಮನಾಭ ತೀರ್ಥರಿಗೆ ರಾಜೋಚಿತವಾದ ಬಿಡದಿಯನ್ನು ಕಲ್ಪಿಸಿ ಅವರನ್ನು ರಾಜಗುರುಗಳನ್ನಾಗಿ ಸ್ವೀಕರಿಸಿದನು.

ಪದ್ಮನಾಭತೀರ್ಥರು ಕಂಪಿಲಿ (ಕುಮ್ಮಟದುರ್ಗ) ಯಲ್ಲಿ ನಿಂತ ಮೇಲೆ ಮಹಾರಾಣಿ ಹರಿಯಾಲ ದೇವಿಯು ತನ್ನ ಹತ್ತುವರ್ಷದ ರಾಜಪುತ್ರ ಕುಮಾರ ರಾಮನಾಥನ ವಿದ್ಯಾಭ್ಯಾಸ, ಯೋಗಕ್ಷೇಮಗಳನ್ನು ಅವರಿಗೆ ಒಪ್ಪಿಸಿದಳು. ಜಟ್ಟಂಗಿ ರಾಮನಾಥನ ವರಪ್ರಸಾದದಿಂದ ಹುಟ್ಟಿದ್ದ ಈ ಕುಮಾರನು ಮುಂದೆ ನಾಡಿನ ಇತಿಹಾಸದಲ್ಲಿ ಮಹತ್ತರ ಪಾತ್ರ ವಹಿಸುವ ಲಕ್ಷಣಗಳನ್ನು ಆಚಾರ್ಯರು ಗುರುತಿಸಿದ್ದರು. ಅಂತಲೇ ಅವನನ್ನು ಸ್ವಾತಂತ್ರ್ಯದ ಯೋಧನನ್ನಾಗಿ ಕಟೆಯುವ ಕಾರ್ಯವನ್ನು ಸಂತೋಷದಲ್ಲೇ ಒಪ್ಪಿಕೊಂಡಿದ್ದರು

ಈ ಅವಧಿಯಲ್ಲಿ ದಿಲ್ಲಿ ಸಿಂಹಾಸನ ಹಾಗೂ ದೇವಗಿರಿ ಇತಿಹಾಸಗಳಲ್ಲಿ ಏರುಪೇರುಗಳಾಗಿದ್ದವು.

ಈ ಸಮಯದಲ್ಲಿ ಮಲ್ಲಿಕಾಫರನು ಅಲ್ಲಾವುದ್ದೀನನ ಮರಣವನ್ನು ಸಾಧಿಸಿ ಪ್ರಬಲನಾದನು. ಅವನು ಕುಟಿಲ ನೀತಿಗೆ ಹೆಸರಾದ ತನ್ನ ಒಡೆಯನ ಮೇಲ್ಪಂಕ್ತಿಯನ್ನೇ ಅನುಸರಿಸಿ ಅವನಿಂದ ಕಲಿತ ಪಾಠವನ್ನು ಅವನಿಗೇ ಒಪ್ಪಿಸಿ

ದನು. ಅವನು ಅಲ್ಲಾವುದ್ದೀನನ ಕೃತಕವಾದ ಮೃತ್ಯುಪತ್ರವನ್ನು ಸೃಷ್ಟಿಸಿ ಯುವ ರಾಜಕುಮಾರನಾದ ಕಜೀರಖಾನನ್ನು ಸಿಂಹಾಸನದಿಂದ ತಳ್ಳಿ ಷಹಾಬುದ್ದೀನನೆಂಬ ಐದಾರು ವರ್ಷದ ಮಗುವನ್ನು ಸಿಂಹಾಸನದ ಮೇಲೆ ಕೂಡಿಸಿ, ತಾನೇ ರಾಜ ಪ್ರತಿನಿಧಿಯಾಗಿ ಘೋಷಿಸಿಕೊಂಡು ರಾಜ್ಯಸೂತ್ರಗಳನ್ನು ಕೈಗೆ ತೆಗೆದು ಕೊಂಡನು. ಅವನು ಅಲ್ಲಾವುದ್ದೀನನು ಮದುವೆಯಾಗಿದ್ದ ರಾಮಚಂದ್ರದೇವನ ಮಡದಿ ಕಮಲಾದೇವಿಯನ್ನು ಮತ್ತೆ ವಿವಾಹವಾದನು. ಅವನು ಅಲ್ಲಾವುದ್ದೀನನ ಮಕ್ಕಳಾದ ಖಿಜೀರಖಾನ ಮತ್ತು ಶಾದಿಖಾನರ ಕಣ್ಣುಗಳನ್ನು ಕೀಳಿಸಿ, ಮೂರ ನೆಯ ಮಗ ಮುಬಾರಕನನ್ನು ಅಂಧನನ್ನಾಗಿ ಮಾಡಲು ಹೊರಟಿದ್ದಾಗ ಈ ಪಿತೂರಿ ತಿಳಿದ ಮುಬಾರಕನು ಸೈನಿಕರನ್ನು ಲಂಚದಿಂದ ವಶಪಡಿಸಿಕೊಂಡು, ಕೊಲ್ಲಲು ಬಂದ ಅವರಿಂದಲೇ ಮಲ್ಲಿಕಾಫರನ ಕೊಲೆ ಮಾಡಿಸಿದನು. ಹೀಗೆ ಆ ಧೂರ್ತನ ಕೊನೆಯಾಗಿತ್ತು. ಅಲ್ಲಾವುದ್ದೀನನು ಮರಣ ಹೊಂದಿದ 35 ದಿನಗಳಲ್ಲಿಯೇ ಅವನ ಅವಸಾನವೂ ಆಗಿತ್ತು.

ಮುಬಾರಕನು ದೆಹಲಿ ಸುಲ್ತಾನನಾದ ಮೇಲೆ ಅವನನ್ನು ಮೂಲೆಗೊತ್ತಿ ಖುಸ್ರುಖಾನನು ದೊರೆಯಾದನು. ಅವನು ದೇವಗಿರಿಯನ್ನು ಮುತ್ತಿ ಅಲ್ಲಿನ ದೊರೆ ಹರಪಾಲದೇವನನ್ನು ಸೆರೆ ಹಿಡಿದು ಅವನನ್ನು ಜೀವಂತ ಸುಟ್ಟನೆಂದು ಒಬ್ಬ ಇತಿಹಾಸಕಾರ ಬರೆದರೆ, ಮತ್ತೊಬ್ಬ ಅವನ ತಲೆಬುರುಡೆಯನ್ನು ದೇವ ಗಿರಿ ಕೋಟೆಗೆ ನೇತು ಹಾಕಿದನೆಂದು ಬರೆಯುತ್ತಾನೆ.

ಹೀಗೆ ದೇವಗಿರಿ ಯಾದವರು ತಮ್ಮ ದೇಹದಲ್ಲಿ ತೊಟ್ಟು ರಕ್ತವಿರುವವರೆಗೆ ಹೋರಾಡಿ, ಸ್ವಾತಂತ್ರ್ಯದ ಬೆಂಕಿಯಲ್ಲಿ ಸುಟ್ಟು ಭಸ್ಮರಾದರು.

ಮುಂದೆ ಈ ಖುಸ್ರುಖಾನನನ್ನು ಮೂಲೆಗೊತ್ತಿ ತೊಗಲಖ ಮನೆತನದ ಘಯಾಸುದೀನ್ ತೊಗಲಖನು ದಿಲ್ಲಿಯ ಸಿಂಹಾಸನವನ್ನೇರಿದನು.

ಅವನ ಆಳ್ವಿಕೆಯು ಆರಂಭವಾಗುತ್ತಿದ್ದಂತೆ ಹಿಂದಿನ ದಿಲ್ಲೀಶ್ವರರ ಮೇಲ್ಪಂಕ್ತಿಯನ್ನು ಅನುಸರಿಸಿ ಅವನೂ, ಅವನ ಪುತ್ರನಾದ ಮಹಮದ್‌ಬಿನ್ ತೊಗಲಖನೂ ದಕ್ಷಿಣದ ಹಿಂದೂ ರಾಜ್ಯಗಳಲ್ಲಿ ಕೊಲೆ ಸುಲಿಗೆ ಅತ್ಯಾಚಾರಗಳಿಂದ ಹಾವಳಿ ಮಾಡಿದರು.

ಇವರನ್ನು ಎದುರಿಸುವವರು ಆಗ ದಕ್ಷಿಣದಲ್ಲಿ ಇರಲಿಲ್ಲವೆಂದರೆ ತಪ್ಪಾಗದು. ಮಂಗಳವೇಢೆಯ ಮಂಡಿರಾಜನ ವಿಸ್ತಾರವಾಗಿದ್ದ ಜಮಖಂಡಿ ಪ್ರದೇಶದ

ಬಹುಪಾಲು ರಾಜ್ಯ ಅವನ ಕೈಬಿಟ್ಟು ಹೋಗಿತ್ತು. ಈಗ ಅವನು ಕೇವಲ ಸಣ್ಣ ಸಂಸ್ಥಾನಿಕ ಸ್ಥಿತಿಗೆ ಬಂದಿದ್ದನು.

ಆನೆಗೊಂದಿಯ ಜಂಬುಕೇಶ್ವರರಾಯನು ವೃದ್ಧಾಪ್ಯದಲ್ಲಿದ್ದನು.

ಚಂದ್ರವಂಶದವರೆಂದು ಹೇಳಿಕೊಳ್ಳುವ ಈ ವಂಶವು ಕಿಷ್ಕಿಂಧೆಯಲ್ಲಿ ಆಳುತ್ತಿದ್ದ ನಂದ ಮಹಾರಾಜನಿಂದ ಆರಂಭವಾಯಿತೆಂದು ಹೇಳುತ್ತಾರೆ. ಅವನು ಬಾಹ್ಲಿಕನಾಡಿನಿಂದ ಬಂದು ಕರ್ನಾಟಕದಲ್ಲಿ ನೂತನ ರಾಜ್ಯಸ್ಥಾಪನೆ ಮಾಡಿದ್ದನು. ಅವನ ನಂತರ ಚಾಲುಕ್ಯ ಮಹಾರಾಜನೆಂಬುವನು ಆಳಿದನು. ಅವನ ಮಕ್ಕಳಲ್ಲಿ ಹಿರಿಯನಾದ ಬಿಜ್ಜಳರಾಯನು ಕಾಲಚೂರಿ ಮನೆತನಕ್ಕೆ ಮೂಲ ಪುರುಷನಾದನು. ಅವನ ಸಹೋದರ ವಿಜಯಧ್ವಜನು ಇಂದಿನ ಆನೆಗೊಂದಿಯನ್ನು ರಾಜಧಾನಿ ಮಾಡಿಕೊಂಡು ವಿಜಯನಗರಕ್ಕೆ ಅಸ್ತಿವಾರ ಹಾಕಿದನು. ಅವನ ಮಗ ಅನುವೇಮ, ಅವನ ಮಗ ರಾಮದೇವರಾಯ. ಅವನ ಮಗ ಪ್ರತಾಪ ರಾಯನ ನಂತರ ಸಿಂಹಾಸನವನ್ನೇರಿದವನು ಜಂಬುಕೇಶ್ವರರಾಯನು. ಇವನಿಗೆ ಗಂಡು ಮಕ್ಕಳಿರಲಿಲ್ಲ. ಒಬ್ಬ ಹೆಣ್ಣುಮಗಳಿದ್ದಳು. ಅವಳನ್ನೇ ಗಂಡುಮಗನೆಂದು ತಿಳಿದು ಕಾಪಾಡುತ್ತಿದ್ದನು.

ಅವನು ಪದ್ಮನಾಭತೀರ್ಥರ ಸೇವೆ ಮಾಡಿದರೆ ತನಗೆ ಪುತ್ರಸಂತಾನವಾಗುವುದೆಂದು ಯಾರಿಂದಲೋ ತಿಳಿಯಿತು. ಅವರನ್ನು ತನ್ನ ರಾಜ್ಯಕ್ಕೆ ಬಂದು ನೆಲೆಸಲು ಆಹ್ವಾನಿಸುತ್ತಿದ್ದನು. ತಾವು ಅಲ್ಲಿಗೆ ಒಂದು ದಿನ ಬಂದು ಸೇವೆ ಸ್ವೀಕರಿಸುವುದಾಗಿ ಹೇಳಿ ಪದ್ಮನಾಭತೀರ್ಥರು ಅವನನ್ನು ಹಿಂದಕ್ಕೆ ಕಳುಹಿಸಿದ್ದರು.

ಈಗ ಧರ್ಮಕರ್ಮ ಸಂಯೋಗದಿಂದ ಪದ್ಮನಾಭತೀರ್ಥರಿಗೆ ಆನೆಗೊಂದಿಗೆ ಹೋಗಬೇಕಾದ ಪ್ರಸಂಗ ಬಂದಿತ್ತು.

ಕಂಪಿಲರಾಯನು ಧರ್ಮಿಷ್ಠನಾಗಿದ್ದರೂ, ಸ್ತ್ರೀಲೋಲನಾಗಿದ್ದನು.

ಅವನು ಹರಿಯಾಲದೇವಿಯಿಂದ ರಾಮನಾಥನಂಥ ಮಗನನ್ನು ಪಡೆದಿದ್ದರೂ, ಒಬ್ಬ ಸಾಮಾನ್ಯ ಹೆಣ್ಣಿಗೆ ಮೋಹಗೊಂಡು ಅವಳನ್ನು ಮದುವೆಯಾಗಲು ಬಯಸಿದನು. ಅವಳ ಹೆಸರು ರತ್ನಾಜಿ. ಅಂಥ ಕುಲೀನವಂಶದಲ್ಲಿ ಹುಟ್ಟಿರಲಿಲ್ಲ. ಅವಳನ್ನು ಹರಿಯಾಲದೇವಿಯ ಇಷ್ಟದ ವಿರುದ್ಧ ವಿವಾಹವಾಗಿ ಮಹಾರಾಣಿಯನ್ನಾಗಿ ಮಾಡಿಕೊಳ್ಳಲು ಕಂಪಿಲರಾಯನು ಇಚ್ಛಿಸಿದನು. ಮಹಾರಾಣಿಯು ಪದ್ಮನಾಭತೀರ್ಥರನ್ನು ಆಶ್ರಯಿಸಿ, ಈ ಅಕಾರ್ಯ ಬಿಡುವಂತೆ ದೊರೆಗೆ ಬುದ್ಧಿ ಹೇಳಲು ಅವರನ್ನು ಪ್ರಾರ್ಥಿಸಿದಳು.

ಪದ್ಮನಾಭತೀರ್ಥರಿಗೂ ದೊರೆಯ ಈ ಅನುಚಿತ ನಡವಳಿಕೆ ಅಪ್ರಿಯವಾಯಿತು. ಅವರು ಕಂಪಿಲರಾಯನನ್ನು ಅಂತರಂಗಕ್ಕೆ ಕರೆಸಿಕೊಂಡು ಹೀಗೆ ಮಾಡಿದರೆ ಪ್ರಜೆಗಳಿಗೆ ದೊರೆಯಲ್ಲಿ ಗೌರವ ಬುದ್ಧಿ ಹಾಳಾಗುವುದೆಂದೂ, ಎಲ್ಲ ರೀತಿಯಲ್ಲೂ ಅವನು ಆದರ್ಶಪ್ರಭುವಾಗಿ ಇರಬೇಕಾದರೆ, ಕಾಮಕ್ರೋಧಗಳನ್ನು ಹತೋಟಿಯಲ್ಲಿಟ್ಟುಕೊಂಡಿರಬೇಕೆಂದು ಬುದ್ಧಿ ಹೇಳಿದರು.

"ಚಿನ್ನದಂತಹ ಪುತ್ರನಿರುವಾಗ ಅವರಿಗೆ ವಿವಾಹ ಮಾಡುವುದನ್ನು ಬಿಟ್ಟು, ನಿನ್ನ ವಿವಾಹಕ್ಕೆ ಪ್ರಯತ್ನ ಮಾಡುವುದು ನಗೆಪಾಟಲಾಗುವುದಿಲ್ಲವೇ" ಎಂದು ಹೀಯಾಳಿಸಿದರು.

ಇದರಿಂದ ಅಸಮಾಧಾನಗೊಂಡ ಕಂಪಿಲರಾಯನು ಕ್ರಿಯಾಶಕ್ತಿಪಂಡಿತರೆಂಬ ಶೈವ ಮತದ ಕಾಳಾಮುಖಿದ ಗುರುಗಳನ್ನು ಆಶ್ರಯಿಸಿದನು, ರತ್ನಾಜಿಗೆ ಅವರಿಂದ ಶಿವದೀಕ್ಷೆ ಕೊಡಿಸಿ, ಪತ್ನಿಯಾಗಿ ಪರಿಗ್ರಹಿಸಿ, ಅಂತಃಪುರಕ್ಕೆ ಕರೆತಂದನು.

ಮೊದಲಿನಿಂದಲೂ ಶೈವರಾಗಿದ್ದ ಕ್ರಿಯಾಶಕ್ತಿಪಂಡಿತರಿಗೆ ವೈಷ್ಣವರಾದ ಪದ್ಮನಾಭತೀರ್ಥರು, ರಾಜನ ಮೇಲೆ ಪ್ರಭಾವ ಬೀರುವ ರಾಜಗುರುಗಳಾಗಿರುವುದು ಅಸೂಯೆಗೆ ಕಾರಣವಾಗಿತ್ತು.1

---

1) ಕ್ರಿಯಾಶಕ್ತಿ ಪಂಡಿತರ ವಿಷಯದಲ್ಲಿ ವಿದ್ವಾಂಸರಲ್ಲಿ ಒಮ್ಮತವಿದ್ದಂತೆ ಕಾಣುವುದಿಲ್ಲ. ರಾವಬಹದ್ದೂರ ನರಸಿಂಹಾಚಾರ್ಯರು ವಿದ್ಯಾರಣ್ಯರಂತೆ ಕ್ರಿಯಾಶಕ್ತಿ ಪಂಡಿತರೂ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರೆಂದು ಅಭಿಪ್ರಾಯಪಟ್ಟಿದ್ದಾರೆ. ಡಾ|| ವೆಂಕಟಸುಬ್ಬಯ್ಯನವರು ಈ ಅಭಿಪ್ರಾಯವನ್ನು ಪುರಸ್ಕರಿಸಿದ್ದಾರೆ. ವಿದ್ಯಾರಣ್ಯರಂತೆ ಕ್ರಿಯಾಶಕ್ತಿಯು ಆರಂಭದ ಅರಸರ ಕುಲಗುರುಗಳು ಆಗಿರುವುದರಿಂದ ಅವರೇ ವಿಜಯನಗರವನ್ನು ಸ್ಥಾಪಿಸಿರಬಹುದೆಂದು ಹೇಳಿದ್ದಾರೆ. ಪ್ರೊ|| ಕೆ. ಎ. ನೀಲಕಂಠಶಾಸ್ತ್ರಿಗಳು ಕಾಶೀವಿಲಾಸ ಕ್ರಿಯಾಶಕ್ತಿಯು ಹಿಂದೂ ಧರ್ಮದ ಪುನರುತ್ಥಾಪನ ಕಾರ್ಯದಲ್ಲಿ ವಿದ್ಯಾರಣ್ಯರಿಗೆ ಸ್ಪರ್ಧಿಗಳಾಗಿದ್ದರೆಂದೂ ಅಭಿಪ್ರಾಯಪಟ್ಟಿದ್ದಾನೆ.

ಇತ್ತೀಚೆಗೆ ಶ್ರೀ ಟಿ. ಎನ್. ಮಲ್ಲಪ್ಪನವರು ಹೊಸ ವಾದವೊಂದನ್ನು ಮುಂದಿಡುತ್ತಾ ಕ್ರಿಯಾಶಕ್ತಿಯೇ ವಿದ್ಯಾರಣ್ಯರೆಂದು ಸಾಧಿಸಲು ಪ್ರಯತ್ನಿಸಿದ್ದಾರೆ ಅವರ ಈ ವಾದವನ್ನು ತ. ರಾ. ಸು. ಅವರು ಮಿಥಿಕ್ ಸೊಸೈಟಿ ತ್ರೈಮಾಸಿಕ

ಅವರು ದೊರೆಯನ್ನು ಅವನ ಅಳಿಯನಾದ ಸಂಗಮರಾಯನನ್ನು ತನ್ನ ಪ್ರಭಾವಕ್ಕೆ ತೆಗೆದುಕೊಂಡಿದ್ದರು. ಸಂಗಮರಾಯನ ಮಕ್ಕಳಾದ ಹರಿಹರ ಮತ್ತು ಬುಕ್ಕರಾಯರನ್ನು ಸದಾ ತಮ್ಮ ಮಠದಲ್ಲಿ ಇಟ್ಟುಕೊಂಡು ಅವರಿಂದ ನೂತನ ರಾಜ್ಯ ಸ್ಥಾಪನೆಯ ಕನಸು ಕಾಣುತ್ತಿದ್ದರು.

ಕುಮಾರರಾಮನು ಮಾತ್ರ ಪದ್ಮನಾಭತೀರ್ಥರಿಗೆ ವಿಧೇಯನಾಗಿ ಅವರನ್ನು ಸೇವಿಸುತ್ತಿದ್ದನು.

ಈಗ ಅವರ ವಿಷಯದಲ್ಲಿ ಅಸಮಾಧಾನಗೊಂಡಿದ್ದ ಕಂಪಿಲರಾಯನು ಕುಮಾರರಾಮನನ್ನು ಅವರ ಪ್ರಭಾವವಲಯದಿಂದ ತಪ್ಪಿಸಲು ಯುವರಾಜ ಕುಮಾರನನ್ನಾಗಿ ಮಾಡಿ, ರಾಜ್ಯದ ಹೊಣೆ ಒಪ್ಪಿಸಿದ್ದನು.

ಅವನನ್ನು ತಮ್ಮ ಪ್ರಭಾವವಲಯಕ್ಕೆ ಸೆಳೆಯಲು ಹಕ್ಕಬುಕ್ಕರ ಮೂಲಕ ಕ್ರಿಯಾಶಕ್ತಿಪಂಡಿತರು ಬಹಳ ಪ್ರಯತ್ನ ಮಾಡುತ್ತಿದ್ದರು.

ಹೀಗಿರುವಲ್ಲಿ ಒಂದು ದಿನ ರತ್ನಾಜಿಯು ಕುಮಾರ ರಾಮನಾಥನ ಮೇಲೆ

---

ದಲ್ಲಿ ಅಲ್ಲಗಳೆದಿದ್ದಾರೆ. ತ. ರಾ. ಸು ಅವರ ಅಭಿಪ್ರಾಯದಲ್ಲಿ ಅವರಿಬ್ಬರೂ ಬೇರೆ ಬೇರೆ ವ್ಯಕ್ತಿಗಳೇ ಆಗಿದ್ದಾರೆ. ಅವರ ಹೇಳಿಕೆಗೆ ಐತಿಹಾಸಿಕ ಆಧಾರಗಳ ಬೆಂಬಲವಿರುವಂತೆ ಭಾಸವಾಗುತ್ತದೆ. ತ. ರಾ. ಸು ಅವರ ಪ್ರಕಾರ ಕ್ರಿಯಾಶಕ್ತಿ ಹೆಸರಿನವರು ನಾಲ್ಕು ಮಂದಿ ವ್ಯಕ್ತಿಗಳಾದರೂ ಇದ್ದಾರೆ. ಕ್ರಿಯಾಶಕ್ತಿ ಎಂಬುದು ವ್ಯಕ್ತಿನಾಮವಾಗದೆ ಪೀಠನಾಮವಾಗಿರಬೇಕು. (ಸೊರಬ ಕ್ರಿ ಶ. 1347) ಶಿಕಾರಿಪುರ (ಕ್ರಿ.ಶ. 1368) ಚನ್ನರಾಯಪಟ್ಟಣ (ಕ್ರಿ. ಶ. 1378) ಗಳ ಶಾಸನಗಳಲ್ಲೂ, ಗಂಗಾಂಬಿಕೆಯ ಮಧುರಾವಿಜಯದಲ್ಲಿಯೂ ಬರುವ ಕ್ರಿಯಾಶಕ್ತಿಯು ಕಾಶೀ ವಿಲಾಸ ಕ್ರಿಯಾಶಕ್ತಿಯಾಗಿರಬೇಕೆಂದೂ, ಇವರು ವಿದ್ಯಾರಣ್ಯರ ಸಮಕಾಲೀನರೆಂದೂ ತ. ರಾ. ಸು ಅವರು ಅಭಿಪ್ರಾಯಪಡುತ್ತಾರೆ. ಈ ಕಾಶೀವಿಲಾಸ ಕ್ರಿಯಾಶಕ್ತಿಯು ಬನವಾಸಿ ಮಂಡಲದ ರಾಜ್ಯಪಾಲ ಮಾಧವ ಮಂತ್ರಿಯ ರಾಜಗುರುಗಳಾಗಿದ್ದರೆಂದೂ, ಈ ಬನವಾಸಿ ಮಂಡಲದ ಕೆಲವು ಭಾಗವಾಗಿದ್ದ ಬಳ್ಳಿಗಾವೆಯು ಕಾಳಾಮುಖಿ ಶೈವಪಂಥದ ಕೇಂದ್ರವಾಗಿತ್ತೆಂದೂ ವಿಜಯನಗರ ಸ್ಥಾಪನೆಯ ಕಾರ್ಯದಲ್ಲಿ ಇವರು ವಿದ್ಯಾರಣ್ಯರಂತೆ ಮಹತ್ವದ ಪಾತ್ರ ವಹಿಸಿರಬೇಕೆಂದೂ ತ ರಾ.ಸು. ಅವರು ವ್ಯಕ್ತಪಡಿಸಿರುವ ಅಭಿಪ್ರಾಯ ಹೆಚ್ಚು ಸಮಂಜಸವೆಂದು ತೋರುತ್ತದೆ. —ಲೇಖಕ.

ಮಾತೃಗಾಮಿತನದ ಆರೋಪವನ್ನು ಹೊರೆಸಿದಳು. ಇದನ್ನು ಪದ್ಮನಾಭ ತೀರ್ಥರು ಸಮರ್ಥಿಸಲಿಲ್ಲ. ಕ್ರಿಯಾಶಕ್ತಿ ಪಂಡಿತರ ಪ್ರಭಾವಕ್ಕೆ ಸಿಕ್ಕಿದ್ದ ಕಂಪಿಲ ರಾಯನು ರಾಮನಾಥನನ್ನು ವಿಚಾರಣೆ ಮಾಡದೆ ಅವನಿಗೆ ಮರಣದಂಡನೆ ಶಿಕ್ಷೆ ವಿಧಿಸಿದನು. ಇದನ್ನು ಪದ್ಮನಾಭತೀರ್ಥರು ಪ್ರತಿಭಟಿಸಿದರು. ತಮ್ಮ ರಾಜ ಗುರು ಪದವಿಗೆ ಶಿಲಾಂಜಲಿ ಇತ್ತು, ತಮ್ಮಲ್ಲಿ ಗೌರವಭಾವ, ಪೂಜ್ಯತೆ ಹೊಂದಿದ್ದ ಆನೆಗೊಂದಿಯ ಜಂಬುಕೇಶ್ವರರಾಯನ ಬಳಿಗೆ ಹೊರಟುಹೋದರು.

ಹೋಗುವಾಗ ರಾಮನಾಥನ ಯೋಗಕ್ಷೇಮವನ್ನು ಮಂತ್ರಿ ಬೈಚಪ್ಪನಿಗೆ ಒಪ್ಪಿಸಿ, ಅಲ್ಲಿಂದ ನಿರ್ಗಮಿಸಿದರು. ಅವರನ್ನು ನಿರ್ಬಂಧದಲ್ಲಿಡಲು ಬಂದ ಕಂಪಿಲರಾಯನು ಅದಕ್ಕಾಗಿ ಪಶ್ಚಾತ್ತಾಪ ಪಡಬೇಕಾಯಿತು.

ಪದ್ಮನಾಭತೀರ್ಥರ ಅನುಗ್ರಹ ತಪ್ಪಿದ ಮೇಲೆ ದಿಲ್ಲೀಶ್ವರ ಮಹಮದ್ ಬಿನ್‌ತೊಗಲಖನು ಕಂಪಿಲರಾಯನ ಮೇಲೆ ದಂಡೆತ್ತಿ ಬಂದನು. ತಂದೆ ಮಕ್ಕಳನ್ನು ಕೊಂದು, ಹಕ್ಕಬುಕ್ಕರನ್ನು ಕೈಸೆರೆ ಹಿಡಿದು, ಕುಮ್ಮಟದುರ್ಗವನ್ನು ಸಂಪೂರ್ಣ ವಾಗಿ ನಾಶಪಡಿಸಿದನು. ಕ್ರಿ. ಶ. 1326 ರಲ್ಲಿ ನಡೆದ ಈ ಘಟನೆಯನ್ನು ನೋಡಲು ಪದ್ಮನಾಭತೀರ್ಥರು ಜೀವಿಸಿರಲಿಲ್ಲ. ಅವರು ಎರಡು ವರ್ಷಗಳ ಮೊದಲೇ ಅಂದರೆ ಕ್ರಿ. ಶ. 1324 ರಲ್ಲಿ ತಮ್ಮ ಇಹಲೋಕದ ಅವತಾರಲೀಲೆ ಯನ್ನು ಮುಗಿಸಿದ್ದರು.

## ಮಹಾಸಮಾಧಿ

ಪದ್ಮನಾಭತೀರ್ಥರಿಗೆ ಕುಮ್ಮಟದುರ್ಗದ ನೀರಿನ ಋಣ ತೀರಿತ್ತು. ರಾಜ್ಯದಲ್ಲಿ ಶೈವಗುರು ಕಾಳಾಮುಖ ಸಂಪ್ರದಾಯದ ಕ್ರಿಯಾಶಕ್ತಿ ಪಂಡಿತರ ಪ್ರಭಾವ ಬಲಿಯುತ್ತಿರುವುದನ್ನು ನೋಡಿ ಅವರು ಅಲ್ಲಿಂದ ಕಾಲ್ತೆಗೆಯಬೇಕೆಂದಿ ರುವಾಗಲೇ ಕುಮಾರರಾಮನ ಪ್ರಸಂಗ ಸಂಭವಿಸಿತ್ತು.

ಕುಮಾರರಾಮನು ನೂತನ ರಾಜ್ಯದ ಸ್ಥಾಪಕನಾಗಿ ಉತ್ತರದಿಂದ ಬರುತ್ತಿರುವ ಇಸ್ಲಾಂ ದುರಾಕ್ರಮಣಕಾರರನ್ನು ಸಮರ್ಥ ರೀತಿಯಲ್ಲಿ ಎದುರಿಸಿ ತಮ್ಮ ಕನಸನ್ನು ನನಸು ಮಾಡುವನೆಂದು ತಿಳಿದಿದ್ದರು. ಆದರೆ ದೈವೇಚ್ಛೆ ಬೇರೆಯಿತ್ತು.

ಆ ದಿನ ರಾತ್ರಿ ಪದ್ಮನಾಭತೀರ್ಥರು ಶ್ರೀ ಮಧ್ವಾಚಾರ್ಯರ ಗ್ರಂಥ

ಗಳನ್ನು ಮನನಮಾಡುತ್ತಾ ಮಲಗಿದ್ದರು. ಯಾವಾಗ ನಿದ್ರೆ ಬಂತೋ ಅವರಿಗೆ ತಿಳಿಯಲಿಲ್ಲ. ಜೊತೆಯಲ್ಲಿದ್ದ ಮಾಧವತೀರ್ಥರು ಮತ್ತು ಅಕ್ಷೋಭ್ಯತೀರ್ಥರನ್ನು ಇತ್ತೀಚಿನ ಘಟನೆಗಳನ್ನು ನೆನೆದು ಅವರಿಗೆ ಶೈವ ಧರ್ಮದ ಕ್ರಿಯಾಶಕ್ತಿ ಪಂಡಿತರಿಂದ ಅಪಾಯ ಒದಗಬಹುದೆಂದು ಊಹಿಸಿ, ಅವರನ್ನು ದ್ವೈತ ಸಿದ್ಧಾಂತ ಪ್ರಚಾರಕ್ಕಾಗಿ ಹೊರಗೆ ಕಳುಹಿಸಿದ್ದರು. ಈಗ ಮಠದಲ್ಲಿ ಅವರೊಬ್ಬರೇ ಉಳಿದರು. ಅವರನ್ನು ನಿಷ್ಠೆಯಿಂದ ಅವರ ಶಿಷ್ಯರಾದ ಲಕ್ಷ್ಮೀಧರತೀರ್ಥರು ಎಡೆಬಿಡದೆ ಸೇವಿಸುತ್ತಿದ್ದರು. ಅವರಿಗೆ, ಶ್ರೀಮದಾನಂದತೀರ್ಥರು ತಮಗೆ ಸರ್ವಜ್ಞಪೀಠವನ್ನು ಕೊಡುವಮೊದಲು ಪೂಜೆಗಾಗಿ ಕೊಟ್ಟಿದ್ದ ಗೋಪೀನಾಥ ದೇವರ ವಿಗ್ರಹವನ್ನು ಕೊಟ್ಟು ಶ್ರೀರಂಗಕ್ಕೆ ಕಳುಹಿಸಿಕೊಟ್ಟರು. ಅವರೇ ಮುಂದೆ ಮುಳಬಾಗಿಲಿನ ಪದ್ಮನಾಭತೀರ್ಥ ಪರಂಪರೆಯ ಶ್ರೀಪಾದರಾಜ ಸಂಸ್ಥಾನಕ್ಕೆ ಮೂಲಪುರುಷರಾದರು.

ತಮ್ಮ ನಂತರದ ಸರ್ವಜ್ಞಪೀಠಕ್ಕೆ ನರಹರಿತೀರ್ಥರು ಬರಬೇಕಾಗಿದ್ದುದರಿಂದ ಅವರನ್ನು ಜೊತೆಯಲ್ಲಿಯೇ ಇಟ್ಟುಕೊಂಡಿದ್ದರು. ಅವರು ಗ್ರಂಥವ್ಯಾಸಂಗ ಮಾಡುತ್ತಾ ಹಾಗೇ ಮಲಗಿದ್ದ ಗುರುಗಳಿಗೆ ಹೊದಿಕೆಯನ್ನು ಹೊದ್ದಿಸಿ, ಅವರಿಗೆ ಎಚ್ಚರವಾಗುವುದನ್ನೇ ಕಾಯುತ್ತಾ ಮಠದ ಹಜಾರದಲ್ಲಿ ಕೃಷ್ಣಾಜಿನದ ಮೇಲೆ ಒರಗಿದ್ದರು. ಆ ರಾತ್ರಿ ಪದ್ಮನಾಭತೀರ್ಥರಿಗೆ ಒಂದು ವಿಚಿತ್ರವಾದ ಕನಸಾಯಿತು.

ಕನಸಿನಲ್ಲಿ ತುಂಗಭದ್ರೆಯು ಮಹಾಪೂರದಲ್ಲಿ ಮೇರೆವರಿದು ಬಂದು ಕುಮ್ಮಟದುರ್ಗದಲ್ಲಿದ್ದ ಸಮಸ್ತ ಪ್ರಾಣಿ ಮನೆಮಠಗಳನ್ನು ಕೊಚ್ಚಿಕೊಂಡು ಹೋದಂತೆ ಭಾಸವಾಯಿತು. ಅದರಲ್ಲಿ ಕುಮಾರರಾಮನು ತಾಯಿತಂದೆಗಳನ್ನು ಒಂದು ದೋಣಿಯಲ್ಲಿ ಕೂಡಿಸಿಕೊಂಡು ನದಿಯನ್ನು ದಾಟುತ್ತಿರುವಂತೆ ತೋರಿತು. ಅವರು ಇನ್ನೇನು ದಡ ಸೇರಬೇಕೆಂದಿರುವಾಗ ಉತ್ತರದ ಕಡೆಯಿಂದ ಬೀಸಿಕೊಂಡು ಬಂದ ಭಯಂಕರ ಬಿರುಗಾಳಿ ಆ ದೋಣಿಯನ್ನು ಮಗುಚಿ ಹಾಕಿದಂತೆ ಕಂಡರು. ಪದ್ಮನಾಭತೀರ್ಥರಿಗೆ ಕರುಣೆ ಉಕ್ಕಿತು. ತಮ್ಮ ಕಾವಿ ಶಾಟಿಯನ್ನು ಬೀಸಿದಾಗ ಪ್ರವಾಹ ಇಳಿಮುಖವಾಯಿತು. ಅದರಲ್ಲಿ ಹನ್ನೊಂದು ಜನರು ಮಾತ್ರ ಈಜಿ ದಡಕ್ಕೆ ಬಂದರು. ಅವರು ದಡಕ್ಕೆ ಬರುವುದನ್ನೇ ಕಾಯುತ್ತಿದ್ದ ಒಂದು ಹೆಬ್ಬುಲಿ ಮೇಲೆರಗಿ ಬಂದು ಅವರನ್ನು ನುಂಗಿದಂತೆ ಕಾಣಿಸಿತು. ಈ ಸಮಯದಲ್ಲಿ ಒಬ್ಬ ಸನ್ಯಾಸಿಯು ಆ ಹುಲಿಯನ್ನು ಯೋಗದಂಡದಿಂದ ಕೊಂದಂತೆ ಭಾಸವಾಯಿತು. ಹುಲಿಯು ಭಯಂಕರವಾಗಿ ಘರ್ಜಿಸಿ

ನೆಲಕ್ಕೆ ಉರುಳಿತು. ಅದೇನು ಆಶ್ಚರ್ಯ! ಆ ಸನ್ಯಾಸಿಯು ಹುಲಿಯ ಚರ್ಮವನ್ನು ಸೀಳಿ ಅದರ ಮೇಲೆ ಪದ್ಮಾಸನ ಹಾಕಿಕೊಂಡು ಕಣ್ಮುಚ್ಚಿ ಕುಳಿತುಬಿಟ್ಟನು. ಹನ್ನೊಂದು ಜನರಲ್ಲಿ ಇಬ್ಬರು ಮಾತ್ರ ಹುಲಿಯ ಧಮನಿಯಿಂದ ಪಾರಾಗಿ ಅವರನ್ನು ಸೇವಿಸುತ್ತ ನಿಂತಂತೆ ಕನಸಾಯಿತು.

ಈ ವೇಳೆಗೆ ಎಚ್ಚರವಾಗಿ ಕಣ್ಣು ತೆರೆದಾಗ ಎದುರಿಗೆ ನರಹರಿತೀರ್ಥರು ಗಾಬರಿಗೊಂಡು ನಿಂತಿದ್ದರು. ಕನಸಿನಲ್ಲಿ ಚೀರಿದ್ದ ಪದ್ಮನಾಭತೀರ್ಥರ ಕೂಗನ್ನು ಕೇಳಿ ಅವರು ಓಡಿ ಬಂದಿದ್ದರು.

"ನರಹರಿತೀರ್ಥರೇ, ನನಗೆ ಒಂದು ವಿಚಿತ್ರ ಕನಸಾಯಿತು" ಎಂದು ಹೇಳಿ ಅದನ್ನು ಅವರಿಗೆ ವಿವರಿಸಿದರು.

"ಸ್ವಾಮಿ, ಇದೆಲ್ಲವೂ ಭವಿಷ್ಯದ್ಘಟನೆಗಳ ಸೂಚನೆಯಾಗಿ ಕಾಣುತ್ತದೆ. ನಮ್ಮ ಹಾಗೂ (ಕುಮ್ಮಟದುರ್ಗ) ಕಂಪಿಲಿ ರಾಜ್ಯದ ನೀರಿನ ಋಣ ತೀರಿತೆಂದು ಕಾಣುತ್ತದೆ" ಎಂದು ಹೇಳಿ ಅವರನ್ನು ಸಂತೈಸಿದರು.

ಅಷ್ಟರಲ್ಲಿ ಬೈಚಾಮಾತ್ಯನು ಬೆಳಗಿನ ಜಾವದಲ್ಲೇ ಎದ್ದು ಓಡಿಬಂದಿದ್ದ. ಅವನಿಗೆ ಕ್ರಿಯಾಶಕ್ತಿಪಂಡಿತರು ಮಾಡಿದ್ದ ಒಂದು ದುಷ್ಟ ಆಲೋಚನೆ ಹೇಗೋ ತಿಳಿದಿತ್ತು. ಅಲ್ಲಿಂದ ಹೊರಟು ಹೋಗಲು ಪದ್ಮನಾಭತೀರ್ಥರನ್ನು ಪ್ರಾರ್ಥಿಸಲು ಅವನು ಬಂದಿದ್ದ.

"ಆಗಲಿ, ನಾವು ಇಲ್ಲಿಂದ ಹೊರಟು ಹೋಗುತ್ತೇವೆ ಅಮಾತ್ಯರೇ. ನಾವು ಎಲ್ಲಿದ್ದರೂ ರಾಜ್ಯದ ಯೋಗಕ್ಷೇಮವನ್ನೇ ಚಿಂತಿಸುತ್ತಿರುತ್ತೇವೆ. ನೀವು ಕುಮಾರನ ಜೀವವನ್ನು ಹೇಗಾದರೂ ಮಾಡಿ ಸಂರಕ್ಷಿಸಿರಿ. ಮುಂದೆ ದೊರೆಗೆ ವಿವೇಕೋದಯವಾಗಿ ಅವನು ಪಶ್ಚಾತ್ತಾಪಪಡುವನು. ಆಗ ಅವನನ್ನು ಕುರಿತು ಹಂಬಲಿಸುತ್ತಾನೆ. ಅವನನ್ನು ಆಗ ಬಹಿರಂಗಪಡಿಸಿರಿ."

"ನೀವಿಲ್ಲದೆ ನಾವು ಬದುಕುವುದಾದರೂ ಹೇಗೆ?"

"ನಮ್ಮ ಪ್ರತಿನಿಧಿಯಾಗಿ ನರಹರಿತೀರ್ಥರು ಇಲ್ಲಿರುತ್ತಾರೆ. ಅವರು ನಿಮಗೆ ಯೋಗ್ಯ ಮಾರ್ಗದರ್ಶನ ಮಾಡುತ್ತಾರೆ."

—ಎಂದು ಹೇಳಿ ಕಂಪಿಲ ರಾಜ್ಯದಿಂದ ಆನೆಗೊಂದಿ ರಾಜ್ಯಕ್ಕೆ ಬಂದರು. ಈ ಎರಡು ರಾಜ್ಯಗಳಿಗೂ ತುಂಗಭದ್ರ ನದಿಯೇ ಗಡಿಯಾಗಿತ್ತು.

ಕಂಪಿಲ ರಾಜ್ಯದಿಂದ ತಮ್ಮ ಪೂಜಾ ವಿಗ್ರಹಗಳೊಡನೆ ಎಡಬಲ ಸೇವೆಯ ಶಿಷ್ಯರೊಡನೆ ಮಾತ್ರ ಬಂದ ಪದ್ಮನಾಭತೀರ್ಥರನ್ನು ರಾಜ ಮರ್ಯಾದೆಯಿಂದ

ಸ್ವಾಗತಿಸಿ ಜಂಬುಕೇಶ್ವರರಾಯನು ಜಪತಪಾದ್ಯನುಷ್ಠಾನಕ್ಕೆ ಯೋಗ್ಯವಾದ ಮಠದಲ್ಲಿ ಅವರಿಗೆ ಬಿಡಾರ ಕಲ್ಪಿಸಿದನು.

ಪದ್ಮನಾಭತೀರ್ಥರು ಕಂಡ ಕನಸು ಸುಳ್ಳಾಗಲಿಲ್ಲ. ಮಹಮದ್‌ಬಿನ್ ತೊಗಲಖನು ಕಂಪಿಲ ರಾಜ್ಯದ ಮೇಲೆ ದಂಡೆತ್ತಿ ಬಂದನು. ಆಗ ಬೈಚಾಮಾತ್ಯನು ರಹಸ್ಯವಾಗಿರಿಸಿದ್ದ ರಾಮನಾಥನನ್ನು ಹೊರಗೆ ತಂದು, ಶತ್ರುಗಳನ್ನೂ, ಕಂಪಿಲರಾಯನನ್ನೂ ಆಶ್ಚರ್ಯಗೊಳಿಸಿದನು. ಕುಮಾರರಾಮನ ಮುಂದೆ ಮುಸಲ್ಮಾನರ ಸೈನ್ಯ ನಿಲ್ಲದೆ ಸೋತು ಓಡಿಹೋಯಿತು.

ಈ ವಿಜಯದ ಸುದ್ದಿ ಕೇಳಿ ಪದ್ಮನಾಭತೀರ್ಥರು ಬಹಳ ಸಂತೋಷಪಟ್ಟರು. ಈ ಶುಭವಾರ್ತೆಯನ್ನು ತಿಳಿಸಲು ನರಹರಿತೀರ್ಥರನ್ನು ಅವನು ಅವರ ಬಳಿಗೆ ಕಳುಹಿಸಿದ್ದನು.

ಆನೆಗೊಂದಿಯಲ್ಲಿ ಎಲ್ಲರೂ ಈ ವಿಜಯೋತ್ಸವವನ್ನು ಮಹಾವಿಜೃಂಭಣೆಯಿಂದ ಆಚರಿಸಿದರು.

ತನ್ನನ್ನು ಅಂತರಂಗದಲ್ಲಿ ಕಂಡ ಜಂಬುಕೇಶ್ವರರಾಯನನ್ನು "ರಾಜೋತ್ತಮರೇ, ನಾವು ಕಟ್ಟಿದ ಕನಸು ನನಸಾಗುವ ದಿನ ದೂರವಿಲ್ಲ. ನೀವು ಪುತ್ರಭಿಕ್ಷೆಗಾಗಿ ಪ್ರಾರ್ಥಿಸುತ್ತಿದ್ದಿರಿ. ಆ ಭಾಗ್ಯ ನಿಮಗೆ ಈ ಜನ್ಮದಲ್ಲಿ ಇಲ್ಲ. ಅದರೇನು ? ನಿಮ್ಮ ಪುತ್ರಿ ಚಕ್ರವರ್ತಿಯ ಕೈಹಿಡಿದು ಚಕ್ರವರ್ತಿನಿಯಾಗುತ್ತಾಳೆ. ನೀವು ಸಾಮ್ರಾಟರ ಬೀಗರಾಗುತ್ತೀರಿ !" ಎಂದು ಆಶೀರ್ವದಿಸಿದರು.

ಅನಂತರ ಅವರು ಹೀಗೆಂದರು.

"ನಮ್ಮ ಅವತಾರಕಾರ್ಯ ಮುಗಿಯುತ್ತಾ ಬಂದಿದೆ, ಜಂಬುಕೇಶ್ವರರಾಯರೇ, ನಾವು ಇಲ್ಲಿಂದ ತೆರಳಲು ಅನುಮತಿ ಕೊಡಿ. ನಾವು ಪವಿತ್ರವಾದ ತುಂಗಭದ್ರೆಯು ಎರಡು ಕವಲಾಗಿ ಒಡೆದು ನಿರ್ಮಿಸಿರುವ ಇಲ್ಲಿನ ರಮ್ಯ ನಡುಗಡ್ಡೆಯಲ್ಲಿ ಬೃಂದಾವನಸ್ಥರಾಗಬೇಕೆಂದು ಸಂಕಲ್ಪಿಸಿದ್ದೇವೆ. ಅದಕ್ಕೆ ಪೂರ್ವದಲ್ಲಿ ನರಹರಿತೀರ್ಥರಿಗೆ ಸರ್ವಜ್ಞಪೀಠದಲ್ಲಿ ಪಟ್ಟಾಭಿಷೇಕ ಮಾಡುವ ಸಮಾರಂಭವನ್ನಿಟ್ಟುಕೊಂಡಿದ್ದೇವೆ. ಅದಕ್ಕಾಗಿ ಸಿದ್ಧತೆಗಳು ನಡೆಯಲಿ"—ಎಂದು ಹೇಳಿದರು.

"ನೀವು ಇಲ್ಲಿಂದ ತೆರಳಿದ ಮೇಲೆ ನಮಗೆ ಯಾರು ದಿಕ್ಕು ? ನಮಗಾರು ಮಾರ್ಗದರ್ಶಕರು?"

"ನಮ್ಮ ನರಹರಿತೀರ್ಥರು ಇಲ್ಲೇ ನಿಂತು ನಿಮ್ಮ ಯೋಗಕ್ಷೇಮ ನೋಡಿಕೊಳ್ಳುತ್ತಾರೆ. ಮುಂದಿನ ದಿನಗಳು ನಿಮ್ಮ ಪಾಲಿಗೆ ಶುಭ ದಿನಗಳಾಗುತ್ತವೆ"